ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

ಪುಷ್ಪರತ್ನಸಂಖ್ಯಾ ೫–೭

# ಶ್ರೀದೇವೀಭಾಗವತಂ

## ಮಹಾಪುರಾಣಂ

(ಸಂಸ್ಕೃತಮೂಲ, ಕನ್ನಡದಲ್ಲಿ ಅರ್ಥಾನುವಾದ, ವಿವರಣೆಗಳೊಡನೆ.)

ಎಂಟನೆಯ ಸ್ಕಂಧ


ಅನುವಾದಕ

ಆಸ್ಥಾನ ಮಹಾವಿದ್ವಾನ್,

ಎಡತೊರೆ ಚಂದ್ರಶೇಖರಶಾಸ್ತ್ರೀ, ಎಂ.ಎ.,

ಸಾಹಿತ್ಯವಿದ್ವಾನ್



ಮೈಸೂರು

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

೧೯೪೪

# ಮುನ್ನುಡಿ

॥ ಶ್ರೀಗಣೇಶಶಾರದಾಗುರುಭ್ಯೋ ನಮಃ ॥

ಅಷ್ಟಾದಶಪುರಾಣಾನಾಂ ಕರ್ತಾ ಸತ್ಯವತೀಸುತಃ ।
ಸ್ತ್ರೀಶೂದ್ರದ್ವಿಜಬಂಧೂನಾಂ ತ್ರಯೀ ನ ಶ್ರುತಿಗೋಚರಾ ।
ಇತಿ ಭಾರತಮಾಖ್ಯಾನಂ ಕೃಪಯಾ ಮುನಿನಾ ಕೃತಂ ॥

ಎಂದು ಈ ದೇವೀಭಾಗವತದ ಮೊದಲನೆಯ ಸ್ಕಂಧದ ಮೂರನೆಯ ಅಧ್ಯಾಯದಲ್ಲಿ ಹೇಳಿರುವಂತೆ, ವಿಷ್ಣುಭಾಗವತದ ಮೊದಲನೆಯ ಸ್ಕಂಧದ ನಾಲ್ಕನೆಯ ಅಧ್ಯಾಯದಲ್ಲೂ ಹೇಳಿದೆ. ಇದರಿಂದ ವ್ಯಾಸರು ವೇದಗಳನ್ನು ವಿಂಗಡಿಸಿ, ವೇದಾಂತ ಸೂತ್ರಗಳನ್ನು ರಚಿಸಿದ್ದಲ್ಲದೆ, ಹದಿನೆಂಟು ಮಹಾಪುರಾಣಗಳನ್ನೂ, ಹದಿನೆಂಟು ಉಪ ಪುರಾಣಗಳನ್ನೂ, ಆ ಮೇಲೆ ಮಹಾಭಾರತವನ್ನೂ ಬಳಿಕ ವಿಷ್ಣುಭಾಗವತವನ್ನೂ, ರಚಿಸಿದರೆಂದು ಗೊತ್ತಾಗುತ್ತದೆ. ವೇದಗಳಲ್ಲಿ ಕಥೆಗಳನ್ನೂ, ನೀತಿಗಳನ್ನೂ, ಗಹನವಾದ ತತ್ವಗಳನ್ನೂ ಸಂಗ್ರಹವಾಗಿ, ಸೂಕ್ಷ್ಮವಾಗಿ ಸೂಚಿಸಿರುವುದರಿಂದ ಅವುಗಳನ್ನು ಸಾಮಾನ್ಯ ಜನರು ತಿಳಿದುಕೊಳ್ಳುವುದು ಸುಲಭಸಾಧ್ಯವಲ್ಲವೆಂಬುದನ್ನು ಅರಿತು, ದಯಾಳುವಾದ ವ್ಯಾಸಮಹರ್ಷಿಗಳು ನೀತಿ, ತತ್ವಗಳನ್ನು ಪಂಡಿತಪಾಮರರೆಲ್ಲರೂ ಸುಲಭವಾಗಿ ತಿಳಿಯುವಂತೆ ವಿಸ್ತರಿಸಿ ವಿವರಿಸಿದರು. ಈ ಅಂಶವನ್ನು ಆ ಮಹಾಪುರುಷನು

ಇತಿಹಾಸಪುರಾಣಾಭ್ಯಾಂ ವೇದಾರ್ಥಮುಪಬೃಂಹಯೇತ್ ।

ಎಂಬಂತೆ ಕಥೆಗಳಿಗೆ ವಿವರಗಳನ್ನು ಸೇರಿಸಿ, ನೀತಿಗಳಿಗೆ ಉದಾಹರಣೆ, ದೃಷ್ಟಾಂತಗಳನ್ನು ಕೊಟ್ಟು, ತತ್ವಜ್ಞಾನಕ್ಕೆ ಬೇಕಾದ ಸೋಪಾನಗಳನ್ನು ನಾನಾಬಗೆಗಳಿಂದ ಸ್ವಾಭಾವಿಕವಾದ ಕ್ರಮದೊಡನೆ ವಿವರಿಸಿ, ಪುರಾಣೇತಿಹಾಸಗಳಲ್ಲಿ ತಿಳಿಯಹೇಳಿರುವುದನ್ನು ನೋಡಿದರೆ ನಾವೂ ಅದನ್ನು ಗೊತ್ತುಮಾಡಿಕೊಳ್ಳಬಹುದು. ಆದುದರಿಂದ ಈ ಮಹಾನುಭಾವನು

ಕರ್ಮಣ್ಯೇಕಂ ವಚಸ್ಯೇಕಂ ಮನಸ್ಯೇಕಂ ಮಹಾತ್ಮನಾಂ ।
ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಂ ॥

ಎಂದು ಮುಂತಾಗಿ ಮಾಡಿರುವ ಉಪದೇಶಗಳನ್ನು ತಾನೂ ಆಚರಿಸಿ ನಮ್ಮೆಲ್ಲರಿಗೂ ಪರಮಾಚಾರ್ಯನಾಗಿದಾನೆಂದರೆ ಸ್ವಲ್ಪವೂ ಅತಿಶಯೋಕ್ತಿಯಾಗಲಾರದು.

ಈ ರೀತಿಯಾಗಿರುವ ಇವರ ಈ ಮಹಾಪ್ರಯತ್ನಕ್ಕೆ ಕಾರಣವೇನೆಂದು ವಿಮರ್ಶಿಸಿದರೆ ಇದಕ್ಕೆ ಕೆಲವು ಕಾರಣಗಳೂ ಇವೆ ಎಂಬುದು ಗೊತ್ತಾಗುತ್ತದೆ. ಅದು ಧಾರ್ಮಿಕಮನೋವೃತ್ತಿಯಾಗಿದೆ, ಎಂಬುದು ಗಮನಾರ್ಹವಾಗಿದೆ. ಮೊದಲ ನೆಯದಾಗಿ, ತಿಳಿವಳಿಕೆಯನ್ನು ಪಡೆಯಲೂ, ಅದನ್ನೂ ಹೆಚ್ಚಿಸಿಕೊಳ್ಳಲೂ, ಮತ್ತು ಅದನ್ನು ಇತರರಲ್ಲೂ ತಿಳಿಸಲೂ, ಬಯಸುವುದು ಮಾನವನ ಹುಟ್ಟುಗುಣವಾಗಿದೆ. ಆದುದರಿಂದಲೇ ಈ ಕುತೂಹಲವು ಮಕ್ಕಳಲ್ಲೂ ಕಂಡುಬರುತ್ತಿದೆ. ಮಕ್ಕಳು ತಮಗಿಂತಲೂ ದೊಡ್ಡವರನ್ನು ಕುರಿತು, 'ಇದು ಏನು? ಅದು ಏಕೆ? ಇದು ಇದು ಹೇಗೆ?' ಎಂದು ಮುಂತಾಗಿ ಸ್ವರೂಪ, ಕಾರಣ, ಫಲ, ಉದ್ದೇಶ, ಪ್ರಕಾರಗಳ ವಿಷಯವಾಗಿ ಪ್ರಶ್ನೆಗಳನ್ನು ಕೇಳುತ್ತಲೇ ಇರುತ್ತವೆ. ಹೊಸ ಹೊಸ ವಿಷಯಗಳನ್ನು ಕೇಳಿ ತಿಳಿದುಕೊಳ್ಳಬೇಕೆಂದು ಯಾರೂ ಮಕ್ಕಳಿಗೆ ಹೇಳಿಕೊಟ್ಟಿರುವುದಿಲ್ಲ. ಆದರೂ ಅವರ ವಿಷಯದಲ್ಲಿ ಹಿರಿಯರು ಅನೇಕ ಸಂದರ್ಭಗಳಲ್ಲಿ ಔದಾಸೀನ್ಯವನ್ನು ತೋರು ವುದುಂಟು. ಅವರ ಪ್ರಶ್ನೆಗಳು ಹೆಚ್ಚಾದಾಗ ಒಂದೊಂದು ವೇಳೆ ಬೇಸರಪಡುವುದೂ ಉಂಟು. ಅನೇಕ ಸಂದರ್ಭಗಳಲ್ಲಿ ಆ ಪ್ರಶ್ನೆಗಳಿಗೆ ಸರಿಯಾದ ಉತ್ತರವನ್ನು ತಕ್ಕ ರೀತಿಯಲ್ಲಿ ಹೇಳಲು ಆಗದೆ ಹೋದಾಗ ನಮ್ಮ ಅಶಕ್ತಿ, ಅಜ್ಞಾನ, ನಾಚಿಕೆಗಳನ್ನು ಮುಚ್ಚಿಕೊಳ್ಳಲು ಅವರನ್ನು ಹಿರಿಯರಾದವರೂ ಬೆದರಿಸುವುದೂ ಉಂಟು. ಆದರೆ ಹಾಗೆ ಮಾಡದೆ ತಿಳಿಯಹೇಳುವವರನ್ನು ಪಡೆದರಂತು ಆ ಮಕ್ಕಳ ಪ್ರಶ್ನೆಗಳಿಗೂ, ಸಂತೋಷಕ್ಕೂ ಪಾರವೇ ಇರುವುದಿಲ್ಲವು!

ಇದರಂತೆಯೇ ತಿಳಿವಳಿಕೆಯನ್ನು ಹೆಚ್ಚಿಸಿಕೊಳ್ಳುವುದರಲ್ಲೂ, ಅದನ್ನು ಇತರ ರಲ್ಲಿ ಹರಡುವುದರಲ್ಲೂ, ಮಾನವರಿಗೆ ಆದರವು ಸಹಜವಾಗಿರುತ್ತದೆ. ಏಕೆಂದರೆ ಇದನ್ನೂ ನಾವು ಮಕ್ಕಳಲ್ಲಿ ಕಾಣಬಹುದು. ಅವರು ತಾವು ಪಡೆದಷ್ಟು ತಿಳಿವಳಿಕೆ ಯಿಂದ ತೃಪ್ತರಾಗಿ ಸುಮ್ಮನಿರದೆ, ಬೇರೆ ಬೇರೆ ಪ್ರಶ್ನೆಗಳನ್ನು ಮುಂದುವರಿಯಿಸು ತ್ತಲೇ ಇರುತ್ತವೆ. ಅಲ್ಲದೆ ಅವರು ತಮಗೆ ತಿಳಿದುದನ್ನು ತಮ್ಮ ಜತೆಗಾರರಿಗೆ, ಯಾರಿಗೂ ಹೇಳಬೇಡವೆಂದು ಒಂದೊಂದುವೇಳೆ ಹಿರಿಯರು ಅವರಿಗೆ ಹೇಳಿದ್ದರೂ ಅದನ್ನು ಲಕ್ಷಿಸದೆ, ತಿಳಿಸಿಬಿಡುತ್ತಾರೆ! ತಿಳಿವಳಿಕೆಯಿಂದ ತುಂಬಿರುವ ಗುರುವು, ಸ್ತನ್ಯವು ತುಂಬಿರುವ ತಾಯಿಯು ಮಗುವಿಗೆ ಹಾಲುಕೊಟ್ಟು, ಹಗುರ, ಸಂತೋಷ,

ಧನ್ಯತೆಗಳನ್ನು ಪಡೆಯುತ್ತಾ ಆನಂದಿಸುವಂತೆ, ಶಿಷ್ಯನಿಗೆ ಉಪದೇಶಮಾಡಿ, ಅಥವಾ ಗ್ರಂಥಗಳನ್ನು ಬರೆದು, ಕೃತಕೃತ್ಯನಾದಂತೆ, ತನ್ನ ಕರ್ತವ್ಯ ಧರ್ಮವನ್ನು ತಾನು ನೆರವೇರಿಸಿದಂತೆ, ಆನಂದಿಸುತ್ತಾನೆ. ಈ ತತ್ವಜಿಜ್ಞಾಸೆಯು, ಈ ಜ್ಞಾನಪ್ರಚಾರದ ಕಾರ್ಯದಲ್ಲಿ ಆದರದ, ಫಲವಾಗಿ ಶಿಷ್ಯಪ್ರವಚನೆಯೂ, ಗ್ರಂಥರಚನೆಯೂ, ರೂಢಿಗೆ ಬಂದಿವೆ. ಎಂದರೆ ತಪ್ಪಾಗಲಾರದು.

ಎರಡನೆಯದಾಗಿ ಮಾನವನು ಇಹಜೀವನದಲ್ಲಿ ತನ್ನ ಪೂರ್ವಸಂಸ್ಕಾರ, ಸನ್ನಿವೇಶ ಮತ್ತು ವಯಸ್ಸುಗಳಿಗೆ ಅನುಗುಣವಾಗಿ ನಾನಾಬಗೆಯ ಅನುಭವಗಳನ್ನು ಪಡೆಯುತ್ತಿರುತ್ತಾನೆ. ತನ್ನ ಐದು ಜ್ಞಾನೇಂದ್ರಿಯಗಳ ಮೂಲಕವಾಗಿ ಈ ಬಾಹ್ಯ ಪ್ರಪಂಚದಲ್ಲಿನ ಐದುಬಗೆಯ ವಿಷಯಗಳನ್ನು ತಿಳಿಯುತ್ತಿದಾನೆ. ಬದಲಾಯಿಸುತ್ತಿರುವ ಈ ಪ್ರಪಂಚದ ವಾಸ್ತವಸ್ವರೂಪವೇನಿರಬಹುದು ? ಅದಕ್ಕೆ ಮೂಲಭೂತವಾದ ತತ್ವವೇನಾದರೂ ಇದೆಯೇ ? ಇದ್ದರೆ ಆ ತತ್ವದ ಸ್ವಭಾವವೇನು? ಎಂದು ಮುಂತಾಗಿ ವಿಮರ್ಶಿಸುತ್ತಾನೆ. ತತ್ವಗಳನ್ನು ಹುಡುಕಿ ತಿಳಿಯಬಯಸುವುದು ಮಾನವನ ಹುಟ್ಟುಗುಣವಾಗಿದೆ. ಏಕೆಂದರೆ ಅದಕ್ಕೆ ಬೇರೆ ಕಾರಣವಾಗಲೀ ಫಲವಾಗಲೀ ಯಾವುದೂ ಕಂಡುಬರುತ್ತಿಲ್ಲವು. ಈ ಅಂಶವನ್ನು ಜಿಜ್ಞಾಸುಗಳಾದ ವೈದಿಕ ಋಷಿಗಳು ಮಾಡಿರುವ ಈ ಪ್ರಾರ್ಥನೆಯಲ್ಲಿ ಮನಗಾಣಬಹುದು.

ತಮಸೋ ಮಾ ಜ್ಯೋತಿರ್ಗಮಯ ; ಮೃತ್ಯೋರ್ಮಾಽಮೃ
ತಂ ಗಮಯ ; ಅಸತೋ ಮಾ ಸದ್ಗಮಯ.

ಇದರ ಅರ್ಥವು ಹೀಗಿದೆ. ಅಜ್ಞಾನವೆಂಬ ಕತ್ತಲೆಯಿಂದ ನನ್ನನ್ನು ತಿಳಿವಳಿಕೆಯ, ಅಪರೋಕ್ಷಾನುಭವದ, ಬೆಳಕಿಗೆ ತಲಪಿಸು. ಬದಲಾಯಿಸುತ್ತಾ ನಾಶವಾಗಬಹುದಾದ ಸ್ಥಿತಿಯಿಂದ ಮರಣವಿಲ್ಲದೆ ಶಾಶ್ವತವಾದ ಸ್ಥಿತಿಗೆ ನನ್ನನ್ನು ಪಡೆಯಿಸು. ವಿಕಾರಗಳನ್ನು ಪಡೆಯುತ್ತಾ, ನಿತ್ಯವಲ್ಲದ, ಅಸತ್ತಾದ ಕಾರ್ಯಪರಿಣಾಮುಗಳ ಅವಸ್ಥೆಯಿಂದ ಸದ್ರೂಪವಾದ, ಎಲ್ಲಕ್ಕೂ ಕಾರಣವಾದ, ಅಧಿಷ್ಠಾನವಾದ, ತ್ರಿಕಾಲಾಬಾಧ್ಯವಾದ ತತ್ವಕ್ಕೆ ನನ್ನನ್ನು ನಡೆಯಿಸು. ಎಂದು ಚಿತ್ಪ್ರಕಾಶಸ್ವರೂಪನಾದ ಪರಮಾತ್ಮನನ್ನು ಜಿಜ್ಞಾಸುವು ಯಾವಾಗಲೂ ಪ್ರಾರ್ಥಿಸುತ್ತಿರುತ್ತಾನೆ. ಮಾನವರಲ್ಲಿ ಸರ್ವಸಮಾನವಾಗಿರುವ, ಸ್ವಾಭಾವಿಕವೂ ಅನಿವಾರ್ಯವೂ ಆದ, ಈ ಮನೋವೃತ್ತಿಯನ್ನು ವಿವೇಕಿಗಳಾದವರು ಸಾಧ್ಯವಾದಷ್ಟು ಮುಂದುವರಿಯಿಸುತ್ತಿರಬೇಕು. ಈ

ಮನೋಭಾವವನ್ನು ಯಾರೂ ಯಾವಾಗಲೂ ಉದಾಸೀನವಾಗಿ ಬೆಳೆಯಿಸದಿರಬಾರದು. ಅದನ್ನು ತಡೆದು ಅದುಮಲೂ ಬಾರದು. ಈ ವೃತ್ತಿಯನ್ನೇ 'Inner urge' ಎಂದು ವೈಜ್ಞಾನಿಕರೂ, ದಾರ್ಶನಿಕರೂ(Scientists and Philosophers) ಹೇಳುತ್ತಾರೆ. ಇದನ್ನು ಪೋಷಿಸದೆ ಹೋದರೆ ಮಾನವನ ಮನಸ್ಸು, ಉಪಯೋಗಿಸದಿರುವ ಉಕ್ಕಿನ ಕತ್ತಿಯು ತುಕ್ಕು ಹಿಡಿದು ತನ್ನ ಶಕ್ತಿಯನ್ನೇ ಕಳೆದುಕೊಳ್ಳುವಂತೆ, ದುರ್ಬಲವಾಗುತ್ತಾ ಬರುತ್ತದೆ. ಕಡೆಗೆ ಅದರ ವಿವೇಚನಶಕ್ತಿಯೇ ಲುಪ್ತವಾಗಿಹೋಗುತ್ತದೆ. ಮಾನವಜನ್ಮದ ಅಮೂಲ್ಯವಾದ ಈ ಶಕ್ತಿವಿಶೇಷವನ್ನೂ, ಪರಿಮಿತವಾಗಿರುವ ಆಯುಸ್ಸಿನ ಕಾಲವನ್ನೂ ವ್ಯರ್ಥಮಾಡಿಕೊಳ್ಳುವುದರಿಂದ ತುಂಬ ನಷ್ಟವಾಗುತ್ತದೆಂದು

ಇಹ ಚೇದವೇದೀದಥ ಸತ್ಯಮಸ್ತಿ ; ನ ಚೇದಿಹಾವೇದೀನ್ಮಹತೀ ವಿನಷ್ಟಿಃ ।

ಎಂದು ಕೇನೋಪನಿಷತ್ತು ಎಲ್ಲರನ್ನೂ ಎಚ್ಚರಿಸುತ್ತಿದೆ ಎಂಬುದನ್ನು ಗಮನಿಸಬೇಕು.

ಮೂರನೆಯದಾಗಿ, ಮಾನವರೆಲ್ಲರೂ, ಅವರಲ್ಲೂ ವಿಶೇಷವಾಗಿ ಬ್ರಾಹ್ಮಣರು, ಹುಟ್ಟುತ್ತಿರುವ ಹಾಗೆಯೇ ಮೂರುಬಗೆಯ ಸಾಲಗಳನ್ನು ಹೊತ್ತುಕೊಂಡೇ ಬರ್‍ತ್ತಾರೆ. ಎಂದು ಶ್ರುತಿಯು ಹೇಳುತ್ತಿದೆ.

ಜಾಯಮಾನೋ ವೈ ಬ್ರಾಹ್ಮಣಃ ತ್ರಿಭಿಃ ಋಣವಾ ಜಾಯತೇ ;
ಪ್ರಜಯಾ ಪಿತೃಭ್ಯಃ ; ಬ್ರಹ್ಮಚರ್ಯೇಣ ಋಷಿಭ್ಯಃ ; ಯಜ್ಞೇನ
ದೇವೇಭ್ಯಃ ॥

ಎಂದರೆ ಮನುಷ್ಯನು, ಅದರಲ್ಲೂ ಬ್ರಾಹ್ಮಣನು ವಿಶೇಷವಾಗಿ, ಹುಟ್ಟುವಾಗಲೇ ಮೂರು ಸಾಲಗಳನ್ನು ಹೊತ್ತುಕೊಂಡೇ ಹುಟ್ಟುತ್ತಾನೆ. ಮೊದಲನೆಯದಾಗಿ ನಮ್ಮ ತಂದೆತಾಯಿಯರು ನಮ್ಮನ್ನು ಹೆತ್ತು, ಸಾಕಿ, ಈ ದೇಹವನ್ನು ಕೊಟ್ಟು ಉಪಕರಿಸಿರುತ್ತಾರೆ. ಎರಡನೆಯದಾಗಿ ಗುರುಹಿರಿಯರಿಂದಲೂ, ಗ್ರಂಥಗಳಿಂದಲೂ ತಿಳಿವಳಿಕೆಯನ್ನು ಪಡೆದು ಹೆಚ್ಚಿಸಿಕೊಳ್ಳುತ್ತಾ ಮುಂದುವರಿಯುತ್ತಿರುತ್ತೇವೆ. ಮೂರನೆಯದಾಗಿ ಹಾಲು, ಸಸ್ಯ, ದವಸ ಮುಂತಾದ ಆಹಾರಗಳಿಂದ ಬೆಳೆಯುತ್ತೇವೆ. ನೆಲ, ನೀರು, ಬೆಳಕು. ಶಾಖ, ಗಾಳಿ, ಆಕಾಶಗಳಿಲ್ಲದೆ ಬದುಕಲಾರೆವು. ಹೀಗೆ ತಂದ

ತಾಯಿಯರು, ಗುರುಹಿರಿಯರು, ಇತರ ಜನರು, ಪ್ರಾಣಿಗಳು, ಸಸ್ಯಗಳು ಮುಂತಾದ ಪಂಚಭೂತಗಳಿಂದ ನಾವು ಉಪಕಾರವನ್ನು ಪಡೆದಿರುತ್ತೇವೆ. ಇದರಂತೆಯೇ ಸಮಾಜವೂ, ಸರ್ಕಾರವೂ ಶಾಂತಿ ನೆಮ್ಮದಿಗಳನ್ನು ಕಾಪಾಡುತ್ತಾ ನಮ್ಮ ಸುಖಕ್ಕೂ ಪ್ರಗತಿಗೂ ಸಹಾಯಕಕಾರಣವಾಗಿವೆ. ಆದುದರಿಂದ

ಕೃತೇ ಚ ಪ್ರತಿಕರ್ತವ್ಯಂ ಏಷ ಧರ್ಮಸ್ಸನಾತನಃ ।
ಋಣಾನಿ ತ್ರೀಣ್ಯಪಾಕೃತ್ಯ ಮನೋ ಮೋಕ್ಷೇ ನಿವೇಶಯೇತ್ ॥

ಎಂದು ಮುಂತಾದ ನೀತಿತತ್ತ್ವವನ್ನು ಅನುಸರಿಸಿ ಪ್ರತ್ಯುಪಕಾರವನ್ನು ಮಾಡಿ, ಈ ಸಾಲಗಳನ್ನು ತೀರಿಸಿ, ಸ್ವಧರ್ಮನಿಷ್ಠರಾಗಿದ್ದು, ನಮ್ಮ ಜನ್ಮವನ್ನು, ಈ ಕರ್ಮಭೂಮಿಯಲ್ಲಿ ಅವತರಿಸಿರುವ ಈ ಕರ್ಮ ಶರೀರವನ್ನು, ಸೇವೆಯಲ್ಲಿ ಸವೆಯಿಸಿ, ಸಫಲವಾಗುವಂತೆ ಮಾಡಬೇಕು. ಹಾಗಾದರೇ ನಮ್ಮ ಬಾಳು ಸಾರ್ಥಕವಾಗುತ್ತದೆ.

ಈ ಸಾಲಗಳಲ್ಲಿ ಎರಡನೆಯದಾದ ಋಷಿಋಣದ ನಿರ್ಯಾತನೆಗಾಗಿ, ಅಧ್ಯಾಪನ, ಪಾಠಪ್ರವಚನ, ಗ್ರಂಥರಚನ, ಪ್ರಚಾರಣ, ಪುರಾಣಪಠನ, ಶ್ರವಣ, ವ್ಯಾಖ್ಯಾನಗಳು ಏರ್ಪಟ್ಟವೆ. ಇವುಗಳಿಂದ ಮಾನವನ ನಡೆವಳಿಯು ಉತ್ತಮಗೊಳ್ಳುತ್ತದೆ. ಅವನ ಸಂಸ್ಕೃತಿಯ ಮಟ್ಟವು ಮೇಲ್ಪಡುತ್ತದೆ. ಆದರಿಂದ ಪುಣ್ಯ ಪುರುಷಾರ್ಥಗಳು ದೊರೆಯುತ್ತವೆ. ಎಂಬ ಅಂಶವನ್ನು ಪುರಾಣಗಳು, ಅವುಗಳಲ್ಲೂ ವಿಶೇಷವಾಗಿ ಈ ದೇವೀಭಾಗವತಮಹಾಪುರಾಣವು, ಒಳ್ಳೆಯ ಮಿತ್ರನಂತೆ ತಿಳಿಯಹೇಳುತ್ತಿದೆ. ಸಾಂಖ್ಯದರ್ಶನದಲ್ಲಿ ಯಾವುದನ್ನು ಅವ್ಯಾಕೃತ ಅಥವಾ ಪ್ರಕೃತಿ ಎಂದು ನಿರೂಪಿಸಿದೆಯೋ, ವೇದಾಂತದರ್ಶನದಲ್ಲಿ ಯಾವುದನ್ನು ಮಾಯೆಯೆಂದು ವಿವರಿಸಿದೆಯೋ, ಅದನ್ನೇ ಈ ಪುರಾಣದಲ್ಲಿ, ವಿವರಗಳಲ್ಲಿ ಸ್ವಲ್ಪ ಭೇದದೊಡನೆ, ಪರಶಿವನ ಪರಾಶಕ್ತಿ, ಅಥವಾ ದೇವೀ, ಎಂದು ವರ್ಣಿಸಿದೆ. ಧರ್ಮಸಂಸ್ಥಾಪನೆಗಾಗಿ ದೇವಿಯು ಮಾಡಿದ ಅವತಾರಗಳನ್ನು ವರ್ಣಿಸಿ, ದೇವೀ ಪೂಜಾಪ್ರಕಾರಗಳನ್ನು ಹೇಳಿ, ದೇವೀತತ್ತ್ವವನ್ನು ಧ್ಯಾನಕ್ಕಾಗಿ ದೇವೀಗೀತೆಯಲ್ಲಿ ನಿರೂಪಿಸಿ, ಈ ಸ್ಕಂಧದಲ್ಲಿ ಪುರಾಣಲಕ್ಷಣವಾದ ಮನ್ವಂತರಗಳ ಸ್ವರೂಪವನ್ನು ವಿವರಿಸುತ್ತಾ, ಜ್ಯೋತಿರ್ಮಂಡಲದಲ್ಲಿ ಭೂಗೋಳದ ಸ್ಥಿತಿಯನ್ನೂ, ಅದರ ಲೋಕಗಳಲ್ಲಿ ದೇವೀಸ್ಥಾನಗಳನ್ನು ತಿಳಿಯಹೇಳಿದೆ. ಹೀಗೆ ದೇವೀಆರಾಧನೆಯ ಧರ್ಮವನ್ನು ಅನುಷ್ಠಾನಮಾಡಿ ಐಹಿಕಾಮುಷ್ಮಿಕಗಳಾದ ಅಭ್ಯುದಯಗಳನ್ನೂ, ಕಡೆಗೆ ನಿಷ್ಕಾಮಕರ್ಮಾನುಷ್ಠಾನ, ಚಿತ್ತಶುದ್ಧಿ, ಜ್ಞಾನಪ್ರಾಪ್ತಿ,

ಕ್ರಮದಿಂದ ಮೋಕ್ಷವನ್ನೂ ಪಡೆಯಬಹುದೆಂದು ವಿವರಿಸಿದೆ. ಮಹಾಭಾರತದಲ್ಲಿನ ಭಗವದ್ಗೀತೆಯಲ್ಲೂ ಶ್ರೀ ಕೃಷ್ಣಪರಮಾತ್ಮನೂ ಈ ಅಂಶವನ್ನು

ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ ।

ಎಂದು ಹೇಳಿ, ಎಲ್ಲರಿಗೂ ಸ್ವಧರ್ಮಾನುಷ್ಠಾನದಿಂದಲೇ ಇಷ್ಟಾರ್ಥಸಿದ್ಧಿಯಾಗುವುದೆಂದು ತಿಳಿಯಹೇಳಿರುತ್ತಾನೆ. ಈ ಪುರಾಣದಲ್ಲಿ ಏಳನೆಯ ಸ್ಕಂಧದಲ್ಲಿರುವ ದೇವೀಗೀತೆಯಲ್ಲೂ ಹೀಗೆಯೇ ವಿವರಿಸಿದೆ. ಇವೆಲ್ಲವೂ ಧಾರ್ಮಿಕಮನೋವೃತ್ತಿಯ ಸುಫಲಗಳೂ, ಸತ್ಪರಿಣಾಮಗಳೂ, ಆಗಿರುವುದರಿಂದ, ಈ ನಡೆವಳಿಕೆಯು ಎಲ್ಲ ಜನರಿಗೂ ತೃಪ್ತಿ ಸಮಾಧಾನಗಳನ್ನು ಕೊಟ್ಟು, ಜಗತ್ತಿನಲ್ಲಿ ಶಾಂತಿಸಮಾಧಾನಗಳನ್ನು ನೆಲೆಗೊಳಿಸಲು ಸಹಾಯಮಾಡುವುದರಿಂದ, ಈ ಧರ್ಮದ ಲಕ್ಷಣವನ್ನು ಹೀಗೆ ವರ್ಣಿಸಿದೆ.

ಧಾರಣಾದ್ಧರ್ಮ ಇತ್ಯಾಹುಃ ಧರ್ಮೋ ಧಾರಯತಿ ಪ್ರಜಾಃ ।

ಎಂದರೆ, ಜನರೆಲ್ಲರನ್ನೂ ಧರಿಸಿ, ಶಾಂತಿ, ನೆಮ್ಮದಿ, ಸಹಕಾರ, ಸಹಾನುಭೂತಿಗಳಿಂದ ಜೀವಿಸುವಂತೆ ಮಾಡುತ್ತಾ ಕಾಪಾಡಬಲ್ಲ ನೀತಿತತ್ವಕ್ಕೇ ಧರ್ಮವೆಂದು ಹೆಸರು. ಇಹಜೀವನದಲ್ಲಿ ಇಂತಹ ನೀತಿತತ್ವದಿಂದಲೇ ಈಗಲೂ ಜಗತ್ಕಲ್ಯಾಣವನ್ನು ಸಾಧಿಸಬೇಕಾಗಿದೆ. ಈ ನೀತಿಯ ಆಚರಣೆಯನ್ನು ಜನರೆಲ್ಲರಿಗೂ ಒಲಿದುಬರುವಂತೆ ಈ ಪುರಾಣವೂ ಮಿತ್ರನಂತೆ ಮಾಡುತ್ತದೆ. ಈ ಧಾರ್ಮಿಕ ತಿಳಿವಳಿಕೆಯಿಂದಲೇ, ಈ ಧರ್ಮಾನುಷ್ಠಾನದಿಂದಲೇ, ಜಗತ್ತಿನಲ್ಲಿ ಕಲ್ಯಾಣಸಾಧನೆಯಾಗಬೇಕಾಗಿರುವುದರಿಂದ, ಇದರ ಪ್ರಕಟನ ಪ್ರಚಾರಣಾರೂಪವಾದ ಧರ್ಮಕಾರ್ಯವನ್ನು ನಮ್ಮನ್ನಾಳುತ್ತಿರುವ ಧರ್ಮಪ್ರಭುಗಳಾದ **ಶ್ರೀಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಮಹಾಸ್ವಾಮಿಯವರೂ** ಮುಂದಾಲೋಚನೆಯಿಂದಲೂ, ಔದಾರ್ಯದಿಂದಲೂ ನೆರವೇರಿಸುತ್ತಿರುವುದು ಕನ್ನಡಿಗರೆಲ್ಲರ, ಅಷ್ಟೇ ಏಕೆ, ಇಡಿಯ ಜಗತ್ತಿನ ಭಾಗ್ಯವಿಶೇಷವಾಗಿದೆ. ಅವರ ಅಪ್ಪಣೆಯಂತೆ ಈ ಗ್ರಂಥವನ್ನು ಪ್ರಕಟಿಸಲಾಗಿದೆ. ಈ ಧಾರ್ಮಿಕ ತಿಳಿವಳಿಕೆಯ ಪ್ರಚಾರಕಾರ್ಯವು ಯಾವಾಗಲೂ ನೆರವೇರುತ್ತಿರುವಂತಾಗಲೆಂದೂ, ಅದರಿಂದ ಜನರಿಗೆ ಶಾಂತಿಸುಖಗಳು ಶಾಶ್ವತವಾಗಿ ದೊರೆಯುವಂತಾಗಲೆಂದೂ ಪರಾಶಕ್ತಿ, ಭುವನೇಶ್ವರೀ, ಗೌರೀ, ದುರ್ಗಾ, ಪರಮೇಶ್ವರೀ, ಚಾಮುಂಡೇ

ಶ್ವರೀ, ರಾಜರಾಜೇಶ್ವರೀ, ತ್ರಿಪುರಸುಂದರೀ, ಎಂಬ ನಾಮಾಂತರಗಳಿಂದ ಪ್ರಸಿದ್ಧಳಾದ ಲಲಿತಾದೇವಿಯನ್ನು ಪ್ರಾರ್ಥಿಸುತ್ತೇನೆ.

ಮೈಸೂರು
ತಾರಣಸಂವತ್ಸರದ
ಭಾದ್ರಪದ ಶುಕ್ಲ ದ್ವಿತೀಯಾ
20—8-—1944.

ಎಡತೊರೆ ದೇವಯ್ಯದೀಕ್ಷಿತರ ಮಗ
ಚಂದ್ರಶೇಖರಶಾಸ್ತ್ರೀ.

# ಶ್ರೀ ದೇವೀಭಾಗವತಮಹಾಪುರಾಣದಲ್ಲಿ ಎಂಟನೆಯ ಸ್ಕಂಧದಲ್ಲಿನ ವಿಷಯಾನುಕ್ರಮಣಿಕೆ

---

| ಅಧ್ಯಾಯ | ವಿಷಯ | ಪುಟಸಂಖ್ಯಾ |
|---|---|---|

| ಅಧ್ಯಾಯ | ವಿಷಯ | ಪುಟಸಂಖ್ಯೆ |
|---|---|---|

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಅಷ್ಟಮಸ್ಕಂಧೇ

### || ಪ್ರಥಮೋಽಧ್ಯಾಯಃ ||

### ಮೊದಲನೆಯ ಅಧ್ಯಾಯವು

|| ಜನಮೇಜಯ ಉವಾಚ ||

**ಸೂರ್ಯಚಂದ್ರಾನ್ವಯೋತ್ಥಾನಾಂ ನೃಪಾಣಾಂ ಸತ್ಕಥಾಶ್ರಿತಂ ।**
**ಚರಿತಂ ಭವತಾ ಪ್ರೋಕ್ತಂ ಶ್ರುತಂ ತದಮೃತಾಸ್ಪದಂ ॥೧॥**

---

|| ಶ್ರೀಗಣೇಶಶಾರದಾಗುರುಭ್ಯೋನಮಃ ||

ಮಾತಃ ಪುತ್ರೇಽಪಿ ದುಷ್ಟೇ ತ್ಯಜತಿ ನ ಜನನೀ ತಂ ಸುತಂ ದೋಷದೃಷ್ಟ್ಯಾ
ತದ್ವತ್ತಾತೋಽಪಿ ಲೋಕೇ ನ ಭವತಿ ಕುಪಿತೋಽಜ್ಞಾನದೋಷೈಸ್ಸುತಸ್ಯ ।
ಇತ್ಯಾಲೋಚ್ಯೈವ ಚಾಪಂ ಭವಜಲಧಿಗತೋಽನಾದ್ಯನಂತಾಘ ಭೀರುಃ
ಮಾತಾ ಶಕ್ತಿಶ್ಚ ತಾತಶ್ಶಿವ ಇತಿ ಪಿತರೌ ರಕ್ಷಣಾಯಾಶ್ರಯೇ ವಾಂ ॥

ಈ ದೇವೀಭಾಗವತಮಹಾಪುರಾಣದಲ್ಲಿಯೂ, ಉಪನಿಷತ್ತುಗಳಲ್ಲಿ ಹೇಗೋ ಹಾಗೆ, ವೇದಾಂತತತ್ವವನ್ನೂ ಕಥೆಯೊಡನೆ ಹುದುಗಿಸಿ ಬೋಧಿಸಿರುತ್ತದೆ. ಈ ಚರಾಚರಪ್ರಪಂಚದಲ್ಲಿ ಅಡಗಿರುವ, ಅದಕ್ಕೆ ಅಧಿಷ್ಠಾನವಾದ ತತ್ವವು ಒಂದೇ ಆಗಿದೆ. ಆ ಏಕತತ್ವವನ್ನು ಬಾಹ್ಯಪ್ರಪಂಚದ ಪರಿಶೀಲನೆಯಿಂದಲೂ, ಆಂತರಪ್ರಕೃತಿಯ ಪರಿಶೀಲನೆಯಿಂದಲೂ ಮನಗಾಣಬಹುದೆಂಬ ಅಂಶವನ್ನು "ಸೌಂದರ್ಯೋದ್ದೇಶ . . ." ಎಂದೂ, " ಸಚ್ಚಿದ್ಬ್ರಹ್ಮೈಕತತ್ವೇ . . ." ಎಂದೂ ಮೊದಲಾಗುವ, ನಾಲ್ಕನೆಯ ಮತ್ತು ಆರನೆಯ ಸ್ಕಂಧಗಳ, ಮಂಗಳಪದ್ಯಗಳಲ್ಲಿ ವಿವರಿಸಿರುತ್ತೇನೆ. ಈ ಏಕತತ್ವವನ್ನು ಎಲ್ಲರೂ ತಕ್ಕ ಯೋಗ್ಯತೆಯನ್ನು ಸಂಪಾದಿಸಿಕೊಂಡು ಸಾಕ್ಷಾತ್ಕರಿಸಿಕೊಳ್ಳಬಹುದು. ಈ ಸಾಧನೆಗೆ ಮೂರು ಮಾರ್ಗಗಳಿವೆ. ಕರ್ಮಮಾರ್ಗ, ಭಕ್ತಿಮಾರ್ಗ, ಧ್ಯಾನಮಾರ್ಗ ಎಂಬ ಈ ಮೂರೂ ಜ್ಞಾನದಲ್ಲಿ ಕಡೆಗೆ ಪರಿಣಮಿಸುತ್ತವೆ ಎಂಬ

ಅಂಶವನ್ನು ಏಳನೆಯ ಸ್ಕಂಧದಲ್ಲಿ ವರ್ಣಿಸಿದೆ. ಇವುಗಳ ಪೈಕಿ ಕರ್ಮಮಾರ್ಗವನ್ನು "ಕಾಮ್ಯಾನಾಂ ಕರ್ಮಣಾಂ ಯೈಃ . . ." ಎಂದು ಮೊದಲಾಗುವ, ಏಳನೆಯ ಸ್ಕಂಧದ ಮಂಗಳಪದ್ಯದಲ್ಲಿ ಸಂಗ್ರಹರೂಪದಲ್ಲಿ ವಿವರಿಸಿರುತ್ತೇನೆ. ಈಗ ಈ ಮಂಗಳ ಪದ್ಯದಲ್ಲಿ ಭಕ್ತಿಮಾರ್ಗವನ್ನು ಸಂಕ್ಷೇಪದ ರೀತಿಯಲ್ಲಿ ವಿವರಿಸಿರುತ್ತೇನೆ.

ಆ ಏಕತತ್ವವು ಸರ್ವವ್ಯಾಪಿಯೂ, ಎಲ್ಲವನ್ನೂ ಒಳಗೊಳ್ಳಬಲ್ಲದ್ದೂ ಆದುದರಿಂದ, ಅದನ್ನು ಪರಬ್ರಹ್ಮತತ್ವವೆಂದು ಹೇಳಿದೆ. ಇದರಲ್ಲಿ ಈ ಚರಾಚರಪ್ರಪಂಚಗಳು ಹೊರಹೊಮ್ಮಿದಂತೆ ತೋರುತ್ತಾ ಸೃಷ್ಟಿ, ಸ್ಥಿತಿ, ಸಂಹಾರ ಕಾರ್ಯಗಳು ನೆರವೇರುತ್ತಿರುವುದಕ್ಕೆ ವ್ಯವಹಾರವೆಂದು ಹೆಸರು. ಪ್ರತಿಯೊಂದು ಪ್ರಪಂಚದ ಈ ಅನಾದಿಯಾಗಿರುವ ವ್ಯವಹಾರದ ಅಪೇಕ್ಷಿಕವಾದ ಪ್ರಾರಂಭದಲ್ಲಿ, ಆ ಪರಬ್ರಹ್ಮತತ್ವದಲ್ಲಿ ಉಂಟಾಗಬೇಕಾದ ಪ್ರಥಮಸ್ಪಂದಕ್ಕೆ ಶಕ್ತಿ ಎಂದು ಹೆಸರು. ಇದಕ್ಕೇ ಆದಿಶಕ್ತಿ, ಪರಾಶಕ್ತಿ, ಮಹಾಮಾಯೆ, ಮೂಲಾವಿದ್ಯೆ, ಎಂದು ಪುರಾಣಗಳಲ್ಲೂ ದರ್ಶನಗಳಲ್ಲೂ ವ್ಯವಹಾರವಿದೆ. ಇದನ್ನೇ ಈ ಪುರಾಣದಲ್ಲಿ ದೇವೀ, ತ್ರಿಪುರಸುಂದರೀ, ರಾಜರಾಜೇಶ್ವರೀ, ಚಾಮುಂಡೇಶ್ವರೀ, ಭುವನೇಶ್ವರೀ, ಎಂದು ಮುಂತಾದ ಹೆಸರುಗಳಿಂದ ವರ್ಣಿಸಿದೆ. ಈ ಶಕ್ತಿತತ್ವವನ್ನೇ ತಾಯಿ ಎಂದೂ ಶಕ್ತಿವಿಶಿಷ್ಟವಾದ ಬ್ರಹ್ಮತತ್ವವನ್ನೇ ತಂದೆ ಎಂದೂ ಹೇಳಿದೆ. ಈ ಎರಡು ತತ್ವಗಳೂ, ಅಗ್ನಿ ಮತ್ತು ದಾಹಕಶಕ್ತಿಗಳಂತೆ, ಪರಸ್ಪರವಾಗಿ ಅಭಿನ್ನವಾಗಿವೆ. ಒಂದನ್ನು ಉಪಾಸನೆಮಾಡಿದರೆ ಮತ್ತೊಂದನ್ನೂ ಉಪಾಸನೆಮಾಡಿದಂತಾಗುತ್ತದೆ ಎಂದೂ, ಅಷ್ಟೇ ಅಲ್ಲದೆ ಒಂದನ್ನು ಬಿಟ್ಟು ಮತ್ತೊಂದು ತತ್ವವನ್ನೇ ಉಪಾಸನೆಮಾಡಲೂ ಆಗುವುದಿಲ್ಲವೆಂದೂ ಹೇಳಿದೆ. ಈ ಮೇಲೆ ಹೇಳಿದ ಮಾರ್ಗಗಳಲ್ಲಿ ಭಕ್ತಿಮಾರ್ಗವು ಎಲ್ಲರಿಗೂ ಸುಲಭವಾದುದು. ಈ ಪದ್ಯದ ಅರ್ಥವು ಹೀಗಿದೆ.

ಓ ತಾಯಿಯೇ, ಮಗನು ದುಷ್ಟನಾದರೂ ತಾಯಿಯು ಅಂತಹ ಮಗನನ್ನು ಆ ದೋಷದ ದೃಷ್ಟಿಯಿಂದಲೇ ತಿರಸ್ಕರಿಸಿಬಿಡುವುದಿಲ್ಲವು. ಹಾಗೆಯೇ ಲೋಕದಲ್ಲಿ ತಂದೆಯೂ ಮಗನಲ್ಲಿ ಕಂಡುಬಂದಿರಬಹುದಾದ ದುಷ್ಕಾರ್ಯಗಳಿಂದ ಅವನ ವಿಷಯದಲ್ಲಿ ಜಿಹಾಸೆಯಿಂದ ಕೋಪಗೊಳ್ಳುವುದಿಲ್ಲವು. ಮತ್ತೇನೆಂದರೆ ತಾಯಿತಂದೆಗಳು ಕೆಟ್ಟವರಾಗಿರಬಹುದಾದ ಮಕ್ಕಳನ್ನು ನಯಭಯಗಳಿಂದ ಕೂಡಿದ ಉಪದೇಶಗಳಿಂದಲೂ, ಮೃದುಕಠಿನಗಳಾದ ಸನ್ನಿವೇಶಗಳಿಂದಲೂ, ಅವರಿಗೆ ಬುದ್ಧಿಬರುವಂತೆ ಮಾಡುತ್ತಾರೆ. ಎಂದು ತಾತ್ಪರ್ಯವು. ಆದುದರಿಂದ ಈ ಜನನ, ಮರಣ, ಸುಖ, ದುಃಖಾನುಭವರೂಪವಾದ, ಈ ಸಂಸಾರವೆಂಬ ಸಮುದ್ರದಲ್ಲಿ ಮುಳುಗುತ್ತಲೂ

**ಅಧುನಾ ಶ್ರೋತುಮಿಚ್ಛಾಮಿ ಸಾ ದೇವೀ ಜಗದಂಬಿಕಾ ।**
**ಮನ್ವಂತರೇಷು ಸರ್ವೇಷು ಯದ್ಯದ್ರೂಪೇಣ ಪೂಜ್ಯತೇ ॥೨॥**

**ಯಸ್ಮಿನ್ ಯಸ್ಮಿಂಶ್ಚ ವೈ ಸ್ಥಾನೇ ಯೇನ ಯೇನ ಚ ಕರ್ಮಣಾ ।**
**ಶರೀರೇಣ ಚ ದೇವೇಶೀ ಪೂಜನೀಯಾ ಫಲಪ್ರದಾ ॥೩॥**

---

ತೇಲುತ್ತಲೂ ಇರುವ, ಅನಾದಿಕಾಲದಿಂದ ಹಿಂದಿನ ಜನ್ಮಗಳಲ್ಲೂ ಈಗಲೂ ಮಾಡಿಯೂ ಮಾಡುತ್ತಲೂ ಇರುವ ಕರ್ಮಗಳ ದುಷ್ಫಲಗಳಿಂದ ಹೆದರಿದವನಾಗಿಯೂ ಇರುವ, ನಾನೂ ಮೇಲೆ ಹೇಳಿರುವಂತೆ ಆಲೋಚಿಸಿ, ನಿನ್ನನ್ನೇ ತಾಯಿ ಎಂದೂ ಶಿವನನ್ನೇ ತಂದೆ ಎಂದೂ ದೃಢವಾಗಿ ನಂಬಿ, ಪ್ರಪಂಚಗಳಿಗೆಲ್ಲಕ್ಕೂ ತಂದೆ ತಾಯಿಯರಾದ ನಿಮ್ಮನ್ನೇ ಅನನ್ಯಭಕ್ತಿಯಿಂದ ಕೂಡಿದವನಾಗಿ ನನ್ನ ರಕ್ಷಣೆಗೋಸ್ಕರ ಆಶ್ರಯಿಸುತ್ತೇನೆ.

ಜನಮೇಜಯ ಮಹಾರಾಜನು ಸೂರ್ಯ ಮತ್ತು ಚಂದ್ರವಂಶಗಳಲ್ಲಿ ಹುಟ್ಟಿದ ರಾಜರ ಚರಿತ್ರೆಯನ್ನೂ ದೇವೀಗೀತೆಯನ್ನೂ ಕೇಳಿ, ಅನಂತರದಲ್ಲಿ ದೇವಿಯ ವಿರಾಟ್ಸ್ವರೂಪವನ್ನು ನೋಡಿ, ದೇವೀಮಹಿಮೆಯ ವಿವರಗಳನ್ನು ವಿಸ್ತಾರವಾಗಿ ತಿಳಿಯಲಪೇಕ್ಷೆಯಿಂದಲೂ, ಮತ್ತು ಸ್ವಾಯಂಭುವಾದಿ ಹದಿನಾಲ್ಕು ಮನ್ವಂತರಗಳಲ್ಲಿ ಯಾವ ಯಾವ ರೂಪಗಳಿಂದ ದೇವಿಯ ಪೂಜೆಯನ್ನು ಮಾಡಬೇಕು, ಇಲಾವೃತ್ತ, ಮೊದಲಾದ ನವವರ್ಷರೂಪವಾದ ಯಾವ ಯಾವ ಸ್ಥಾನಗಳಲ್ಲಿ ಯಾವ ಯಾವ ಕರ್ಮಗಳನ್ನು ಮಾಡಿ ದೇವಿಯನ್ನು ಹೇಗೆ ಆರಾಧಿಸಬೇಕು, ಈ ಮುಂತಾದ ವಿಷಯಗಳನ್ನು ತಿಳಿಯಬೇಕೆಂದು ಅಪೇಕ್ಷಿಸಿಯೂ, ವ್ಯಾಸಮಹರ್ಷಿಗಳನ್ನು ಕುರಿತು ಹೀಗೆ ಪ್ರಶ್ನೆ ಮಾಡಿದನು.

ಜನಮೇಜಯನು ಹೀಗೆ ಕೇಳಿದನು—ಓ ವ್ಯಾಸಮಹರ್ಷಿಯೇ, ನಿನ್ನಿಂದ ಹೇಳಲ್ಪಟ್ಟ ಸೂರ್ಯವಂಶ, ಮತ್ತು ಚಂದ್ರವಂಶಗಳಲ್ಲಿ ಹುಟ್ಟಿದ ರಾಜರ ಶ್ರೇಷ್ಠವಾದ ಕಥೆಗಳನ್ನಾಶ್ರಯಿಸಿರುವ, ಮೋಕ್ಷಕಾರಣವಾದ ಚರಿತ್ರೆಯು ನನ್ನಿಂದ ಕೇಳಲ್ಪಟ್ಟಿತು. ॥೧॥

ಓ ಬ್ರಹ್ಮರ್ಷಿಯೇ, ಆ ಜಗನ್ಮಾತೆಯಾದ ದೇವಿಯನ್ನು ಸ್ವಾಯಂಭುವಾದಿ ಮನ್ವಂತರಗಳಲ್ಲಿ ಯಾವ ಯಾವ ರೂಪಗಳಿಂದ ಪೂಜಿಸಬೇಕು? ಇಳಾವೃತ್ತಾದಿ ವರ್ಷರೂಪವಾದ ಯಾವ ಯಾವ ಸ್ಥಾನಗಳಲ್ಲಿ ಯಾವ ಯಾವ ಕರ್ಮವಿಶೇಷಗಳನ್ನೂ, ಸದಾಚಾರವನ್ನೂ ಬಿಡದೇ ನಡೆಸಬೇಕು? ದೇವಿಯ ಯಾವ ಯಾವ

**ಯೇನೈವ ಮಂತ್ರಬೀಜೇನ ಯತ್ರಯತ್ರ ಚ ಪೂಜ್ಯತೇ ।**
**ದೇವ್ಯಾ ವಿರಾಟ್ಸ್ವರೂಪಸ್ಯ ವರ್ಣನಂ ಚ ಯಥಾಯಥಂ ॥೩॥**

**ಯೇನ ಧ್ಯಾನೇನ ತತ್ಸೂಕ್ಷ್ಮೇ ಸ್ವರೂಪೇ ಸ್ಯಾನ್ಮತೇರ್ಗತಿಃ ।**
**ತತ್ಸರ್ವಂ ವದ ವಿಪ್ರರ್ಷೇ ಯೇನ ಶ್ರೇಯೋಽಹಮಾಪ್ನುಯಾಂ ॥೪॥**

**॥ ವ್ಯಾಸ ಉವಾಚ ॥**

**ಶೃಣು ರಾಜನ್ ಪ್ರವಕ್ಷ್ಯಾಮಿ ದೇವ್ಯಾರಾಧನಮುತ್ತಮಂ ।**
**ಯತ್ಕೃತೇನ ಶ್ರುತೇನಾಪಿ ನರಃ ಶ್ರೇಯೋಽತ್ರ ವಿಂದತೇ ॥೫॥**

**ಏವಮೇತನ್ನಾರದೇನ ಪೃಷ್ಟೋ ನಾರಾಯಣಃ ಪುರಾ ।**
**ತಸ್ಮೈ ಯದುಕ್ತವಾನ್ ದೇವೋ ಯೋಗಚರ್ಯಾಪ್ರವರ್ತಕಃ ॥೬॥**

---

ಮೂರ್ತಿಗಳನ್ನು ಪೂಜಿಸಿದರೆ ದೇವಿಯು ಫಲವನ್ನು ಕೊಡುತ್ತಾಳೆ? ಯಾವ ಬೀಜಾಕ್ಷರದಿಂದ ಯಾವ ಸ್ಥಾನದಲ್ಲಿ ಪೂಜಿಸಬೇಕು? ಯಾವ ದೇವಿಯ ವಿರಾಟ್ಸ್ವರೂಪದ ಸ್ಥೂಲರೂಪಧ್ಯಾನದಿಂದ ಸೂಕ್ಷ್ಮರೂಪಧ್ಯಾನದಲ್ಲಿ ಬುದ್ಧಿಯು ಹೋಗುತ್ತದೆಯೋ, ಅಂಥಾ ದೇವಿಯ ವಿರಾಟ್ಸ್ವರೂಪವು ಎಂಥಾದ್ದು? ಯಾವುದನ್ನು ಕೇಳುವುದರಿಂದ ನಾನು ಶ್ರೇಯಸ್ಸನ್ನು ಹೊಂದುತ್ತೇನೋ ಅಂಥಾ ಇದೆಲ್ಲವನ್ನೂ ಕೇಳಲು ಅಪೇಕ್ಷಿಸುತ್ತೇನೆ. ನೀನು ಎಲ್ಲವನ್ನೂ ನನಗೆ ಹೇಳಬೇಕು. ॥೨-೩-೪॥

ವ್ಯಾಸರು ಹೇಳುತ್ತಾರೆ—ಎಲೈ ರಾಜನೇ, ವಿರಾಟ್ಸ್ವರೂಪಿಯಾದ ಯಾವ ದೇವಿಯನ್ನು ಆರಾಧಿಸುವುದರಿಂದಲೂ, ಯಾವ ದೇವಿಯ ಸ್ವರೂಪದ ವಿವರವನ್ನು ಶ್ರವಣಮಾಡುವುದರಿಂದಲೂ, ಕೂಡ ಮನುಷ್ಯನು ಈ ಲೋಕದಲ್ಲಿ ಶ್ರೇಯಸ್ಸನ್ನು ಹೊಂದುವನೋ, ಅಂಥಾ ಶ್ರೇಷ್ಠವಾದ ದೇವಿಯ ಆರಾಧನವನ್ನು ವಿಸ್ತಾರವಾಗಿ ಹೇಳುತ್ತೇನೆ ಕೇಳು. ॥೫॥

ನೀನು ಪ್ರಶ್ನೆಮಾಡಿರುವ ಇದೇ ವಿಷಯವನ್ನೇ ಹಿಂದೆ ನಾರದನು ಶ್ರೀಮನ್ನಾರಾಯಣನನ್ನು ಕೇಳಿದನು. ಆಗ ಯೋಗಶಾಸ್ತ್ರಪ್ರವರ್ತಕನಾದ ಶ್ರೀಮನ್ನಾರಾಯಣನು ನಾರದನಿಗೆ ಯಾವ ರೀತಿಯಲ್ಲಿ ಉಪದೇಶ ಮಾಡಿದನೋ ಅದನ್ನೇ ಈಗ ನಾನು ನಿನಗೆ ಹೇಳುತ್ತೇನೆ. ॥೬॥

ಏಕದಾ ನಾರದಃ ಶ್ರೀಮಾನ್ ಪರ್ಯಟನ್ ಪೃಥಿವೀಮಿಮಾಂ ।
ನಾರಾಯಣಾಶ್ರಮಂ ಪ್ರಾಪ್ತೋ ಗತಖೇದಶ್ಚ ತಸ್ಥಿವಾನ್ ॥೭॥

ತಸ್ಮೈ ಯೋಗಾತ್ಮನೇ ನತ್ವಾ ಬ್ರಹ್ಮದೇವತನೂಭವಃ ।
ಪರ್ಯಪೃಚ್ಛದಿಮಂ ಚಾರ್ಥಂ ಯತ್ಪೃಷ್ಟೋ ಭವತಾಽನಘ ॥೮॥

॥ ನಾರದ ಉವಾಚ ॥

ದೇವ ದೇವ ಮಹಾದೇವ ಪುರಾಣಪುರುಷೋತ್ತಮ ।
ಜಗದಾಧಾರ ಸರ್ವಜ್ಞ ಶ್ಲಾಘನೀಯೋರುಸದ್ಗುಣ ॥೯॥

ಜಗತಸ್ತತ್ವಮಾದ್ಯಂ ಯತ್ತನ್ಮೇ ವದ ಯಥೇಪ್ಸಿತಂ ।
ಜಾಯತೇ ಕುತ ಏವೇದಂ ಕುತಶ್ಚೇದಂ ಪ್ರತಿಷ್ಠಿತಂ ॥೧೦॥

---

ಒಂದಾನೊಂದು ಕಾಲದಲ್ಲಿ ತೇಜೋವಿಶಿಷ್ಟನಾದ ನಾರದನು ಈ ಲೋಕದಲ್ಲೆಲ್ಲಾ ಸಂಚರಿಸುತ್ತಾ ನಾರಾಯಣನ ಆಶ್ರಮಕ್ಕೆ ಬಂದು, ಅಲ್ಲಿ ನಡೆದ ಸತ್ಕಾರದಿಂದ ಆಯಾಸವನ್ನು ಪರಿಹರಿಸಿಕೊಂಡು, ಸೌಖ್ಯವನ್ನು ಹೊಂದಿ ಅಲ್ಲಿಯೇ ಇದ್ದನು. ॥೭॥

ಎಲೈ ಪುಣ್ಯಶಾಲಿಯಾದ ಜನಮೇಜಯನೇ, ಬ್ರಹ್ಮದೇವನ ಮಗನಾದ ಆ ನಾರದನು ಯೋಗಮೂರ್ತಿಯಾದ ಶ್ರೀಮನ್ನಾರಾಯಣನಿಗೆ ನಮಸ್ಕಾರವನ್ನು ಮಾಡಿ ಈಗ ನೀನು ಯಾವ ವಿಷಯದಲ್ಲಿ ಪ್ರಶ್ನೆಮಾಡಿದೆಯೋ ಇದನ್ನೇ ತಿಳಿಯಲು ಪ್ರಶ್ನೆ ಮಾಡಿದನು. ॥೮॥

ನಾರದನು ಹೇಳಿದನು — ಓ ದೇವದೇವನೇ, ಪರಮೇಶ್ವರನೇ, ಅತಿ ಪ್ರಾಚೀನನಾದ ಪುರುಷಶ್ರೇಷ್ಠನೇ, ಚರಾಚರವಾದ ಈ ಸಮಸ್ತ ಜಗತ್ತಿಗೂ ಆಶ್ರಯನಾದವನೇ, ಸಮಸ್ತವನ್ನೂ ತಿಳಿದವನೇ, ಸ್ತುತಿಸಲು ಯೋಗ್ಯವಾದ ಅನಂತವಾದ ಸುಗುಣ ಉಳ್ಳವನೇ, ॥೯॥

ಈ ಸಮಸ್ತ ಪ್ರಪಂಚದ ನಿಜಸ್ವರೂಪವು ಯಾವುದು? ಸಮಸ್ತ ಪದಾರ್ಥಗಳೂ ಏತಕ್ಕಾಗಿ ಹುಟ್ಟುತ್ತವೆ? ಇವುಗಳಿಗೆಲ್ಲಕ್ಕೂ ರಕ್ಷಕನು ಯಾರು? ಇದೆಲ್ಲವನ್ನೂ ನಿನಗೆ ಗೊತ್ತಿರುವಂತೆ ನನಗೆ ತಿಳಿಯುವ ಹಾಗೆ ಹೇಳು. ॥೧೦॥

ಕುತೋಽಂತಂ ಪ್ರಾಪ್ನುಯಾತ್ಕಾಲೇ ಕುತ್ರ ಸರ್ವಫಲೋದಯಾಃ ।
ಕೇನ ಜ್ಞಾತೇನ ಮಾಯೈಷಾ ಮೋಹಭೂ ರ್ನಾಶಮಾಪ್ನುಯಾತ್ ॥೧೧॥

ಕಯಾಽರ್ಚಯಾ ಕಿಂ ಜಪೇನ ಕಿಂ ಧ್ಯಾನೇನಾತ್ಮಹೃತ್ಕಜೇ ।
ಪ್ರಕಾಶೋ ಜಾಯತೇ ದೇವ ತಮಸ್ಯರ್ಕೋದಯೋ ಯಥಾ ॥೧೨॥

ಏತತ್ಪ್ರಶ್ನೋತ್ತರಂ ದೇವ ಬ್ರೂಹಿ ಸರ್ವಮಶೇಷತಃ ।
ಯಥಾ ಲೋಕಸ್ತರೇದಂಧತಮಸಂ ತ್ವಂಜಸೈವ ಹಿ ॥೧೩॥

॥ ವ್ಯಾಸ ಉವಾಚ ॥

ಏವಂ ದೇವರ್ಷಿಣಾ ಪೃಷ್ಟಃ ಪ್ರಾಚೀನೋ ಮುನಿಸತ್ತಮಃ ।
ನಾರಾಯಣೋ ಮಹಾಯೋಗೀ ಪ್ರತಿನಂದ್ಯ ವಚೋಽಬ್ರವೀತ್ ॥೧೪॥

---

ಏತಕ್ಕೋಸ್ಕರ ಯಾವ ಕಾರಣದಿಂದ ಪ್ರಳಯಕಾಲದಲ್ಲಿ ಈ ಪ್ರಪಂಚವು ಎಲ್ಲವೂ ನಾಶಹೊಂದುತ್ತವೆ? ಸಮಸ್ತ ಕರ್ಮಗಳ ಫಲಸಿದ್ಧಿಯು ಯಾರ ಅಧೀನವಾಗಿದೆ? ಯಾವುದನ್ನು ತಿಳಿದುಕೊಂಡರೆ ವ್ಯಾಮೋಹವನ್ನುಂಟುಮಾಡುವ ಈ ಅಜ್ಞಾನವು ನಾಶವಾದೀತು? ॥೧೧॥

ಓ ಸ್ವಾಮಿಯೇ, ಸೂರ್ಯೋದಯದಿಂದ ಅಂಧಕಾರವು ಹೇಗೆ ನಷ್ಟವಾಗುತ್ತದೋ ಹಾಗೆ, ಉಪಾಸಕನ ಹೃದಯಕಮಲದಲ್ಲಿ ತಿಳಿವಳಿಕೆಯ ಪ್ರಕಾಶವು ಯಾವ ಪೂಜಾವಿಧಾನ, ಜಪ, ಧ್ಯಾನಗಳಿಂದ ಉಂಟಾಗುವುದು? ॥೧೨॥

ಓ ದೇವನೇ, ಯಾವುದನ್ನು ತಿಳಿದರೆ ಜನರು ಅಜ್ಞಾನರೂಪವಾದ ಅಂಧಕಾರ ಸಮುದ್ರವನ್ನು ಅತಿ ಶೀಘ್ರವಾಗಿ ದಾಟುತ್ತಾರೋ, ಅಂಥಾ ಈ ಪ್ರಶ್ನೆಯ ಉತ್ತರವನ್ನು ಸಂಪೂರ್ಣವಾಗಿ ನನಗೆ ಹೇಳು. ॥೧೩॥

ವ್ಯಾಸನು ಹೇಳಿದನು— ಈ ಪ್ರಕಾರವಾಗಿ ದೇವರ್ಷಿಯಾದ ನಾರದನಿಂದ ಕೇಳಲ್ಪಟ್ಟ ಪುರಾತನನೂ ಋಷಿಶ್ರೇಷ್ಠನೂ, ಮಹಾ ಯೋಗಶಾಲಿಯೂ, ಆದ ನಾರಾಯಣನು ಅವನ ಮಾತನ್ನು ಬಹಳವಾಗಿ ಶ್ಲಾಘಿಸಿ ಈ ರೀತಿಯಲ್ಲಿ ಪ್ರತ್ಯುತ್ತರವನ್ನು ಹೇಳಿದನು. ॥೧೪॥

|| ನಾರಾಯಣ ಉವಾಚ ||

ಶೃಣು ದೇವರ್ಷಿವರ್ಯಾತ್ರ ಜಗತಸ್ತತ್ತ್ವಮುತ್ತಮಂ ।
ಯೇನ ಜ್ಞಾತೇನ ಮರ್ತ್ಯೋಽಹಿ ಜಾಯತೇ ನ ಜಗದ್ಭ್ರಮೇ ||೧೫||

ಜಗತಸ್ತತ್ತ್ವಮಿತ್ಯೇವ ದೇವೀ ಪ್ರೋಕ್ತಾ ಮಯಾಽಪಿ ಹಿ ।
ಋಷಿಭಿರ್ದೇವಗಂಧರ್ವೈರನ್ಯೈಶ್ಚಾಪಿ ಮನೀಷಿಭಿಃ ||೧೬||

ಸಾ ಜಗತ್ಸೃಜತೇ ದೇವೀ ತಯಾ ಚ ಪ್ರತಿಪಾಲ್ಯತೇ ।
ತಯಾ ಚ ನಾಶ್ಯತೇ ಸರ್ವಮಿತಿ ಪ್ರೋಕ್ತಂ ಗುಣತ್ರಯಾತ್ ||೧೭||

ತಸ್ಯಾಃ ಸ್ವರೂಪಂ ವಕ್ಷ್ಯಾಮಿ ದೇವ್ಯಾಃ ಸಿದ್ಧರ್ಷಿಪೂಜಿತಂ ।
ಸ್ಮರಣಾಂ ಸರ್ವಪಾಪಘ್ನಂ ಕಾಮದಂ ಮೋಕ್ಷದಂ ತಥಾ ||೧೮||

---

ನಾರಾಯಣನು ಹೇಳಿದನು— ಎಲೈ ದೇವರ್ಷಿಗಳಲ್ಲಿ ಶ್ರೇಷ್ಠನೇ, ಯಾವ ವೇದಾಂತ ತತ್ತ್ವವನ್ನು ತಿಳಿಯುವುದರಿಂದ ಮನುಷ್ಯನು ಪ್ರಾಪಂಚಿಕವಾದ ಭ್ರಮವನ್ನು ಹೊಂದುವುದಿಲ್ಲವೋ, ಅಂಥಾ ಶ್ರೇಷ್ಠವಾದ ಜಗತ್ತಿಗೆ ಅಧಿಷ್ಠಾನವಾದ ದೇವಿಯ ತತ್ತ್ವವನ್ನು ಕೇಳು. ||೧೫||

ಗುಣತ್ರಯದ ಸಾಮ್ಯಾವಸ್ಥೆ ಎಂಬ ಮಾಯೆಯಿಂದ ಕೂಡಿರುವ ಬ್ರಹ್ಮ ಸ್ವರೂಪಳಾದ ದೇವಿಯೇ ಈ ಜಗತ್ತಿನ ಭ್ರಮಕ್ಕೆ ಅಧಿಷ್ಠಾನವಾದ ತತ್ತ್ವವೆಂದು ನನ್ನಿಂದಲೂ ಮುನಿಗಳಿಂದಲೂ, ದೇವತೆಗಳಿಂದಲೂ, ಗಂಧರ್ವರಿಂದಲೂ, ಇನ್ನೂ ಅನೇಕ ಪ್ರಜ್ಞಾವಂತರಿಂದಲೂ ಹೇಳಲ್ಪಟ್ಟಿದೆ. ಇದರಲ್ಲಿ ಮಾಯೆಯೇ ಉಪಾದಾನ ಕಾರಣವು. ಮಾಯೆಯಲ್ಲಿ ಚಿತ್ತತ್ತ್ವದ ಪ್ರತಿಬಿಂಬವೇ ನಿಮಿತ್ತ ಕಾರಣವು. ಬ್ರಹ್ಮ ತತ್ತ್ವವು ವಿವರ್ತಕಾರಣವು. ಎಂದು ತಾತ್ಪರ್ಯವು. ||೧೬||

ಆ ದೇವಿಯು ಸತ್ತ್ವ, ರಜಸ್ತಮೋರೂಪವಾದ ಮೂರು ಗುಣಗಳ ವೈಷಮ್ಯ ಪರಿಣಾಮಗಳಿಂದ, ಈ ಸರ್ವಪ್ರಪಂಚವನ್ನೂ ಸೃಷ್ಟಿಸುವವಳೂ, ಕಾಪಾಡುವವಳೂ, ನಾಶಮಾಡುವವಳೂ ಆಗಿದ್ದಾಳೆ. ||೧೭||

ಸ್ಮರಣಮಾತ್ರದಿಂದ ಸಮಸ್ತ ಪಾಪಗಳನ್ನೂ ಹೋಗಲಾಡಿಸುವ, ಸಕಲೇಷ್ಟಾರ್ಥಗಳನ್ನೂ, ಕಡೆಗೆ ಮೋಕ್ಷವನ್ನೂ ಸಹ ಕೊಡುವ, ಸಿದ್ಧರ್ಷಿಗಳಿಂದ ಪೂಜಿಸಲ್ಪಟ್ಟಿರುವ ಆ ದೇವಿಯ ಸ್ವರೂಪವನ್ನೂ, ಹೇಳುವೆನು. ||೧೮||

ಮನುಃ ಸ್ವಾಯಂಭುವಸ್ತ್ವಾದ್ಯಃ ಪದ್ಮಪುತ್ರಃ ಪ್ರತಾಪವಾನ್ ।
ಶತರೂಪಾಪತಿಃ ಶ್ರೀಮಾನ್ ಸರ್ವಮನ್ವಂತರಾಧಿಪಃ ॥೧೯॥

ಸ ಮನುಃ ಪಿತರಂ ದೇವಂ ಪ್ರಜಾಪತಿಮಕಲ್ಮಷಂ ।
ಭಕ್ತ್ಯಾ ಪರ್ಯಚರತ್ಪೂರ್ವಂ ತಮುವಾಚಾತ್ಮಭೂಸ್ಸುತಂ ॥೨೦॥

ಪುತ್ರ ಪುತ್ರ ತ್ವಯಾ ಕಾರ್ಯಂ ದೇವ್ಯಾರಾಧನಮುತ್ತಮಂ ।
ತತ್ಪ್ರಸಾದೇನ ತೇ ತಾತ ಪ್ರಜಾಸರ್ಗಃ ಪ್ರಸಿದ್ಧ್ಯತಿ ॥೨೧॥

ಏವಮುಕ್ತಃ ಪ್ರಜಾಸ್ರಷ್ಟಾ ಮನುಃ ಸ್ವಾಯಂಭುವೋ ವಿರಾಟ್ ।
ಜಗದ್ಯೋನಿಂ ತದಾ ದೇವೀಂ ತಪಸಾಽತರ್ಪಯದ್ವಿಭುಃ ॥೨೨॥

ತುಷ್ಟಾವ ದೇವೀಂ ದೇವೇಶೀಂ ಸಮಾಹಿತಮತಿಃ ಕಿಲ ।
ಆದ್ಯಾಂ ಮಾಯಾಂ ಸರ್ವಶಕ್ತಿಂ ಸರ್ವಕಾರಣಕಾರಣಾಂ ॥೨೩॥

---

ಒಂದು ಮನ್ವಂತರಕ್ಕೆ ಪೂರ್ಣವಾಗಿ ಒಡೆಯನೂ, ತೇಜಸ್ಸಿನಿಂದ ಕೂಡಿದವನೂ ಶತರೂಪಾ ಎಂಬವಳಿಗೆ ಪತಿಯೂ, ಪರಾಕ್ರಮಶಾಲಿಯೂ, ಕಮಲದಲ್ಲಿ ಹುಟ್ಟಿದ ಬ್ರಹ್ಮನ ಪುತ್ರನೂ ಆದ ಸ್ವಾಯಂಭುವಮನುವೇ ಈ ಎಲ್ಲಕ್ಕೂ ಆದಿಯಲ್ಲಿದ್ದವನು. ॥೧೯॥

ಪೂರ್ವಕಾಲದಲ್ಲಿ ಆ ಮನುವು ದೋಷಸಂಪರ್ಕವಿಲ್ಲದೆ ಪರಿಶುದ್ಧನಾದ ತನ್ನ ತಂದೆಯಾದ ಬ್ರಹ್ಮದೇವನನ್ನು ಭಕ್ತಿಭಾವದಿಂದ ಸೇವಿಸುತ್ತಿರಲು ಆ ಬ್ರಹ್ಮನು ಮಗನನ್ನು ಕುರಿತು ಹೀಗೆ ಹೇಳಿದನು. ॥೨೦॥

ಎಲೈ ಮಗನೇ, ನೀನು ಶ್ರೇಷ್ಠವಾದ ಆ ದೇವಿಯ ಆರಾಧನೆಯನ್ನು ಮಾಡು. ಆ ದೇವಿಯ ಅನುಗ್ರಹದಿಂದ ನಿನಗೆ ಪ್ರಜೆಗಳನ್ನು ಸೃಷ್ಟಿಮಾಡುವ ಕೆಲಸವು ಸುಲಭವಾಗಿ ಸಿದ್ಧಿಸುವುದು. ॥೨೧॥

ಆಗ ಹೀಗೆ ಹೇಳಲ್ಪಟ್ಟ ಪ್ರಜೆಗಳ ಸೃಷ್ಟಿಕರ್ತನೂ, ವಿರಾಟ್ಪುರುಷನೂ ಆದ ಸ್ವಾಯಂಭುವ ಮನುವು, ಪ್ರಪಂಚಕ್ಕೆ ಕಾರಣಭೂತಳಾದ ದೇವಿಯನ್ನು ತಪಸ್ಸಿನಿಂದ ತೃಪ್ತಿಪಡಿಸಿದನು. ॥೨೨॥

ಆ ಮನುವು ಏಕಾಗ್ರಚಿತ್ತದಿಂದ, ಆದಿಭೂತಳೂ, ಎಂದರೆ ಎಲ್ಲಕ್ಕೂ ಮೊದಲಿನವಳೂ, ಮಾಯೆಯಿಂದ ಕೂಡಿದ ಬ್ರಹ್ಮರೂಪಿಣಿಯೂ, ಸರ್ವಶಕ್ತಿಸ್ವರೂ

॥ ಮನುರುವಾಚ ॥

ನಮೋ ನಮಸ್ತೇ ದೇವೇಶಿ ಜಗತ್ಕಾರಣಕಾರಣೇ ।
ಶಂಖಚಕ್ರಗದಾಹಸ್ತೇ ನಾರಾಯಣಹೃದಾಶ್ರಿತೇ ॥೨೪॥

ವೇದಮೂರ್ತೇ ಜಗನ್ಮಾತಃ ಕಾರಣಸ್ಥಾನರೂಪಿಣಿ ।
ವೇದತ್ರಯಪ್ರಮಾಣಜ್ಞೇ ಸರ್ವದೇವನುತೇ ಶಿವೇ ॥೨೫॥

ಮಾಹೇಶ್ವರಿ ಮಹಾಭಾಗೇ ಮಹಾಮಾಯೇ ಮಹೋದಯೇ ।
ಮಹಾದೇವಪ್ರಿಯಾವಾಸೇ ಮಹಾದೇವಪ್ರಿಯಂಕರಿ ॥೨೬॥

ಗೋಪೇಂದ್ರಸ್ಯ ಪ್ರಿಯೇ ಜ್ಯೇಷ್ಠೇ ಮಹಾನಂದೇ ಮಹೋತ್ಸವೇ ।
ಮಹಾಮಾರೀ ಭಯಹರೇ ನಮೋ ದೇವಾದಿಪೂಜಿತೇ ॥೨೭॥

---

ಪಳೂ, ಎಲ್ಲ ಕಾರಣಗಳಿಗೂ ಕಾರಣಳೂ ಆದ ದೇವಿಯನ್ನು ಹೀಗೆ ಸ್ತೋತ್ರಮಾಡಿದನು. ॥೨೩॥

ಮನುವು ಹೇಳಿದನು—ಪ್ರಪಂಚಕ್ಕೆ ಕಾರಣನಾದ ಹಿರಣ್ಯಗರ್ಭ ಬ್ರಹ್ಮನಿಗೂ ಕಾರಣಳಾದ, ಶಂಖ, ಚಕ್ರ, ಗದೆ, ಇವುಗಳನ್ನು ಕೈಯಲ್ಲಿ ಹಿಡಿದಿರುವ ವಿಷ್ಣುಶಕ್ತಿ ಸ್ವರೂಪಳೂ, ಶ್ರೀಮನ್ನಾರಾಯಣನ ಹೃದಯವನ್ನಾಶ್ರಯಿಸಿರುವವಳೂ, ಎಲ್ಲರಲ್ಲೂ ಇರುವ ಎಲ್ಲ ಬಗೆಯ ಶಕ್ತಿಗೆ ಕಾರಣರೂಪಳೂ, ಆದ ದೇವಿಯೇ, ನಿನಗೆ ಅನೇಕ ಸಲ ನಮಸ್ಕಾರಗಳನ್ನು ಮಾಡುತ್ತೇನೆ. ॥೨೪॥

ವೇದಪ್ರತಿಪಾದ್ಯವಾದ ಜ್ಞಾನಸ್ವರೂಪಿಣಿಯೇ, ಜಗನ್ಮಾತೆಯೇ, ಜಗತ್ತಿಗೆ ಕಾರಣವಾದ ಮಾಯೆಗೆ ಅಧಿಷ್ಠಾನವಾದ ಬ್ರಹ್ಮರೂಪಿಣಿಯೇ, ಋಗಾದಿವೇದತ್ರಯ ರೂಪವಾದ ಪ್ರಮಾಣವನ್ನು ತಿಳಿದಿರುವವಳೇ, ಸಮಸ್ತ ದೇವತೆಗಳಿಂದಲೂ, ಸ್ತುತಿಸಲ್ಪಟ್ಟಿರುವ ಓ ಪಾರ್ವತಿಯೇ, ನಿನಗೆ ನಮಸ್ಕಾರವು. ॥೨೫॥

ಮಹೇಶ್ವರಪತ್ನಿಯೇ, ಹೆಚ್ಚಾದ ಐಶ್ವರ್ಯವುಳ್ಳವಳೇ, ಈಶ್ವರನ ಅರ್ಧಾಂಗಿಯೇ, ಮಾಯಾಸ್ವರೂಪಿಣಿಯೇ, ಹೆಚ್ಚಾದ ಪ್ರಕಾಶವುಳ್ಳವಳೇ, ಪರಮೇಶ್ವರನಿಗೆ ಸಂತೋಷವನ್ನುಂಟುಮಾಡುವವಳೇ, ನಿನಗೆ ನಮಸ್ಕಾರವು. ॥೨೬॥

ಗೋಪರಿಗೆ ಒಡೆಯನಾದ ನಂದನಿಗೆ ಪ್ರಿಯಳಾದ ವಿಂಧ್ಯವಾಸಿನಿಯೇ, ಎಲ್ಲರಿಗಿಂತಲೂ ಹಿರಿಯಳಾದವಳೇ, ಹೆಚ್ಚಾದ ಸಂತೋಷವುಳ್ಳವಳೇ, ಅನೇಕ ಬಗೆಯ

ಸರ್ವಮಂಗಳಮಾಂಗಲ್ಯೇ ಶಿವೇ ಸರ್ವಾರ್ಥಸಾಧಿಕೇ ।
ಶರಣ್ಯೇ ತ್ರ್ಯಂಬಿಕೇ ಗೌರಿ ನಾರಾಯಣಿ ನಮೋಸ್ತು ತೇ ॥೨೮॥

ಯತಶ್ಚೇದಂ ಯಯಾ ವಿಶ್ವಮೋತಂ ಪ್ರೋತಂ ಚ ಸರ್ವದಾ ।
ಚೈತನ್ಯಮೇಕಮಾದ್ಯಂತರಹಿತಂ ತೇಜಸಾಂ ನಿಧಿಂ ॥೨೯॥

ಬ್ರಹ್ಮಾ ಯದೀಕ್ಷಣಾತ್ಸರ್ವಂ ಕರೋತಿ ಚ ಹರಿಸ್ಸದಾ ।
ಪಾಲಯತ್ಯಪಿ ವಿಶ್ವೇಶಃ ಸಂಹರ್ತಾ ಯದನುಗ್ರಹಾತ್ ॥೩೦॥

ಮಧುಕೈಟಭಸಂಭೂತಭಯಾರ್ತಃ ಪದ್ಮಸಂಭವಃ ।
ಯಸ್ಯಾಃ ಸ್ತವೇನ ಮುಮುಚೇ ಘೋರದೈತ್ಯಭವಾಂಬುಧೇಃ ॥೩೧॥

---

ಉತ್ಸವಗಳಿಂದ ಆರಾಧಿಸಲ್ಪಡುತ್ತಿರುವವಳೇ, ಮಹಾ ಮಾರಿಯ ಭಯವನ್ನು ಹೋಗಲಾಡಿಸುವವಳೇ, ದೇವತೆಗಳೇ ಮೊದಲಾದವರಿಂದ ಪೂಜಿಸಲ್ಪಟ್ಟಿರುವವಳೇ, ನಿನಗೆ ನಮಸ್ಕಾರವು. ॥೨೭॥

ಎಲ್ಲ ಶುಭಕಾರ್ಯಗಳಲ್ಲಿರುವ ಕಲ್ಯಾಣಸ್ವಭಾವವೇ ಸ್ವರೂಪವಾಗಿ ಉಳ್ಳವಳೇ, ಪಾರ್ವತಿಯೇ, ಸಕಲೇಷ್ಟಾರ್ಥದಾಯಕಿಯೇ, ಆಶ್ರಯಿಸುವುದಕ್ಕೆ ಯೋಗ್ಯಳಾದವಳೇ, ಪರಮೇಶ್ವರಿಯೇ, ಮಹಾಲಕ್ಷ್ಮಿಯೇ, ನಿನಗೆ ನಮಸ್ಕಾರವು. [ದೇವೀಮಹಾತ್ಮ್ಯ ಪುಟ ೭೯-೮೦ ಗಳನ್ನು ನೋಡಬೇಕು] ॥೨೮॥

ಯಾವ ದೇವಿಯಿಂದ ಈ ಜಗತ್ತು ಸೃಷ್ಟಿಸಲ್ಪಟ್ಟಿದೆಯೋ, ಯಾವ ದೇವಿಯಿಂದ ಈ ಪ್ರಪಂಚವು ವ್ಯಾಪ್ತವಾಗಿ ಗ್ರಥಿತವಾಗಿದೆಯೋ, ಅಂಥಾ ಚಿದ್ರೂಪಳೂ, ಅದ್ವಿತೀಯಳೂ, ಆದ್ಯಂತರಹಿತಳೂ, ಎಲ್ಲಾ ಕಡೆಯಲ್ಲೂ ಪ್ರಕಾಶಮಾನಳೂ ಆದ ನಿನಗೆ ನಮಸ್ಕಾರವು. ॥೨೯॥

ಯಾವ ಜಗನ್ಮಾತೆಯ, ದಯಾಕಟಾಕ್ಷದಿಂದ ಬ್ರಹ್ಮನು ಸಮಸ್ತ ಪ್ರಪಂಚವನ್ನೂ ಸೃಷ್ಟಿಸುತ್ತಾನೋ, ಯಾವಳ ದಯಾದೃಷ್ಟಿಯಿಂದ ವಿಷ್ಣುವು ಎಲ್ಲವನ್ನೂ ಕಾಪಾಡುತ್ತಾನೋ, ಯಾವಳ ಅನುಗ್ರಹದಿಂದ ಈಶ್ವರನು ಸಮಸ್ತವನ್ನೂ ನಾಶ ಮಾಡುತ್ತಾನೋ, ಅಂಥಾ ನಿನಗೆ ನಮಸ್ಕಾರವು. ॥೩೦॥

ಯಾವ ದೇವಿಯ ಸ್ತೋತ್ರದಿಂದ ಮಧುಕೈಟಭರೆಂಬ ರಾಕ್ಷಸರ ಭಯದಿಂದ ದುಃಖಿತನಾಗಿದ್ದ ಬ್ರಹ್ಮನು, ಅಂಥಾ ಭಯಂಕರರಾದ ರಾಕ್ಷಸರಿಂದುಂಟಾಗಿದ್ದ

**ತ್ವಂ ಹ್ರೀಃ ಕೀರ್ತಿಃ ಸ್ಮೃತಿಃ ಕಾಂತಿಃ ಕಮಲಾ ಗಿರಿಜಾ ಸತೀ ।**
**ದಾಕ್ಷಾಯಣೀ ವೇದಗರ್ಭಾ ಬುದ್ಧಿದಾತ್ರೀ ಸದಾಽಭಯಾ ॥೩೨॥**

**ಸ್ತೋಷ್ಯೇ ತ್ವಾಂ ಚ ನಮಸ್ಯಾಮಿ ಪೂಜಯಾಮಿ ಜಪಾಮಿ ಚ ।**
**ಧ್ಯಾಯಾಮಿ ಭಾವಯೇ ವೀಕ್ಷೇ ಶ್ರೋಷ್ಯೇ ದೇವಿ ಪ್ರಸೀದ ಮೇ ॥೩೩॥**

**ಬ್ರಹ್ಮಾ ವೇದನಿಧಿಃ ಕೃಷ್ಣೋ ಲಕ್ಷ್ಮ್ಯಾವಾಸಃ ಪುರಂದರಃ ।**
**ತ್ರಿಲೋಕಾಧಿಪತಿಃ ಪಾಶೀ ಯಾದಸಾಂಪತಿರುತ್ತಮಃ ॥೩೪॥**

**ಕುಬೇರೋ ನಿಧಿನಾಥೋಽಭೂದ್ಯಮೋ ಜಾತಃ ಪರೇತರಾಟ್ ।**
**ನೈರ್ಋತೋ ರಕ್ಷಸಾಂ ನಾಥಃ ಸೋಮೋ ಜಾತೋ ಹ್ಯಪೋಮಯಃ ॥೩೫॥**

**ತ್ರಿಲೋಕವಂದ್ಯೇ ಲೋಕೇಶಿ ಮಹಾಮಾಂಗಲ್ಯರೂಪಿಣೀ ।**
**ನಮಸ್ತೇಽಸ್ತು ಪುನರ್ಭೂಯೋ ಜಗನ್ಮಾತರ್ನಮೋ ನಮಃ ॥೩೬॥**

---

ವಿಪತ್ತಿನ ಸಮುದ್ರದಿಂದುಂಟಾದ ಭಯದಿಂದ ಪಾರಾದನೋ ಅಂಥಾ ನಿನಗೆ ನಮಸ್ಕಾರವು. ॥೩೧॥

ಓ ದೇವಿಯೇ, ನೀನು ಹ್ರೀಂಕಾರಸ್ವರೂಪಳು ಮತ್ತು ಬೋಧ್ಯಳು. ಕೀರ್ತಿಯು, ಸ್ಮೃತಿಯು, ಕಾಂತಿಯು, ಲಕ್ಷ್ಮಿಯು, ಸರಸ್ವತಿಯು, ಸತಿಯು, ದಾಕ್ಷಾಯಿಣಿಯು, ವೇದಮಾತೆಯು, ಬುದ್ಧಿಪ್ರದಳು, ಯಾವಾಗಲೂ ಅಭಯವನ್ನು ಕೊಡುವವಳು. ದೇವೀಮಾಹಾತ್ಮ್ಯ, ಪುಟ ೭೨-೭೮ ನೋಡಬಹುದು. ॥೩೨॥

ನಿನ್ನನ್ನು ಸ್ತುತಿಸುತ್ತೇನೆ. ನಿನಗೆ ನಮಸ್ಕಾರಮಾಡುತ್ತೇನೆ. ನಿನ್ನನ್ನು ಪೂಜಿಸುತ್ತೇನೆ. ನಿನ್ನ ಸಂಬಂಧವಾದ ಮಂತ್ರಜಪಮಾಡುತ್ತೇನೆ. ನಿನ್ನನ್ನು ಧ್ಯಾನಿಸುತ್ತೇನೆ. ಉಪಾಸನೆಯಿಂದ ನನ್ನ ಹೃದಯದಲ್ಲಿ ನಿನ್ನ ಭಾವನೆಯನ್ನು ಮಾಡುತ್ತೇನೆ. ನಿನ್ನನ್ನು ನೋಡುತ್ತೇನೆ. ನಿನ್ನ ಮಹಿಮೆಯನ್ನು ಕೇಳುತ್ತೇನೆ. ಓ ದೇವಿಯೇ, ನನಗೆ ಪ್ರಸನ್ನಳಾಗು. ॥೩೩॥

ಯಾವ ದೇವಿಯ ಪ್ರಸಾದದಿಂದ ಬ್ರಹ್ಮನು ವೇದಗಳ ಪ್ರಕಟನೆಗೆ ಮೂಲ ಕಾರಣನಾದನೋ, ಕೃಷ್ಣನು ಲಕ್ಷ್ಮೀಪತಿಯಾದನೋ, ದೇವೇಂದ್ರನು ಮೂರು ಲೋಕಕ್ಕೂ ಅಧಿಪತಿಯಾದನೋ, ವರುಣನು ಜಲಾಧಿಪತಿಯಾದನೋ ಕುಬೇರನು ಧನಾಧ್ಯಕ್ಷನಾದನೋ, ಯಮನು ಪಿತೃದೇವತೆಗಳ ಒಡೆಯನಾದನೋ, ನೈರ್ಋ

॥ ನಾರಾಯಣ ಉವಾಚ ॥

ಏವಂ ಸ್ತುತಾ ಭಗವತೀ ದುರ್ಗಾ ನಾರಾಯಣೀ ಪರಾ ।
ಪ್ರಸನ್ನಾ ಪ್ರಾಹ ದೇವರ್ಷೇ ಬ್ರಹ್ಮಪುತ್ರಮಿದಂ ವಚಃ ॥೩೭॥

॥ ಶ್ರೀದೇವ್ಯುವಾಚ ॥

ವರಂ ವರಯ ರಾಜೇಂದ್ರ ಬ್ರಹ್ಮಪುತ್ರ ಯದಿಚ್ಛಸಿ ।
ಪ್ರಸನ್ನಾಽಹಂ ಸ್ತವೇನಾತ್ರ ಭಕ್ತ್ಯಾ ಚಾರಾಧನೇನ ಚ ॥೩೮॥

॥ ಮನುರುವಾಚ ॥

ಯದಿ ದೇವಿ ಪ್ರಸನ್ನಾಽಸಿ ಭಕ್ತ್ಯಾ ಕಾರುಣಿಕೋತ್ತಮೇ ।
ತದಾ ನಿರ್ವಿಘ್ನತಃ ಸೃಷ್ಟಿಃ ಪ್ರಜಾಯಾಃ ಸ್ಯಾತ್ತವಾಜ್ಞಯಾ ॥೩೯॥

---

ತಿಯು ರಾಕ್ಷಸರಾಜನಾದನೋ, ಚಂದ್ರನೂ ನೀರಿನಿಂದ ಹುಟ್ಟಿದವನಾಗಿ ಮೂರು ಲೋಕದಿಂದಲೂ ನಮಸ್ಕರಿಸಲ್ಪಡುವವನಾದನೋ, ಅಂಥಾ ಸಮಸ್ತಪ್ರಪಂಚಕ್ಕೂ ಒಡೆಯಳೂ, ಶುಭಸ್ವರೂಪಿಣಿಯೂ ಲೋಕಮಾತೆಯೂ ಆಗಿರುವ ನಿನಗೆ ಅನೇಕಾವೃತ್ತಿ ನಮಸ್ಕರಿಸುತ್ತೇನೆ. ॥೩೪-೩೫-೩೬॥

ನಾರಾಯಣನು ಹೇಳಿದನು—ಎಲೈ ದೇವರ್ಷಿಯಾದ ನಾರದನೇ, ಈ ರೀತಿಯಲ್ಲಿ ಸ್ತುತಿಸಲ್ಪಟ್ಟ, ಷಡ್ಗುಣೈಶ್ವರ್ಯಯುಕ್ತಳೂ, ಶ್ರೇಷ್ಠಳೂ, ಪರದೇವತೆಯೂ ಆದ ದುರ್ಗಾದೇವಿಯು ಪ್ರಸನ್ನಳಾಗಿ, ಬ್ರಹ್ಮಪುತ್ರನಾದ ಮನುವನ್ನು ಕುರಿತು ಈ ಮಾತನ್ನು ಹೇಳಿದಳು. ॥೩೭॥

ದೇವಿಯು ಹೇಳಿದಳು—ಎಲೈ ರಾಜಶ್ರೇಷ್ಠನೇ, ನಿನ್ನ ಸ್ತೋತ್ರದಿಂದಲೂ, ಭಕ್ತಿಯಿಂದಲೂ, ಸೇವೆಯಿಂದಲೂ ಕೂಡ ಪ್ರಸನ್ನಳಾಗಿದ್ದೇನೆ. ಬ್ರಹ್ಮಪುತ್ರನೇ, ನಿನಗೆ ಬೇಕಾದ ವರವನ್ನು ಕೇಳು. ॥೩೮॥

ಮನುವು ಹೇಳಿದನು —ಓ ಅತ್ಯಂತ ಕರುಣಾಶಾಲಿನಿಯಾದ ದೇವಿಯೇ, ನೀನು ನನ್ನ ಭಕ್ತಿಯಿಂದ ಸಂತೋಷಪಟ್ಟಿರುವವಳಾಗಿದ್ದರೆ, ನಾನು ಮಾಡುವ ಪ್ರಜೆಗಳ ಸೃಷ್ಟಿಕಾರ್ಯವು ನಿನ್ನ ಅಪ್ಪಣೆಯಿಂದ ನಿರ್ವಿಘ್ನವಾಗಿ ನಡೆಯುವಂತಾಗಬೇಕು. ॥೩೯॥

॥ ಶ್ರೀದೇವ್ಯುವಾಚ ॥

ಪ್ರಜಾಸರ್ಗಃ ಪ್ರಭವತು ಮಮಾನುಗ್ರಹತಃ ಕಿಲ ।
ನಿರ್ವಿಘ್ನೇನ ಚ ರಾಜೇಂದ್ರ ವೃದ್ಧಿಶ್ಚಾಪ್ಯುತ್ತರೋತ್ತರಂ ॥೪೦॥

ಯಃ ಕಶ್ಚಿತ್ ಪಠತೇ ಸ್ತೋತ್ರಂ ಮದ್ಭಕ್ತ್ಯಾ ತ್ವತ್ಕೃತಂ ಸದಾ ।
ತೇಷಾಂ ವಿದ್ಯಾ ಪ್ರಜಾಸಿದ್ಧಿಃ ಕೀರ್ತಿಃ ಕಾಂತ್ಯಾದಯಃ ಖಲು ॥೪೧॥

ಜಾಯಂತೇ ಧನಧಾನ್ಯಾನಿ ಶಕ್ತಿರಪ್ರಹತಾ ನೃಣಾಂ ।
ಸರ್ವತ್ರ ವಿಜಯೋ ರಾಜನ್ ಸುಖಂ ಶತ್ರುಪರಿಕ್ಷಯಃ ॥೪೨॥

॥ ನಾರಾಯಣ ಉವಾಚ ॥

ಏವಂ ದತ್ವಾ ವರಾನ್ ದೇವೀ ಮನವೇ ಬ್ರಹ್ಮಸೂನವೇ ।
ಅಂತರ್ಧಾನಂ ಗತಾ ಚಾಸೀತ್ ಪಶ್ಯತಸ್ತಸ್ಯ ಧೀಮತಃ ॥೪೩॥

---

ದೇವಿಯು ಹೇಳಿದಳು—ಓ ರಾಜಶ್ರೇಷ್ಠನೇ, ನನ್ನ ಅನುಗ್ರಹದಿಂದ ಯಾವ ವಿಘ್ನವೂ ಇಲ್ಲದೆ ನೀನು ಮಾಡುವ ಪ್ರಜೆಗಳ ಸೃಷ್ಟಿಯೂ ನೆರವೇರುತ್ತಾ, ಕಾಲವು ಮುಂದುವರಿದ ಹಾಗೆಲ್ಲ ಸೃಷ್ಟಿಕಾರ್ಯವು ಹೆಚ್ಚು ಹೆಚ್ಚು ಯಶಸ್ವಿಯಾಗುತ್ತಾ ಬರಲಿ. ಅಷ್ಟೇ ಅಲ್ಲದೆ ॥೪೦॥

ನಿನ್ನಿಂದ ಮಾಡಲ್ಪಟ್ಟ ಈ ಸ್ತೋತ್ರವನ್ನು ನನ್ನಲ್ಲಿ ಭಕ್ತಿಯುಳ್ಳವನಾಗಿ ಯಾವನು ಯಾವಾಗಲೂ ಪಠನಮಾಡುತ್ತಾನೋ ಅಂಥವನಿಗೆ, ವಿದ್ಯೆಯೂ, ಪುತ್ರ ಸಂಪತ್ತೂ, ಯಶಸ್ಸೂ, ಹೆಚ್ಚಾದಕಾಂತಿಯೂ, ಇವೇ ಮೊದಲಾದ ಇಷ್ಟಾರ್ಥಗಳೂ, ಉಂಟಾಗುವುವು. ॥೪೧॥

ಎಲೈ ರಾಜನೇ, ಮನುಷ್ಯರಿಗೆ ಧನ, ಧಾನ್ಯಗಳೂ, ವಿಶೇಷವಾದ ಶಕ್ತಿಯೂ ಎಲ್ಲಾ ಕೆಲಸಗಳಲ್ಲೂ ಜಯವೂ, ಸೌಖ್ಯವೂ, ಶತ್ರುಗಳ ನಾಶವೂ ಈ ಸ್ತೋತ್ರ ಜಪದಿಂದ ಉಂಟಾಗುತ್ತದೆ. ॥೪೨॥

ನಾರಾಯಣನು ಹೇಳಿದನು—ಈ ರೀತಿಯಾಗಿ ದೇವಿಯು ಬ್ರಹ್ಮನ ಮಗನಾದ ಮನುವಿಗೆ ವರಗಳನ್ನು ಕೊಟ್ಟು ಆ ಬುದ್ಧಿಶಾಲಿಯಾದ ಮನುವು ನೋಡುತ್ತಿರುವಾಗಲೇ ಅದೃಶ್ಯಳಾದಳು. ॥೪೩॥

ಅಥ ಲಬ್ಧವರೋ ರಾಜಾ ಬ್ರಹ್ಮಪುತ್ರಃ ಪ್ರತಾಪವಾನ್ ।
ಬ್ರಹ್ಮಾಣಮಬ್ರವೀತ್ತಾತ ಸ್ಥಾನಂ ಮೇ ದೀಯತಾಂ ರಹಃ ॥೪೪॥

ಯತ್ರಾಹಂ ಸಮಧಿಷ್ಠಾಯ ಪ್ರಜಾಃ ಸ್ರಕ್ಷ್ಯಾಮಿ ಪುಷ್ಕಲಾಃ ।
ಯಕ್ಷ್ಯಾಮಿ ಯಜ್ಞೈಃ ದೇವೇಶಂ ತತ್ಸಮಾದಿಶ ಮೇ ಚಿರಂ ॥೪೫॥

ಇತಿ ಪುತ್ರವಚಃ ಶ್ರುತ್ವಾ ಪ್ರಜಾಪತಿಪತಿರ್ವಿಭುಃ ।
ಚಿಂತಯಾಮಾಸ ಸುಚಿರಂ ಕಥಂ ಕಾರ್ಯಂ ಭವೇದಿದಂ ॥೪೬॥

ಸೃಜತೋ ಮೇ ಗತಃ ಕಾಲೋ ವಿಪುಲೋಽನಂತಸಂಖ್ಯಕಃ ।
ಧರಾ ವಾರ್ಭಿಃ ಪ್ಲುತಾ ಮಗ್ನಾ ರಸಂ ಯಾತಾಽಖಿಲಾಶ್ರಯಾ ॥೪೭॥

---

ಅನಂತರದಲ್ಲಿ ಇಷ್ಟಾರ್ಥಲಾಭವನ್ನು ಹೊಂದಿದ ಬ್ರಹ್ಮನ ಮಗನೂ, ಪರಾಕ್ರಮಶಾಲಿಯೂ ಆದ ಮನುರಾಜನು ಬ್ರಹ್ಮನನ್ನು ಕುರಿತು " ಓ ತಂದೆಯೇ, ನನಗೆ ರಹಸ್ಯವಾದ ಮನಸ್ಸಿನ ಏಕಾಗ್ರತೆಯನ್ನುಂಟುಮಾಡುವ ಸ್ಥಾನವನ್ನು ತಿಳಿಸು " ಎಂದು ಕೇಳಿದನು. ॥೪೪॥

ಯಾವ ಸ್ಥಳದಲ್ಲಿ ನಾನು ಇದ್ದುಕೊಂಡು ಹೆಚ್ಚಾಗಿ ಪ್ರಜೆಗಳನ್ನು ಸೃಷ್ಟಿ ಮಾಡಬಹುದೋ, ಎಲ್ಲಿ ಪರಮೇಶ್ವರನ ತೃಪ್ತಿಗೋಸ್ಕರ ಯಜ್ಞಗಳನ್ನು ಮಾಡಬಹುದೋ, ಅಂಥಾ ಏಕಾಂತಸ್ಥಳವನ್ನು ನನಗೆ ಬೇಗನೆ ತಿಳಿಯಹೇಳು, ॥೪೫॥

ಈ ರೀತಿಯಾದ ಮಗನ ಮಾತನ್ನು ಕೇಳಿ ಪ್ರಜಾಪತಿಯಾದ ಮನುವಿನ ತಂದೆಯಾದ ಬ್ರಹ್ಮನು ಈ ಕೆಲಸವು ಆಗುವ ಬಗೆ ಹೇಗೆ ಎಂದು ಬಹಳ ಕಾಲದ ವರೆಗೂ ಯೋಚನೆ ಮಾಡಿದನು. ॥೪೬॥

ನಾನು ಸೃಷ್ಟಿಕೆಲಸವನ್ನು ಮಾಡಬೇಕಾಗಿರುವಾಗಲೇ ಅಪರಿಮಿತವಾದ ಕಾಲವು ಕಳೆದುಹೋಯಿತು. ಎಲ್ಲಕ್ಕೂ ಆಶ್ರಯವಾದ ಭೂಮಿಯೂ, ನೀರಿನಿಂದ ವ್ಯಾಪ್ತವಾಗಿ ಮುಳುಗಿಹೋಯಿತು. ॥೪೭॥

**ಇದಂ ಮಚ್ಚಿಂತಿತಂ ಕಾರ್ಯಂ ಭಗವಾನಾದಿಪೂರುಷಃ ।**
**ಕರಿಷ್ಯತಿ ಸಹಾಯೋ ಮೇ ಯದಾದೇಶೇಽಹಮಾಶ್ರಿತಃ ॥೪೮॥**

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಅಷ್ಟಮಸ್ಕಂಧೇ**
**ಪ್ರಥಮೋಽಧ್ಯಾಯಃ.**

---

ಯಾವ ಬ್ರಹ್ಮನ ಆಶ್ರಯದಲ್ಲಿ ನಾನು ಇರುವೆನೋ ಅವನಿಗೂ ಮೂಲ ಕಾರಣನಾದ ಭಗವಂತನಾದ ಪರಮಪುರುಷನಾದ ನಾರಾಯಣನೇ ಸಹಾಯಮಾಡುವನು. ಅವನ ಸಹಾಯದಿಂದಲೇ ಈ ಕೆಲಸವನ್ನು ನಿರ್ವಹಿಸಬೇಕಾಗಿದೆ ಎಂದು ಬ್ರಹ್ಮನೂ, ಮನುವೂ ಆಲೋಚಿಸಿ ನಿಶ್ಚಯಿಸಿದರು. ಮತ್ತು ಆತಂಕವಿಲ್ಲದವರಾದರು. ||೪೮||

ಇಲ್ಲಿಗೆ ಶ್ರೀ ದೇವೀಭಾಗವತಮಹಾಪುರಾಣದ ಎಂಟನೆಯ ಸ್ಕಂಧದಲ್ಲಿ
ಮೊದಲನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಅಷ್ಟಮಸ್ಕಂಧೇ

### ॥ ದ್ವಿತೀಯೋಽಧ್ಯಾಯಃ ॥

### ಎರಡನೆಯ ಅಧ್ಯಾಯವು

॥ ನಾರಾಯಣ ಉವಾಚ ॥

**ಏವಂ ಮೀಮಾಂಸತಸ್ತಸ್ಯ ಪದ್ಮಯೋನೇಃ ಪರಂತಪ ।**
**ಮನ್ವಾದಿಭಿರ್ಮುನಿವರ್ಯೈರ್ಮರೀಚ್ಯಾದ್ಯೈಃ ಸಮಂತತಃ ॥೧॥**

**ಧ್ಯಾಯತಸ್ತಸ್ಯ ನಾಸಾಗ್ರಾದ್ವಿರಿಂಚೇಸ್ಸಹಸಾಽನಘ ।**
**ವರಾಹಪೋತೋ ನಿರಗಾದೇಕಾಂಗುಲಪ್ರಮಾಣತಃ ॥೨॥**

---

ಈ ಅಧ್ಯಾಯದಲ್ಲಿ ವಿಷ್ಣುವು ವರಾಹಾವತಾರವನ್ನು ಮಾಡಿ ಭೂಮಿಯನ್ನು ನೀರಿನಿಂದ ಮೇಲಕ್ಕೆ ಎತ್ತಿದನೆಂಬ ಕಥೆಯು ಹೇಳಲ್ಪಡುತ್ತದೆ.

ಬ್ರಹ್ಮನು ತನಗೆ ಬೆಂಬಲವಾಗಿ ವಿಷ್ಣುವು ಇರುವಾಗ ನನ್ನ ಸೃಷ್ಟಿ ಮುಂತಾದ ಕಾರ್ಯವು ನೆರವೇರುವುದರಲ್ಲಿ ಸಂಶಯವೇನೆಂದು ಧೈರ್ಯಗೊಂಡು ನಿಶ್ಚಯಮಾಡಿಕೊಳ್ಳಲು, ಅವನ ಕಾರ್ಯನಿರ್ವಾಹಕ್ಕಾಗಿ ವಿಷ್ಣುವೂ ವರಾಹರೂಪದಿಂದ ಅವತರಿಸಿದನು. ಮುಂದಿನ ಕಥೆಯ ವಿಷಯದಲ್ಲಿಯೂ ನಾರದನು ಪ್ರಶ್ನೆಮಾಡಿರಬೇಕೆಂದೂ, ಮರೀಚಿ ಮುಂತಾದ ಬ್ರಹ್ಮನ ಇತರ ಮಾನಸಪುತ್ರರೂ ಬಂದಿದ್ದರೆಂದೂ, ಭಾವವು.

ನಾರಾಯಣನು ಹೇಳಿದನು—ಓ ದುಷ್ಟರನ್ನು ನಿಗ್ರಹಮಾಡುವವನೇ, ಪಾಪರಹಿತನೇ, ಈ ರೀತಿಯಾಗಿ ಸುತ್ತಲೂ ಮನ್ವಾದಿಗಳಿಂದಲೂ, ಮರೀಚಿಯೇ ಮೊದಲಾದ ಋಷಿಶ್ರೇಷ್ಠರಿಂದಲೂ, ಕೂಡಿ ಆಲೋಚನೆಮಾಡುತ್ತಾ ಧ್ಯಾನಿಸುತ್ತಿರುವ ಸಮಯದಲ್ಲಿಯೇ ಆ ಪದ್ಮಯೋನಿಯಾದ ಬ್ರಹ್ಮನ ಮೂಗಿನ ತುದಿಯಿಂದ ಅಕಸ್ಮಾತ್ತಾಗಿ ಒಂದು ಅಂಗುಲ ಪ್ರಮಾಣ ಉಳ್ಳ ವರಾಹ (ಹಂದಿಯ) ಶಿಶುವು ಹೊರಗೆ **ತಟ್ಟನೆ ಬಂದಿತು !** ॥೧-೨॥

ತಸ್ಯೈವ ಪಶ್ಯತಃ ಸ್ವಸ್ಥಃ ಕ್ಷಣೇನ ಕಿಲ ನಾರದ ।
ಕರಿಮಾತ್ರಂ ಪ್ರವವೃಧೇ ತದದ್ಭುತತಮಂಹ್ಯಭೂತ್ ॥೩॥

ಮರೀಚಿಮುಖ್ಯೈರ್ವಿಪ್ರೇಂದ್ರೈಃ ಸನಕಾದ್ಯೈಶ್ಚ ನಾರದ ।
ತದ್ದೃಷ್ಟ್ವಾ ಸೌಕರಂ ರೂಪಂ ತರ್ಕಯಾಮಾಸ ಪದ್ಮಭೂಃ ॥೪॥

ಕಿಮೇತತ್ಸೌಕರವ್ಯಾಜಂ ದಿವ್ಯಂ ಸತ್ವಮವಸ್ಥಿತಂ ।
ಅತ್ಯಾಶ್ಚರ್ಯಮಿದಂ ಜಾತಂ ನಾಸಿಕಾಯಾ ವಿನಿಸ್ಸೃತಂ ॥೫॥

ದೃಷ್ಟೋಽಂಗುಷ್ಠಶಿರೋಮಾತ್ರಃ ಕ್ಷಣಾಚ್ಛೈಲೇಂದ್ರಸನ್ನಿಭಃ ।
ಅಹೋಸ್ವಿದ್ಭಗವಾನ್ ಕಿಂ ವಾ ಯಜ್ಞೋ ಮೇ ಖೇದಯನ್ಮನಃ॥೬॥

---

ಎಲೈ ನಾರದನೇ, ಆ ಬ್ರಹ್ಮನು ನೋಡುತ್ತಿರುವಾಗಲೇ ಆಕಾಶದಲ್ಲಿದ್ದ ಆ ವರಾಹವು ಒಂದು ಕ್ಷಣದಲ್ಲಿ ಅತ್ಯದ್ಭುತವಾದ ರೀತಿಯಲ್ಲಿ ಆನೆಯಪ್ರಮಾಣದಷ್ಟು ದೊಡ್ಡದಾಗಿ ಬೆಳೆದು ಬಿಟ್ಟಿತು. ||೩||

ಎಲೈ ನಾರದನೇ, ಬ್ರಹ್ಮಮಾನಸಪುತ್ರರೂ, ಸೃಷ್ಟಿಕಾರ್ಯವನ್ನು ಮುಂದುವರಿಸುವವರೂ ಆದ ಮರೀಚಿಯೇ ಮೊದಲಾದ ಬ್ರಾಹ್ಮಣೋತ್ತಮರಿಂದಲೂ, ಸನಕಾದಿಗಳಿಂದಲೂ, ಕೂಡಿದ ಆ ಬ್ರಹ್ಮನು ಹಂದಿಯ ಆಕಾರವುಳ್ಳ ಅದನ್ನು ನೋಡಿ ಹೀಗೆ ಊಹಿಸಿದನು. ||೪||

ದಿವ್ಯವಾದ ಪರತತ್ವವೇ ಈ ಹಂದಿಯೆಂಬ ನೆವದಿಂದ ಆವಿರ್ಭವಿಸಿದ ಮಹಾಭೂತವಾಗಿದೆಯೋ ಏನು? ಮೂಗಿನಿಂದ ಹೊರಗೆ ಬಂದ ಇದು ಬಹಳ ಆಶ್ಚರ್ಯವನ್ನುಂಟುಮಾಡುತ್ತಿದೆ! ||೫||

ಯಾವ ಈ ವ್ಯಕ್ತಿಯು ಪೂರ್ವದಲ್ಲಿ ಅಂಗುಷ್ಠಮಾತ್ರ ಪರಿಮಾಣವುಳ್ಳದ್ದಾಗಿತ್ತೋ, ಅದೇ ಒಂದು ಕ್ಷಣಕಾಲದಲ್ಲಿ ಮಹಾಪರ್ವತಕ್ಕೆ ಸಮಾನವಾದ ಪರಿಮಾಣವುಳ್ಳದ್ದಾಗಿರುತ್ತದೆ! ನನ್ನ ಮನಸ್ಸಿಗೆ ಸಂದೇಹದಿಂದ ವ್ಯಾಕುಲತೆಯನ್ನುಂಟುಮಾಡುತ್ತಿರುವ ಈ ಮಹಾಭೂತವು ಮಹಾಮಹಿಮನಾದ ಪರಮೇಶ್ವರಸ್ವರೂಪವೇ? ಅಥವಾ ಯಜ್ಞಪುರುಷನೇ ಆಗಿರಬಹುದೇ? ||೬||

ಇತಿ ತರ್ಕಯತಸ್ತಸ್ಯ ಬ್ರಹ್ಮಣಃ ಪರಮಾತ್ಮನಃ ।
ವರಾಹರೂಪೋ ಭಗವಾನ್ ಜಗರ್ಜಾಚಲಸನ್ನಿಭಃ ॥೭॥

ವಿರಿಂಚಿಂ ಹರ್ಷಯಾಮಾಸ ಸಂಗತಾಂಶ್ಚ ದ್ವಿಜೋತ್ತಮಾನ್ ।
ಸ್ವಗರ್ಜಶಬ್ದಮಾತ್ರೇಣ ದಿಕ್ಪ್ರಾಂತಮನುನಾದಯನ್ ॥೮॥

ತೇ ನಿಶಮ್ಯ ಸ್ವಖೇದಸ್ಯ ಕ್ಷಯಿಷ್ಣುಂ ಘುರ್ಘುರಸ್ವನಂ ।
ಜನಸ್ತಪಸ್ಸತ್ಯಲೋಕವಾಸಿನೋಽಮರವರ್ಯಕಾಃ ॥೯॥

ಛಂದೋಮಯೈಃ ಸ್ತೋತ್ರವರ್ಯೈಃ ಋಕ್ಸಾಮಾಥರ್ವಸಂಭವೈಃ ।
ವಚೋಭಿಃ ಪುರುಷಂ ತ್ವಾದ್ಯಂ ದ್ವಿಜೇಂದ್ರಾಃ ಪರ್ಯನಾಕಿರನ್ ॥೧೦॥

ತೇಷಾಂ ಸ್ತೋತ್ರಂ ನಿಶಮ್ಯಾದ್ಯೋ ಭಗವಾನ್ ಹರಿರೀಶ್ವರಃ ।
ಕೃಪಾವಲೋಕಮಾತ್ರೇಣಾನುಗೃಹೀತ್ವಾಽಪ ಆವಿಶತ್ ॥೧೧॥

---

ಈ ರೀತಿಯಾಗಿ ಬ್ರಹ್ಮನು ಯೋಚಿಸುತ್ತಿರುವಾಗಲೇ ಪರಮಾತ್ಮನಾದ ಬ್ರಹ್ಮನ ಅವತಾರವಾದ, ಪರ್ವತಕ್ಕೆ ಸಮಾನವಾದ ಆ ವರಾಹವು ಗರ್ಜಿಸಿತು. ॥೭॥

ಆ ಭಗವಂತನು ದಿಕ್ಕುಗಳ ಕೊನೆಯಲ್ಲೂ ಪ್ರತಿಧ್ವನಿಮಾಡುತ್ತಿರುವ ತನ್ನ ಗರ್ಜನೆಯ ಶಬ್ದಮಾತ್ರದಿಂದಲೇ ಬ್ರಹ್ಮನನ್ನೂ, ಅಲ್ಲಿ ಸೇರಿದ್ದ ಬ್ರಾಹ್ಮಣೋತ್ತಮರನ್ನೂ ಸಂತೋಷಪಡಿಸಿದನು. ॥೮॥

ಜನೋಲೋಕ, ತಪೋಲೋಕ, ಸತ್ಯಲೋಕ ಇವುಗಳಲ್ಲಿ ವಾಸಿಸುವ ಆ ದೇವಶ್ರೇಷ್ಠರೂ, ಬ್ರಾಹ್ಮಣೋತ್ತಮರೂ ಸಹ ತಮ್ಮ ದುಃಖವನ್ನು ನಾಶಪಡಿಸುವ ಆ ವರಾಹದ "ಘುರ್ಘುರ" ಎಂಬ ಶಬ್ದವನ್ನು ಕೇಳಿ ಋಗ್ವೇದ, ಸಾಮವೇದ, ಅಥರ್ವವೇದಗಳಲ್ಲಿರುವ ಸ್ತೋತ್ರರೂಪವಾದ ಮಾತುಗಳಿಂದ ಆ ಆದಿಪುರುಷನನ್ನು ಸ್ತುತಿಸಿದರು. ॥೯-೧೦॥

ಅವರು ಮಾಡಿದ ಸ್ತೋತ್ರಗಳನ್ನು ಕೇಳಿ ಎಲ್ಲಕ್ಕೂ ಮೊದಲನೆಯವನಾದ ಭಗವಂತನಾದ ಪರಮೇಶ್ವರನು ದಯಾಪೂರ್ಣ ದೃಷ್ಟಿಯಿಂದ ಅವರೆಲ್ಲರನ್ನೂ ಅನುಗ್ರಹಿಸಿ ನೀರಿನೊಳಗೆ ಪ್ರವೇಶಮಾಡಿದನು. ॥೧೧॥

**ತಸ್ಯಾಂತರ್ವಿಶತಃ ಕ್ರೂರಸಟಾಘಾತಪ್ರಪೀಡಿತಃ ।**
**ಸಮುದ್ರೋಽಥಾಬ್ರವೀದ್ದೇವ ರಕ್ಷ ಮಾಂ ಶರಣಾರ್ತಿಹನ್ ॥೧೨॥**

**ಇತ್ಯಾಕರ್ಣ್ಯ ಸಮುದ್ರೋಕ್ತಂ ವಚನಂ ಹರಿರೀಶ್ವರಃ ।**
**ವಿದಾರಯನ್ ಜಲಚರಾನ್ ಜಗಾಮಾಂತರ್ಜಲೇ ವಿಭುಃ ॥೧೩॥**

**ಇತಸ್ತತೋಽಭಿಧಾವನ್ ಸ ವಿಚಿನ್ವನ್ ಪೃಥಿವೀಂ ಧರಾಂ ।**
**ಆಘ್ರಾಯಾಘ್ರಾಯ ಸರ್ವೇಶೋ ಧರಾಮಾಸಾದಯಚ್ಛನೈಃ ॥೧೪॥**

**ಅಂತರ್ಜಲಗತಾಂ ಭೂಮಿಂ ಸರ್ವಸತ್ವಾಶ್ರಯಾಂ ತದಾ ।**
**ಭೂಮಿಂ ಸ ದೇವದೇವೇಶೋ ದಂಷ್ಟ್ರಯೋದಾಜಹಾರ ತಾಂ ॥೧೫॥**

**ತಾಂ ಸಮುದ್ಧೃತ್ಯ ದಂಷ್ಟ್ರಾಗ್ರೇ ಯಜ್ಞೇಶೋ ಯಜ್ಞಪೂರುಷಃ ।**
**ಶುಶುಭೇ ದಿಗ್ಗಜೋ ಯದ್ವದುದ್ಧೃತ್ಯಾಽಥ ಸುಪದ್ಮಿನೀಂ ॥೧೬॥**

---

ಅನಂತರದಲ್ಲಿ ಅವನು ನೀರಿನೊಳಗೆ ಪ್ರವೇಶಿಸುತ್ತಿರಲಾಗಿ, ಆ ವರಾಹದ ಕಠಿಣವಾದ ಶರೀರದ ಕೂದಲುಗಳ ಸಮೂಹದಿಂದ ವ್ಯಥೆಗೊಂಡ ಸಮುದ್ರರಾಜನು, ಓ ಸ್ವಾಮಿಯೇ, ಶರಣಾಗತರ ದುಃಖವನ್ನು ನಿವಾರಿಸುವ ರಕ್ಷಕನೇ, ನನ್ನನ್ನು ಕಾಪಾಡು, ಎಂದು ಪ್ರಾರ್ಥಿಸಿದನು. ॥೧೨॥

ಈ ರೀತಿಯಾಗಿ ಸಮುದ್ರನು ಹೇಳಿದ ಸ್ತೋತ್ರಪ್ರಾರ್ಥನೆಗಳನ್ನು ಕೇಳಿ ಪರಮೇಶ್ವರನು ನೀರೊಳಗಿರುವ ದುಷ್ಟ ಪ್ರಾಣಿಗಳನ್ನು ಸೀಳುತ್ತಾ ನೀರಿನ ಮಧ್ಯಕ್ಕೆ ಹೊರಟುಹೋದನು. ॥೧೩॥

ಸರ್ವಶಕ್ತನಾದ ಆ ವರಾಹನು ಅಲ್ಲಲ್ಲಿ ಓಡಾಡುತ್ತಾ, ಭೂದೇವಿಯನ್ನು ಹುಡುಕುತ್ತಾ ಮೂಸಿ ನೋಡಿ ನೋಡಿ ನಿಧಾನವಾಗಿ ವರಾಹಗಳಿಗೆ ಸ್ವಾಭಾವಿಕವಾದ ಘ್ರಾಣೇಂದ್ರಿಯ ಸಹಾಯದಿಂದ ಭೂಮಿಯನ್ನು ಕಂಡುಹಿಡಿದನು. ॥೧೪॥

ದೇವತೆಗಳಿಗೆಲ್ಲರಿಗೂ ಒಡೆಯನಾದ ಆ ಭಗವಂತನು, ನೀರಿನ ಒಳಗಡೆಯಲ್ಲಿದ್ದ, ಸಕಲಪ್ರಾಣಿಗಳಿಗೂ ಆಶ್ರಯವಾದ, ಆ ಭೂಮಿಯನ್ನು ಕೋರೆದಾಡೆಯಲ್ಲಿ ಸಿಕ್ಕಿಸಿಕೊಂಡು ಮೇಲಕ್ಕೆತ್ತಿದನು. ॥೧೫॥

ದಿಗ್ಗಜವು ಸೊಂಡಲಿನ ತುದಿಯಿಂದ ಕಮಲದಬಳ್ಳಿಯನ್ನೆತ್ತುವ ಹಾಗೆ, ಯಜ್ಞಗಳಿಗೆಲ್ಲಕ್ಕೂ ಯಜಮಾನನಾದ ಆ ಯಜ್ಞಪುರುಷನು ಕೋರೆದಾಡೆಯ ತುದಿಯಿಂದ ಆ ಭೂಮಿಯನ್ನು ಎತ್ತಿ ಧರಿಸಿ ಪ್ರಕಾಶಿಸಿದನು. ॥೧೬॥

ತಂ ದೃಷ್ಟ್ವಾ ದೇವದೇವೇಶೋ ವಿರಿಂಚಿಃ ಸ ಮನುಃ ಸ್ವರಾಟ್ ।
ತುಷ್ಟಾವ ವಾಗ್ಭಿಃ ದೇವೇಶಂ ದಂಷ್ಟ್ರೋದ್ಧೃತವಸುಂಧರಂ ॥೧೭॥

॥ ಬ್ರಹ್ಮೋವಾಚ ॥

ಜಿತಂ ತೇ ಪುಂಡರೀಕಾಕ್ಷ ಭಕ್ತಾನಾಮಾರ್ತಿನಾಶನ ।
ಖರ್ವೀಕೃತಸುರಾಧಾರ ಸರ್ವಕಾಮಫಲಪ್ರದ ॥೧೮॥

ಇಯಂ ಚ ಧರಣೀ ದೇವ ಶೋಭತೇ ವಸುಧಾ ತವ ।
ಪದ್ಮಿನೀವ ಸುಪತ್ರಾಢ್ಯಾ ಮತಂಗಜಕರೋದ್ಧೃತಾ ॥೧೯॥

ಇದಂ ಚ ತೇ ಶರೀರಂ ವೈ ಶೋಭತೇ ಭೂಮಿಸಂಗಮಾತ್ ।
ಉದ್ಧೃತಾಂಬುಜಶುಂಡಾಗ್ರಕರೀಂದ್ರತನುಸನ್ನಿಭಂ ॥೨೦॥

---

ದೇವತೆಗಳಿಗೆಲ್ಲರಿಗೂ ಒಡೆಯನಾದ ಬ್ರಹ್ಮನು, ಕೋರೆದಾಡೆಯಿಂದ ಭೂಮಿಯನ್ನು ಮೇಲಕ್ಕೆ ಎತ್ತಿದ ಆ ವರಾಹದೇವನನ್ನು ನೋಡಿ ಸ್ತೋತ್ರಗಳಿಂದ ಹೊಗಳಿದನು. ॥೧೭॥

ಬ್ರಹ್ಮನು ಹೇಳಿದನು— ಭಕ್ತರ ದುಃಖವನ್ನು ನಾಶಪಡಿಸತಕ್ಕವನೇ, ಕಮಲದಂತೆ ಕಣ್ಣುಳ್ಳವನೇ ದೇವತೆಗಳಿಗೂ ಸ್ವರ್ಗವೇ ಮೊದಲಾದ ಲೋಕಗಳಿಗೂ ಆಧಾರವಾಗಿರುವ ಮೇರುವನ್ನೂ ಮೀರಿಸಿರುವವನೇ, ಸಮಸ್ತ ಇಷ್ಟಾರ್ಥಗಳನ್ನೂ ಕೊಡುವವನೇ, ನಿನ್ನಿಂದ ಈ ಕಾರ್ಯವು ಯಶಸ್ವಿಯಾಗಿ ಸಾಧಿಸಲ್ಪಟ್ಟಿತು. ॥೧೮॥

ಓ ಎಲ್ಲ ಪ್ರಪಂಚಕ್ಕೂ ಸ್ವಾಮಿಯೇ, ಆನೆಯು ಸೊಂಡಲಿನಿಂದ ಎತ್ತಿ ಧರಿಸಿರುವ ಒಳ್ಳೆಯ ದಳಗಳಿಂದ ಮನೋಹರವಾದ ಕಮಲದಿಂದ ಶೋಭಿಸುವಂತೆ, ಈ ಭೂಮಿಯು ನಿನಗೆ ಅಲಂಕಾರಪ್ರಾಯವಾಗಿದೆ. ॥೧೯॥

ಈ ನಿನ್ನ ಶರೀರವು ಹೀಗೆ ಉಂಟಾಗಿರುವ ಭೂಮಿಯ ಸಂಬಂಧದಿಂದ ಸೊಂಡಲಿನ ತುದಿಯಿಂದ ಕಮಲವನ್ನೆತ್ತಿರುವ ಗಜರಾಜನ ಶರೀರಕ್ಕೆ ಸಮಾನವಾಗಿ ಪ್ರಕಾಶಿಸುತ್ತಿದೆ. ॥೨೦॥

ನಮೋ ನಮಸ್ತೇ ದೇವೇಶ ಸೃಷ್ಟಿಸಂಹಾರಕಾರಕ ।
ದಾನವಾನಾಂ ವಿನಾಶಾಯ ಕೃತನಾನಾಕೃತೇ ಪ್ರಭೋ ॥೨೦॥

ಅಗ್ರತಶ್ಚ ನಮಸ್ತೇಽಸ್ತು ಪೃಷ್ಠತಶ್ಚ ನಮೋ ನಮಃ ।
ಸರ್ವಾಮರಾಧಾರಭೂತ ಬೃಹದ್ಧಾಮ ನಮೋಽಸ್ತು ತೇ ॥೨೨॥

ತ್ವಯಾಽಹಂ ಚ ಪ್ರಜಾಸರ್ಗೇ ನಿಯುಕ್ತಃ ಶಕ್ತಿಬೃಂಹಿತಃ ।
ತ್ವದಾಜ್ಞಾವಶತಃ ಸರ್ಗಂ ಕರೋಮಿ ವಿಕರೋಮಿ ಚ ॥೨೩॥

ತ್ವತ್ಸಹಾಯೇನ ದೇವೇಶಾ ಅಮರಾಶ್ಚ ಪುರಾ ಹರೇ ।
ಸುಧಾಂ ವಿಭೇಜಿರೇ ಸರ್ವೇ ಯಥಾಕಾಲಂ ಯಥಾಬಲಂ ॥೨೪॥

---

ಓ ದೇವತೆಗಳಿಗೆಲ್ಲರಿಗೂ ಒಡೆಯನೇ, ಸೃಷ್ಟಿಸ್ಥಿತಿ ಸಂಹಾರಗಳನ್ನು ಮಾಡುವ ಸ್ವಾಮಿಯೇ, ರಾಕ್ಷಸರನ್ನು ನಾಶಮಾಡಲು ಅನೇಕ ವಿಧವಾದ ರೂಪಗಳನ್ನು ಪಡೆಯುವವನೇ ನಿನಗೆ ನಮಸ್ಕಾರವು. ॥೨೦॥

ಸರ್ವ ದೇವತೆಗಳಿಗೂ ಆಶ್ರಯನಾದವನೇ, ಅದ್ಭುತಾಕಾರದ ದೊಡ್ಡದೂ ಮೇಲಾದುದೂ ಆದ ವೈಕುಂಠವೆಂಬ ವಾಸಸ್ಥಾನವುಳ್ಳವನೂ, ಆದ ಸ್ವಾಮಿಯೇ, ನಿನಗೆ ಮುಂಭಾಗದಲ್ಲೂ, ಹಿಂಭಾಗದಲ್ಲೂ, ಎಲ್ಲ ಕಡೆಗಳಲ್ಲಿಯೂ, ನಮಸ್ಕಾರವು. ॥೨೨॥

ನಿನ್ನ ಬೆಂಬಲದಿಂದ ನಾನು ಈ ಪ್ರಪಂಚವನ್ನೂ, ಪ್ರಜೆಗಳನ್ನೂ, ಸೃಷ್ಟಿ ಮಾಡುವುದರಲ್ಲಿ ನಿಯುಕ್ತನಾಗಿ, ಶಕ್ತಿಯಿಂದ ದೊಡ್ಡವನಾಗಿ ನಿನ್ನಪ್ಪಣೆಯ ಮಹಿಮೆಯನ್ನು ಅನುಸರಿಸಿ ವಿಶೇಷವಾಗಿ ಸೃಷ್ಟಿಕಾರ್ಯವನ್ನು ನೆರವೇರಿಸುತ್ತಿರುತ್ತೇನೆ. ॥೨೩॥

ಭಕ್ತರ ಪಾಪಗಳನ್ನು ನಿವಾರಿಸುವ ಓ ಹರಿಯೇ, ಪೂರ್ವಕಾಲದಲ್ಲಿ ನಿನ್ನ ಸಹಾಯದಿಂದಲೇ ಇಂದ್ರನೇ ಮೊದಲಾದ ಎಲ್ಲ ದೇವಶ್ರೇಷ್ಠರೂ ತಮ್ಮ ಶಕ್ತಿಗೆ ಅನುಸಾರವಾಗಿ ಸಕಾಲದಲ್ಲಿ ಅಮೃತವನ್ನು ಪಡೆದರು. ॥೨೪॥

ಇಂದ್ರಸ್ತ್ರಿಲೋಕೀಸಾಮ್ರಾಜ್ಯಂ ಲಬ್ಧವಾಂಸ್ತ್ವನ್ನಿದೇಶತಃ ।
ಭುನಕ್ತಿ ಲಕ್ಷ್ಮೀಂ ಬಹುಳಾಂ ಸುರಸಂಘಪ್ರಪೂಜಿತಃ ॥೨೫॥

ವಹ್ನಿಃ ಪಾವಕತಾಂ ಲಬ್ಧ್ವಾ ಜಾಠರಾದಿವಿಭೇದತಃ ।
ದೇವಾಸುರಮನುಷ್ಯಾಣಾಂ ಕರೋತ್ಯಾಪ್ಯಾಯನಂ ತಥಾ ॥೨೬॥

ಧರ್ಮರಾಜೋಽಥ ಪಿತೄಣಾಮಧಿಪಃ ಸರ್ವಕರ್ಮದೃಕ್ ।
ಕರ್ಮಣಾಂ ಫಲದಾತಾಽಸೌ ತ್ವನ್ನಿಯೋಗಾದಧೀಶ್ವರಃ ॥೨೭॥

ನೈರ್ಋತೋ ರಕ್ಷಸಾಮೀಶೋ ಯಕ್ಷೋ ವಿಘ್ನವಿನಾಶನಃ ।
ಸರ್ವೇಷಾಂ ಪ್ರಾಣಿನಾಂ ಕರ್ಮಸಾಕ್ಷೀ ತ್ವತ್ತಃ ಪ್ರಜಾಯತೇ ॥೨೮॥

ವರುಣೋ ಯಾದಸಾಮೀಶೋ ಲೋಕಪಾಲೋ ಜಲಾಧಿಪಃ ।
ತ್ವದಾಜ್ಞಾಬಲಮಾಶ್ರಿತ್ಯ ಲೋಕಪಾಲತ್ವಮಾಗತಃ ॥೨೯॥

---

ನಿನ್ನ ಅನುಗ್ರಹದಿಂದ ದೇವೇಂದ್ರನು ತ್ರಿಲೋಕಾಧಿಪತ್ಯವನ್ನು ಹೊಂದಿ ದೇವ ಸಮೂಹದಿಂದ ಪೂಜಿಸಲ್ಪಟ್ಟು ಹೆಚ್ಚಾದ ಐಶ್ವರ್ಯವನ್ನೂ ಅನುಭವಿಸುತ್ತಿರುತ್ತಾನೆ. ॥೨೫॥

ಹಾಗೆಯೇ ಅಗ್ನಿ ದೇವನೂ ಪಾವಕನೆಂಬ ಹೆಸರಿನಿಂದ ಜಠರಾಗ್ನಿ, ಬಡಬಾಗ್ನಿ ಗೃಹ್ಯಾಗ್ನಿ ಮೊದಲಾದ ಪ್ರಭೇದಗಳಿಂದ, ದೇವತೆಗಳು, ರಾಕ್ಷಸರು, ಮನುಷ್ಯರು ಇವರಿಗೆ ಸಂತೋಷವನ್ನುಂಟುಮಾಡುತ್ತಿರುತ್ತಾನೆ. ॥೨೬॥

ಹಾಗೆಯೇ ಪಿತೃದೇವತೆಗಳಿಗೆಲ್ಲರಿಗೂ ಪ್ರಭುವೂ, ಸಮಸ್ತ ವಿಷಯಗಳನ್ನೂ ಸಾಕ್ಷಿಯಾಗಿ ನೋಡತಕ್ಕವನೂ, ಪುಣ್ಯಪಾಪಕರಗಳಾದ ಒಳ್ಳೆಯ ಮತ್ತು ಕೆಟ್ಟ ಕರ್ಮಗಳಿಗೆ ಫಲವನ್ನು ಕೊಡತಕ್ಕವನೂ, ಆದ ಧರ್ಮರಾಜನು ನಿನ್ನ ಪ್ಪಣೆಯಿಂದ ದೊಡ್ಡ ಪ್ರಭುವಾಗಿದ್ದಾನೆ ! ॥೨೭॥

ನಿನ್ನ ಅನುಗ್ರಹದಿಂದ ನಿರ್ಋತಿಯೂ ರಾಕ್ಷಸರಾಜನಾದನು. ಅಲ್ಲದೆ ಅವನು ವಿಘ್ನನಾಶಕನಾದ ಯಕ್ಷನೂ ಆಗಿ ನಿನ್ನಿಂದ ಎಲ್ಲ ಪ್ರಾಣಿಗಳ ಕರ್ಮಗಳಿಗೂ ಸಾಕ್ಷಿಯಾಗಿ ಇರುತ್ತಾನೆ. ॥೨೮॥

ಜಲಾಧಿಪತಿಯೂ ಲೋಕಪಾಲನೂ ಆದ ವರುಣನೂ, ನಿನ್ನ ಆಜ್ಞಾಶಕ್ತಿಯನ್ನು ಆಶ್ರಯಿಸಿ ಲೋಕಪಾಲಕನೆಂಬ ಹೆಸರನ್ನೂ ಪದವಿಯನ್ನೂ ಹೊಂದಿದ್ದಾನೆ. ॥೨೯॥

ವಾಯುರ್ಗಂಧವಹಸ್ಸರ್ವಭೂತಪ್ರಾಣನಕಾರಣಂ ।
ಜಾತಸ್ತ್ವವ ನಿದೇಶೇನ ಲೋಕಪಾಲೋ ಜಗದ್ಗುರುಃ ॥೩೦॥

ಕುಬೇರಃ ಕಿನ್ನರಾದೀನಾಂ ಯಕ್ಷಾಣಾಂ ಜೀವನಾಶ್ರಯಃ ।
ತ್ವದಾಜ್ಞಾಂತರ್ಗತಸ್ಸರ್ವಲೋಕಪೇಷು ಚ ಮಾನ್ಯಭೂಃ ॥೩೧॥

ಈಶಾನಸ್ಸರ್ವರುದ್ರಾಣಾಮಿಶ್ವರಾಂತಕರಃ ಪ್ರಭುಃ ।
ಜಾತೋ ಲೋಕೇಶವಂದ್ಯೋಽಸೌ ಸರ್ವದೇವಾಧಿಪಾಲಕಃ ॥೩೨॥

ನಮಸ್ತುಭ್ಯಂ ಭಗವತೇ ಜಗದೀಶಾಯ ಕುರ್ಮಹೇ ।
ಯಸ್ಯಾಂಶಭಾಗಾಸ್ಸರ್ವೇ ಹಿ ಜಾತಾ ದೇವಾಸ್ಸಹಸ್ರಶಃ ॥೩೩॥

॥ ನಾರದ ಉವಾಚ ॥

ಏವಂ ಸ್ತುತೋ ವಿಶ್ವಸೃಜಾ ಭಗವಾನಾದಿಪೂರುಷಃ ।
ಲೀಲಾವಲೋಕಮಾತ್ರೇಣಾಪ್ಯನುಗ್ರಹಮಾವಾಸೃಜತ್ ॥೩೪॥

---

ಸಮಸ್ತಭೂತಗಳೂ ಬದುಕಿರುವುದಕ್ಕೆ ಕಾರಣನೂ, ಜಗತ್ತಿಗೆಲ್ಲಕ್ಕೂ ಗುರುವೂ, ಎಲ್ಲಬಗೆಯ ವಾಸನೆ ಪರಿಮಳಗಳನ್ನು ಸ್ಥಳದಿಂದ ಸ್ಥಳಕ್ಕೆ ಸಾಗಿಸುವವನೂ ಆದ ವಾಯುವು ನಿನ್ನ ಪ್ರಣೆಯಿಂದ ಲೋಕಪಾಲಕನಾದನು. ॥೩೦॥

ಕಿನ್ನರರೇ ಮೊದಲಾದವರಿಗೂ, ಯಕ್ಷರಿಗೂ, ಜೀವಿಸಲು ಆಶ್ರಯನಾದ, ಕುಬೇರನೂ ನಿನ್ನ ಆಜ್ಞೆಗೆ ವಶನಾಗಿ ಎಲ್ಲ ಲೋಕಪಾಲಕರಲ್ಲಿಯೂ, ಪೂಜನೀಯನಾದನು. ॥೩೧॥

ಏಕಾದಶರುದ್ರರಿಗೂ ಪ್ರಭುವೂ, ಈಶ್ವರಸಾಮಾಪ್ಯವನ್ನೂ ಸಕಾಲದಲ್ಲಿ ಪ್ರಳಯಗಳನ್ನೂ ಉಂಟುಮಾಡುವವನೂ, ಸರ್ವದೇವತೆಗಳನ್ನೂ ಕಾಪಾಡುವವನೂ ಆದ ಪ್ರಸಿದ್ಧನಾದ ಈಶಾನನು ಎಲ್ಲ ಲೋಕೇಶರಿಂದಲೂ ದಿಕ್ಪಾಲಕರಿಂದಲೂ ನಮಸ್ಕರಿಸಲ್ಪಡುವವನಾದನು. ॥೩೨॥

ಯಾವ ಸ್ವಾಮಿಯ ಅಂಶದಿಂದ ಸಹಸ್ರಪ್ರಕಾರವಾಗಿ ಎಲ್ಲ ದೇವತೆಗಳೂ ಉದ್ಭವಿಸಿದರೋ ಅಂಥಾ ಮಹಾಮಹಿಮಶಾಲಿಯೂ, ಭಗವಂತನೂ, ಲೋಕಕ್ಕೆಲ್ಲಕ್ಕೂ ಪ್ರಭುವೂ ಆದ ನಿನಗೆ ಅನೇಕ ನಮಸ್ಕಾರಗಳನ್ನು ಮಾಡುತ್ತೇನೆ. ॥೩೩॥

ನಾರದನು ಹೇಳಿದನು—ಈ ರೀತಿಯಾಗಿ ಸೃಷ್ಟಿಕರ್ತನಾದ ಬ್ರಹ್ಮನಿಂದ

ತತ್ರೈವಾಭ್ಯಾಗತಂ ದೈತ್ಯಂ ಹಿರಣ್ಯಾಕ್ಷಂ ಮಹಾಸುರಂ ।
ರುಂಧಾನಮುಧ್ವನೋ ಭೀಮಂ ಗದಯಾಽತಾಡಯದ್ಧರಿಃ ॥೩೫॥

ತದ್ರಕ್ತಪಂಕದಿಗ್ಧಾಂಗೋ ಭಗವಾನಾದಿಪೂರುಷಃ ।
ಉದ್ಧೃತ್ಯ ಧರಣೀಂ ದೇವೋ ದಂಷ್ಟ್ರಯಾ ಲೀಲಯಾಽಪ್ಸು ತಾಂ ॥೩೬॥

ನಿವೇಶ್ಯ ಲೋಕನಾಥೇಶೋ ಜಗಾಮ ಸ್ಥಾನಮಾತ್ಮನಃ ।
ಏತದ್ಭಗವತಶ್ಚಿತ್ರಂ ಧರಣ್ಯುದ್ಧರಣಂ ಪರಂ ॥೩೭॥

## ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಅಷ್ಟಮಸ್ಕಂಧೇ ದ್ವಿತೀಯೋಽಧ್ಯಾಯಃ

---

ಸ್ತುತಿಸಲ್ಪಟ್ಟ, ಭಗವಂತನಾದ ಆದಿಪುರುಷನು ವಿಲಾಸಪೂರ್ವಕವಾದ ದೃಷ್ಟಿಯಿಂದ ಅವರೆಲ್ಲರನ್ನೂ ಅನುಗ್ರಹಿಸಿದನು. ॥೩೪॥

ಆ ಸಮಯದಲ್ಲಿ ಅಲ್ಲಿಗೆ ಬಂದು ಎದುರಿಸಿ ದಾರಿಯನ್ನು ತಡೆಗಟ್ಟುತ್ತಿದ್ದ, ಭಯಂಕರನೂ, ದೊಡ್ಡ ರಾಕ್ಷಸನೂ ಆದ ಹಿರಣ್ಯಾಕ್ಷನನ್ನು ಹರಿಯು ಗದೆಯಿಂದ ಹೊಡೆದನು. ॥೩೫॥

ಆ ಹಿರಣ್ಯಾಕ್ಷನ ರಕ್ತವೆಂಬ ಕೆಸರಿನಿಂದ ನೆನೆದ ಅವಯವಗಳುಳ್ಳ, ಮಹಾಮಹಿಮನೂ, ಆದಿಪುರುಷನೂ, ಲೋಕಕ್ಕೆಲ್ಲಕ್ಕೂ ರಕ್ಷಕನೂ ಆದ ಸ್ವಾಮಿಯು ಭೂಮಿಯನ್ನು ಅನಾಯಾಸವಾಗಿ ಕೋರೆದಾಡೆಯಿಂದ ಎತ್ತಿ ನೀರಿನಲ್ಲಿ ಮುಳುಗದಂತೆ ಇಟ್ಟು ತನ್ನ ಸ್ಥಾನಕ್ಕೆ ಹೊರಟು ಹೋದನು. ಈ ಆಶ್ಚರ್ಯಕರವಾದ ಶ್ರೇಷ್ಠವಾದ, ಭಗವಂತನು ನೆರವೇರಿಸಿದ, ಭೂಮಿಯು ಈ ಉದ್ಧಾರಕಾರ್ಯದ ವರ್ಣನೆಯಿಂದ ಕೂಡಿದ ಉತ್ತಮವಾದ ಚರಿತ್ರೆಯನ್ನು ಯಾವ ಮನುಷ್ಯನು ಓದುವನೋ, ಹೇಳುವನೋ, ಮತ್ತು ಕೇಳುವನೋ, ಅವನು ಸಮಸ್ತವಾದ ಪಾಪಗಳಿಂದಲೂ ಬಿಡಲ್ಪಟ್ಟವನಾಗಿ ಕಡೆಗೆ ವಿಷ್ಣುಲೋಕವನ್ನು ಹೊಂದುವನು. ॥೩೬-೩೭॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಎಂಟನೆಯ ಸ್ಕಂಧದಲ್ಲಿ ಎರಡನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಅಷ್ಟಮಸ್ಕಂಧೇ

### || ತೃತೀಯೋಽಧ್ಯಾಯಃ ||

### ಮೂರನೆಯ ಅಧ್ಯಾಯವು

|| ನಾರಾಯಣ ಉವಾಚ ||

**ಮಹೀಂ ದೇವಃ ಪ್ರತಿಷ್ಠಾಪ್ಯ ಯಥಾಸ್ಥಾನೇ ಚ ನಾರದ ।**
**ವೈಕುಂಠಂ ಲೋಕಮಗಮತ್ ಬ್ರಹ್ಮೋವಾಚ ಸ್ವಮಾತ್ಮಜಂ ॥೧॥**

**ಸ್ವಾಯಂಭುವ ಮಹಾಬಾಹೋ ಪುತ್ರ ತೇಜಸ್ವಿನಾಂ ವರ ।**
**ಸ್ಥಾನೇ ಮಹೀಮಯೇ ತಿಷ್ಠ ಪ್ರಜಾಃ ಸೃಜ ಯಥೋಚಿತಂ ॥೨॥**

**ದೇಶಕಾಲವಿಭಾಗೇನ ಯಜ್ಞೇಶಂ ಪುರುಷಂ ಯಜ ।**
**ಉಚ್ಚಾವಚಪದಾರ್ಥೈಶ್ಚ ಯಜ್ಞಸಾಧನಕೈರ್ವಿಭೋ ॥೩॥**

---

ಈ ಅಧ್ಯಾಯದಲ್ಲಿ ಸ್ವಾಯಂಭುವಮನುವಿನ ವಂಶವು ವರ್ಣಿಸಲ್ಪಡುತ್ತದೆ.

ನಾರಾಯಣನು ಹೇಳಿದನು--ಎಲೈ ನಾರದನೇ, ವರಾಹಮೂರ್ತಿಯು ಹೀಗೆ ಭೂಮಿಯನ್ನು ಸ್ವಸ್ಥಾನದಲ್ಲಿರಿಸಿ ವೈಕುಂಠಲೋಕಕ್ಕೆ ಹೊರಟುಹೋದನು. ಅನಂತರದಲ್ಲಿ ಬ್ರಹ್ಮನು ತನ್ನ ಮಗನನ್ನು ಕುರಿತು ಈ ರೀತಿಯಾಗಿ ಹೇಳಿದನು. ||೧||

ತೇಜಸ್ಸುಳ್ಳವರಲ್ಲಿ ಶ್ರೇಷ್ಠನೂ, ಪರಾಕ್ರಮಶಾಲಿಯೂ ಆದ, ಸ್ವಾಯಂಭುವನೆಂಬ ಮಗನೇ, ಈ ಭೂರೂಪವಾದ ಸ್ಥಾನದಲ್ಲಿದ್ದುಕೊಂಡು ಯೋಗ್ಯವಾದ ರೀತಿಯಲ್ಲಿ ಔಚಿತ್ಯವನ್ನರಿತು ಪ್ರಜೆಗಳನ್ನು ಸೃಷ್ಟಿಮಾಡುತ್ತಿರು. ||೨||

ಓ ಗಟ್ಟಿಗನಾದ ಮನುವೇ, ಆಯಾ ಕರ್ಮಗಳಿಗೆ ತಕ್ಕಂತೆ ವಿಂಗಡಿಸಿ ಸ್ಪಷ್ಟಪಡಿಸಿ ಹೇಳಿರುವ ದೇಶವನ್ನೂ, ಕಾಲವನ್ನೂ, ಅನುಸರಿಸಿ ಯಾಗಮಾಡಲು ಸಾಧನ

ಧರ್ಮಮಾಚರ ಶಾಸ್ತ್ರೋಕ್ತಂ ವರ್ಣಾಶ್ರಮನಿಬಂಧನಂ ।
ಏತೇನ ಕ್ರಮಯೋಗೇನ ಪ್ರಜಾವೃದ್ಧಿರ್ಭವಿಷ್ಯತಿ ॥೪॥

ಪುತ್ರಾನುತ್ಪಾದ್ಯಗುಣತಃ ಕೀರ್ತ್ಯಾ ಕಾಂತ್ಯಾಽತ್ಮರೂಪಿಣಃ ।
ವಿದ್ಯಾವಿನಯಸಂಪನ್ನಾನ್ಸದಾಚಾರವತಾಂ ವರಾನ್ ॥೫॥

ಕನ್ಯಾಶ್ಚ ದತ್ವಾ ಗುಣವದ್ಯಶೋವದ್ಭ್ಯಸ್ಸಮಾಹಿತಃ ।
ಮನಸ್ಸಮ್ಯಕ್ಸಮಾಧಾಯ ಪ್ರಧಾನಪುರುಷೇ ಪರೇ ॥೬॥

ಭಕ್ತಿಸಾಧನಯೋಗೇನ ಭಗವತ್ಪರಿಚರ್ಯಯಾ ।
ಗತಿಮಿಷ್ಟಾಂ ಸದಾ ವಂದ್ಯಾಂ ಯೋಗಿನಾಂ ಗಮಿತಾ ಭವಾನ್ ॥೭॥

ಇತ್ಯಾಶ್ವಾಸ್ಯ ಮನುಂ ಪುತ್ರಂ ಪದ್ಮಯೋನಿಃ ಪ್ರಜಾಪತಿಃ ।
ಪ್ರಜಾಸರ್ಗೇ ನಿಯಮ್ಯಾಮುಂ ಸ್ವಧಾಮ ಪ್ರತ್ಯಪದ್ಯತ ॥೮॥

---

ಗಳಾದ ನಾನಾಬಗೆಯ ಪದಾರ್ಥಗಳಿಂದ, ಯಜ್ಞರೂಪಿಯಾದ ಭಗವಂತನನ್ನುದ್ದೇಶಿಸಿ ಯಾಗವನ್ನೂ ಮಾಡು. ॥೩॥

ಶಾಸ್ತ್ರಗಳಲ್ಲಿ ಹೇಳಿರುವ ಕ್ರಮವನ್ನನುಸರಿಸಿ ವರ್ಣಾಶ್ರಮಧರ್ಮಗಳ ಅನುಷ್ಠಾನವನ್ನು ಮಾಡು, ಈ ಪ್ರಕಾರವಾದ ಧರ್ಮಾಚರಣೆಯ ಕ್ರಮವನ್ನು ಅನುಸರಿಸುವುದರಿಂದ ಪ್ರಜೆಗಳ ಅಭಿವೃದ್ಧಿಯು ಸ್ವಾಭಾವಿಕವಾಗಿಯೂ, ಸುಲಭವಾಗಿಯೂ, ಶ್ರೇಯಸ್ಕರವಾಗಿಯೂ ಉಂಟಾಗುವುದು. ॥೪॥

ಗುಣದಿಂದಲೂ, ಯಶಸ್ಸಿನಿಂದಲೂ, ಕಾಂತಿಯಿಂದಲೂ, ನಿನಗೆ ಸಮಾನರಾಗಿಯೂ, ವಿದ್ಯೆ, ವಿನಯ ಇವುಗಳಿಂದ ಕೂಡಿದವರೂ, ಆಚಾರಶೀಲರಲ್ಲಿ ಶ್ರೇಷ್ಠರೂ ಆದ ಮಕ್ಕಳನ್ನು ಹೊಂದಿ, ಹೆಣ್ಣುಮಕ್ಕಳನ್ನು ಗುಣವಂತರಾಗಿಯೂ, ಯಶಸ್ವಿಗಳಾಗಿಯೂ, ಇರುವವರಿಗೆ ಕೊಟ್ಟು ವಿವಾಹಮಾಡಿ, ಸಮಾಧಾನಹೊಂದಿದ ಮನಸ್ಸುಳ್ಳವನಾಗಿ, ಶ್ರೇಷ್ಠನಾದ ಪರಮಪುರುಷನಲ್ಲಿ ಚೆನ್ನಾಗಿ ಮನಸ್ಸಿಟ್ಟು, ಭಕ್ತಿಯೇ ಸಾಧನವಾದ ಯೋಗದಿಂದಲೂ, ಭಗವದ್ಧ್ಯಾನಾದಿಗಳಿಂದಲೂ ದೇವರನ್ನು ಸೇವಿಸುತ್ತಾ, ಯೋಗಿಗಳಿಂದ ಹೊಂದಲ್ಪಡುತ್ತಿರುವ ಶ್ರೇಷ್ಠವಾದ ಮೋಕ್ಷಮಾರ್ಗವನ್ನು ನೀನು ಅನುಸರಿಸುವವನಾಗು. ॥೫-೬-೭॥

ಕಮಲದಲ್ಲಿ ಹುಟ್ಟಿದ ಬ್ರಹ್ಮನು ತನ್ನ ಮಗನಾದ ಮನುವನ್ನು ಈಪ್ರಕಾರ

ಪ್ರಜಾಃ ಸೃಜತ ಪುತ್ರೇತಿ ಪಿತುರಾಜ್ಞಾಂ ಸಮಾದಧತ್ ।
ಸ್ವಾಯಂಭುವಃ ಪ್ರಜಾಸರ್ಗಮಕರೋತ್ಪೃಥಿವೀಪತಿಃ ॥೯॥

ಪ್ರಿಯವ್ರತೋತ್ತಾನಪಾದೌ ಮನುಪುತ್ರೌ ಮಹೌಜಸೌ ।
ಕನ್ಯಾಸ್ತಿಸ್ರಃ ಪ್ರಸೂತಾಶ್ಚ ತಾಸಾಂ ನಾಮಾನಿ ಮೇ ಶೃಣು ॥೧೦॥

ಆಕೂತಿಃ ಪ್ರಥಮಾ ಕನ್ಯಾ ದ್ವಿತೀಯಾ ದೇವಹೂತಿಕಾ ।
ತೃತೀಯಾ ಚ ಪ್ರಸೂತಿರ್ಹಿ ವಿಖ್ಯಾತಾ ಲೋಕಪಾವನೀ ॥೧೧॥

ಆಕೂತಿಂ ರುಚಯೇ ಪ್ರಾದಾತ್ಕರ್ದಮಾಯ ಚ ಮಧ್ಯಮಾಂ ।
ದಕ್ಷಾಯಾದಾತ್ಪ್ರಸೂತಿಂ ಚ ಯಾಸಾಂ ಲೋಕ ಇಮಾಃ ಪ್ರಜಾಃ ॥೧೨॥

---

ವಾಗಿ ಸಮಾಧಾನಪಡಿಸಿ, ಪ್ರಜೆಗಳನ್ನು ಸೃಷ್ಟಿಮಾಡುವಂತೆ ಅಪ್ಪಣೆ ಮಾಡಿ, ತನ್ನ ಸ್ಥಾನಕ್ಕೆ ಹೋದನು. ||೮||

ಲೋಕಕ್ಕೆಲ್ಲಕ್ಕೂ ಒಡೆಯನಾದ ಸ್ವಾಯಂಭುವಮನುವು, " ಎಲೈ ಮಗನೇ, ಪ್ರಜೆಗಳನ್ನು ಸೃಷ್ಟಿಸು." ಎಂಬ ತಂದೆಯ ಅಪ್ಪಣೆಯನ್ನನುಸರಿಸಿ ಪ್ರಜೆಗಳನ್ನು ಸೃಷ್ಟಿಮಾಡುವ ಕೆಲಸದಲ್ಲಿ ತೊಡಗಿದನು. ||೯||

ಹೆಚ್ಚಾದ ತೇಜಸ್ಸುಳ್ಳ ಪ್ರಿಯವ್ರತ, ಉತ್ತಾನಪಾದ ಎಂಬ ಇಬ್ಬರೂ ಮನುವಿನ ಮಕ್ಕಳಾಗಿ ಹುಟ್ಟಿದರು. ಮತ್ತು ಮೂವರು ಹೆಣ್ಣುಮಕ್ಕಳೂ ಸಹ ಹುಟ್ಟಿದರು. ಅವರ ಹೆಸರುಗಳನ್ನು ಹೇಳುತ್ತೇನೆ. ಕೇಳು. ||೧೦||

ಅವರಲ್ಲಿ ಮೊದಲನೆಯ ಕನ್ಯೆಯು ಆಕೂತಿ ಎಂಬುವವಳು, ಎರಡನೆಯವಳು ದೇವಹೂತಿಕಾ ಎಂಬುವಳು, ಮೂರನೆಯವಳು ಲೋಕದ ಜನರನ್ನು ಶುದ್ಧಿಗೊಳಿಸುವ ಪ್ರಸಿದ್ಧಳಾದ ಪ್ರಸೂತಿ ಎಂಬುವಳು. ||೧೧||

ಆ ಮನುವು ಆಕೂತಿಯೆಂಬುವಳನ್ನು ರುಚಿ ಎಂಬುವನಿಗೂ, ಕರ್ದಮನೆಂಬುವನಿಗೆ ಎರಡನೆಯವಳಾದ ದೇವಹೂತಿಕಾ ಎಂಬುವಳನ್ನೂ, ದಕ್ಷನೆಂಬುವನಿಗೆ ಪ್ರಸೂತಿ ಎಂಬುವಳನ್ನೂ ಕೊಟ್ಟು ವಿವಾಹಮಾಡಿದನು. ಇವರಿಂದ ಲೋಕದಲ್ಲಿರುವ ಎಲ್ಲಾ ಪ್ರಜೆಗಳೂ ಕ್ರಮವಾಗಿ ಹುಟ್ಟಿದರು. ||೧೨||

ರುಚೇಃ ಪ್ರಜಜ್ಞೇ ಭಗವಾನ್ಯಜ್ಞೋ ನಾಮಾಽದಿಪೂರುಷಃ ।
ಆಕೂತ್ಯಾಂ ದೇವಹೂತ್ಯಾಂ ಚ ಕಪಿಲೋಽಸೌ ಚ ಕರ್ದಮಾತ್ ॥೧೩॥

ಸಾಂಖ್ಯಾಚಾರ್ಯಃ ಸರ್ವಲೋಕೇ ವಿಖ್ಯಾತಃ ಕಪಿಲೋ ವಿಭುಃ ।
ದಕ್ಷಾತ್ಪ್ರಸೂತ್ಯಾಂ ಕನ್ಯಾಶ್ಚ ಬಹುಶೋ ಜಜ್ಞಿರೇ ಪ್ರಜಾಃ ॥೧೪॥

ಯಾಸಾಂ ಸಂತಾನಸಂಭೂತಾ ದೇವತಿರ್ಯಙ್ನರಾದಯಃ ।
ಪ್ರಸೂತಾ ಲೋಕವಿಖ್ಯಾತಾಃ ಸರ್ವೇ ಸರ್ಗಪ್ರವರ್ತಕಾಃ ॥೧೫॥

ಯಜ್ಞಶ್ಚ ಭಗವಾನ್ಸ್ವಾಯಂ ಭುವಮನ್ವಂತರೇ ವಿಭುಃ ।
ಮನುಂ ರರಕ್ಷ ರಕ್ಷೋಭ್ಯೋ ಯಾಮೈರ್ದೇವಗಣೈರ್ವೃತಃ ॥೧೬॥

ಕಪಿಲೋಽಪಿ ಮಹಾಯೋಗೀ ಭಗವಾನ್ಸ್ವಾಶ್ರಮೇ ಸ್ಥಿತಃ ।
ದೇವಹೂತ್ಯೈ ಪರಂ ಜ್ಞಾನಂ ಸರ್ವಾಽವಿದ್ಯಾ ನಿವರ್ತಕಂ ॥೧೭॥

---

ಆಕೂತಿಯಲ್ಲಿ ರುಚಿ ಎಂಬುವನಿಂದ ಷಡ್ಗುಣೈಶ್ವರ್ಯಸಂಪನ್ನನೂ ಭಗವಂತನೂ ಆದಿಪುರುಷನೂ ಆದ ಯಜ್ಞನೆಂಬವನು ಹುಟ್ಟಿದನು. ಕರ್ದಮನಿಂದ ದೇವಹೂತಿಯಲ್ಲಿ ಕಪಿಲನು ಹುಟ್ಟಿದನು. ॥೧೩॥

ಆ ಕಪಿಲನು ಸಾಂಖ್ಯ ಶಾಸ್ತ್ರದ ಪ್ರವರ್ತಕನಾಗಿ ಎಲ್ಲ ಲೋಕದಲ್ಲೂ ಪ್ರಸಿದ್ಧನಾದನು. ಯಾರ ಸಂತಾನಪರಂಪರೆಯಿಂದ ದೇವತೆಗಳೂ, ತಿರ್ಯಗ್ಜಂತುಗಳೂ, ಮನುಷ್ಯರೂ ಜನಿಸಿದರೋ ಅಂಥ ಲೋಕದಲ್ಲಿ ಪ್ರಸಿದ್ಧರೂ, ಪ್ರಜಾಸೃಷ್ಟಿಯ ಪ್ರವರ್ತಕರೂ ಆದ ಸ್ತ್ರೀಪ್ರಜೆಗಳು ದಕ್ಷನಿಂದ ಪ್ರಸೂತಿ ಎಂಬವಳಲ್ಲಿ ಹುಟ್ಟಿದರು. ॥೧೪-೧೫॥

ಸ್ವಾಯಂಭುವಮನ್ವಂತರದ ಒಂದಾನೊಂದು ಸಮಯದಲ್ಲಿ ಭಗವಂತನಾದ ಆ ಯಜ್ಞನೆಂಬುವನು ಯಾಮ ಎಂಬ ಹೆಸರುಳ್ಳ ದೇವತಾಸಮೂಹಗಳಿಂದ ಕೂಡಿದವನಾಗಿ ರಾಕ್ಷಸರಿಂದ ಸಂಭವಿಸಿದ ತೊಂದರೆಯನ್ನು ನಿವಾರಿಸಿ ಮನುವನ್ನು ಕಾಪಾಡಿದನು. ॥೧೬॥

ಯೋಗಿಗಳಲ್ಲಿ ಶ್ರೇಷ್ಠನಾದ ಕಪಿಲನು ತನ್ನ ಆಶ್ರಮದಲ್ಲಿದ್ದುಕೊಂಡು, ದೇವಹೂತಿಗೆ ಎಲ್ಲ ಬಗೆಯ ಅಜ್ಞಾನವನ್ನು ಸಂಪೂರ್ಣವಾಗಿ ನಾಶಮಾಡುವ, ಶ್ರೇಷ್ಠವಾದ ಪ್ರಕೃತಿಪುರುಷವಿವೇಚನೆಯ ಜ್ಞಾನವನ್ನೂ, ಅಧ್ಯಾತ್ಮಜ್ಞಾನಸಾಧನವಾದ ಸವಿಕಲ್ಪ ನಿರ್ವಿಕಲ್ಪ ಮುಂತಾದ ವಿಶೇಷವಾದ ಧ್ಯಾನಯೋಗವನ್ನೂ, ಬೋಧಿಸುವ

ಸ ವಿಶೇಷಂ ಧ್ಯಾನಯೋಗಮಧ್ಯಾತ್ಮಜ್ಞಾನನಿಶ್ಚಯಂ ।
ಕಾಪಿಲಂ ಶಾಸ್ತ್ರಮಾಖ್ಯಾತಂ ಸರ್ವಾಜ್ಞಾನ ವಿನಾಶನಂ ॥೧೮॥

ಉಪದಿಶ್ಯ ಮಹಾಯೋಗೀ ಸ ಯಯೌ ಪುಲಹಾಶ್ರಮಂ ।
ಅದ್ಯಾಪಿ ವರ್ತತೇ ದೇವಃ ಸಾಂಖ್ಯಾಚಾರ್ಯೋ ಮಹಾಶಯಃ ॥೧೯॥

ಯನ್ನಾಮ ಸ್ಮರಣೇನಾಪಿ ಸಾಂಖ್ಯಯೋಗಶ್ಚ ಸಿದ್ಧ್ಯತಿ ।
ತಂ ವಂದೇ ಕಪಿಲಂ ಯೋಗಾಚಾರ್ಯಂ ಸರ್ವವರಪ್ರದಂ ॥೨೦॥

ಏವಮುಕ್ತಂ ಮನೋಃ ಕನ್ಯಾವಂಶವರ್ಣನಮುತ್ತಮಂ ।
ಪಠತಾಂ ಶೃಣ್ವತಾಂ ಚಾಪಿ ಸರ್ವಪಾಪವಿನಾಶನಂ ॥೨೧॥

ಅತಃ ಪರಂ ಪ್ರವಕ್ಷ್ಯಾಮಿ ಮನುಪುತ್ರಾನ್ವಯಂ ಶುಭಂ ।
ಯದಾಕರ್ಣನಮಾತ್ರೇಣ ಪರಂ ಪದಮವಾಪ್ನುಯಾತ್ ॥೨೨॥

---

ಸಮಸ್ತವಾದ ಅಜ್ಞಾನಕ್ಕೂ ನಾಶಕವಾದ ಕಾಪಿಲವೆಂದು ಹೆಸರುಳ್ಳ ಸಾಂಖ್ಯಶಾಸ್ತ್ರವನ್ನೂ ಉಪದೇಶಮಾಡಿ, ಪುಲಹಾಶ್ರಮಕ್ಕೆ ಹೊರಟು ಹೋದನು. ಸಾಂಖ್ಯಶಾಸ್ತ್ರಕ್ಕೆ ಗುರುವಾದ ಆ ಮಹಾತ್ಮನು ಈಗಲೂ ಕೂಡ ಪ್ರಸಿದ್ಧನಾಗಿ ಇದ್ದಾನೆ. ॥೧೭-೧೮-೧೯॥

ಯಾವ ಮಹಾತ್ಮನ ಹೆಸರನ್ನು ಸ್ಮರಿಸುವುದರಿಂದಲೇ, ಜನರಿಗೆ ಸಾಂಖ್ಯಯೋಗದ ತಿಳಿವಳಿಕೆಯು ಉಂಟಾಗುತ್ತದೆಯೋ, ಅಂಥಾ ಯೋಗಶಾಸ್ತ್ರದ ಸಂಪ್ರದಾಯಕ್ಕೆ ಪ್ರವರ್ತಕನಾದ ಆಚಾರ್ಯನೂ, ಸಮಸ್ತರ ಇಷ್ಟಾರ್ಥಗಳನ್ನು ಕೊಡುವವನೂ ಆದ ಆ ಕಪಿಲನನ್ನು ನಮಸ್ಕರಿಸುವೆನು. ॥೨೦॥

ಈ ಪ್ರಕಾರವಾಗಿ ಯಾವ ವಂಶಚರಿತ್ರೆಯನ್ನು ಪಠನಮಾಡುವುದರಿಂದಲೂ ಮತ್ತು ಕೇಳುವುದರಿಂದಲೂ, ಜನರ ಪಾಪಗಳೆಲ್ಲವೂ ನಾಶವಾಗುತ್ತವೋ ಅಂಥಾ ಶ್ರೇಷ್ಠವಾದ ಮನುವಿನ ಹೆಣ್ಣುಮಕ್ಕಳ ವಂಶದ ವರ್ಣನೆಯು ಹೇಳಲ್ಪಟ್ಟಿತು.॥೨೧॥

ಇಲ್ಲಿಂದ ಮುಂದಕ್ಕೆ ಯಾವ ಮನುವಿನ ಮಕ್ಕಳ ವಂಶದ ವರ್ಣನೆಯನ್ನು ಕೇಳುವುದರಿಂದಲೇ ಮೋಕ್ಷವು ಸಿದ್ಧಿಸುತ್ತದೋ ಮತ್ತು ಯಾವ 'ಮನುವಿನ ಮಕ್ಕ

ದ್ವೀಪವರ್ಷಸಮುದ್ರಾದಿ ವ್ಯವಸ್ಥಾ ಯತ್ಸುತೈಃ ಕೃತಾ ।
ವ್ಯವಹಾರಪ್ರಸಿದ್ಧ್ಯರ್ಥಂ ಸರ್ವಭೂತಸುಖಾಪ್ತಯೇ ॥೨೩॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಅಷ್ಟಮಸ್ಕಂಧೇ
ತೃತೀಯೋಽಧ್ಯಾಯಃ

---

ಳಿಂದ ಸಮಸ್ತ ಪ್ರಾಣಿಗಳ ಸೌಖ್ಯಕ್ಕ್ಯೂ, ಸಾಧಕವಾದ ದ್ವೀಪ, ವರ್ಷ, ಸಮುದ್ರ, ಇವುಗಳ ವ್ಯವಸ್ಥೆಯು ಮಾಡಲ್ಪಟ್ಟಿತೋ ಅಂಥ ಶ್ರೇಷ್ಠವಾದ ಮನುಪುತ್ರರ ವಂಶ ಚರಿತ್ರೆಯನ್ನು ಹೇಳುತ್ತೇನೆ. ॥೨೨-೨೩॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಎಂಟನೆಯ ಸ್ಕಂಧದಲ್ಲಿ
ಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಅಷ್ಟಮಸ್ಕಂಧೇ

### ॥ ಚತುರ್ಥೋಽಧ್ಯಾಯಃ ॥

### ನಾಲ್ಕನೆಯ ಅಧ್ಯಾಯವು

॥ ನಾರಾಯಣ ಉವಾಚ ॥

**ಮನೋಃ ಸ್ವಾಯಂಭುವಸ್ಯಾಽಸೀತ್ ಜ್ಯೇಷ್ಠಃ ಪುತ್ರಃ ಪ್ರಿಯವ್ರತಃ ।**
**ಪಿತುಸ್ಸೇವಾಪರೋ ನಿತ್ಯಂ ಸತ್ಯಧರ್ಮಪರಾಯಣಃ ॥೧॥**

**ಪ್ರಜಾಪತೇ ರ್ದುಹಿತರಂ ಸುರೂಪಾಂ ವಿಶ್ವಕರ್ಮಣಃ ।**
**ಬರ್ಹಿಷ್ಮತೀಂ ಚೋಪಯೇಮೇ ಸಮಾನಾಂ ಶೀಲಕರ್ಮಭಿಃ ॥೨॥**

---

ಈ ಅಧ್ಯಾಯದಲ್ಲಿ ಯಾವ ಮಹಾತ್ಮನಿಂದ ಜಂಬೂದ್ವೀಪ ವೊದಲಾದ ದ್ವೀಪಗಳ ವ್ಯವಸ್ಥೆಯು ಏರ್ಪಟ್ಟಿತೋ, ಅಂಥ ಸ್ವಾಯಂಭುವಮನುವಿನ ಜ್ಯೇಷ್ಠ ಪುತ್ರನಾದ ಪ್ರಿಯವ್ರತನ ಚರಿತ್ರೆಯು ಹೇಳಲ್ಪಡುತ್ತದೆ.

ಶ್ರೀಮನ್ನಾರಾಯಣನು ಹೇಳಿದನು--ಸ್ವಾಯಂಭುವ ಮನುವಿಗೆ ಪ್ರಿಯವ್ರತನೆಂಬ ಹಿರಿಯ ಮಗನಿದ್ದನು. ಅವನು ತನ್ನ ತಂದೆಯ ಶುಶ್ರೂಷೆಯನ್ನು ಮಾಡುವ ಕೆಲಸದಲ್ಲಿ ಬಹಳ ಆಸಕ್ತಿಯುಳ್ಳವನೂ, ಸತ್ಯಶೀಲನೂ, ಧರ್ಮವನ್ನು ಬಿಡದವನೂ ಆಗಿದ್ದನು. ॥೧॥

ಆ ಪ್ರಿಯವ್ರತನು ದೇವಶಿಲ್ಪಿಯಾಗಿ ಸೃಷ್ಟಿಕರ್ತನಾದ ವಿಶ್ವಕರ್ಮನೆಂಬ ಪ್ರಜಾಪತಿಯ ಮಗಳಾದ ಸುಂದರವಾದ ರೂಪವುಳ್ಳ, ಸುರೂಪಾ ಎಂಬುವಳನ್ನೂ ಮತ್ತು ತನ್ನ ಶೀಲ ಮತ್ತು ಕರ್ಮಗಳಿಗೆ ತಕ್ಕಂತೆ ಅನುರೂಪಳಾಗಿ ಯೋಗ್ಯಳಾದ, ಬರ್ಹಿಷ್ಮತೀ ಎಂಬುವಳನ್ನೂ ವಿವಾಹಮಾಡಿಕೊಂಡನು. ಈ ವಿವರಗಳಲ್ಲಿ ಸ್ವಲ್ಪ

ತಸ್ಯಾಂ ಪುತ್ರಾನ್ ದಶ ಗುಣೈರನ್ವಿತಾನ್ ಭಾವಿತಾತ್ಮನಃ ।
ಜನಯಾಮಾಸ ಕನ್ಯಾಂ ಚೋರ್ಜಸ್ವತೀಂ ಚ ಯವೀಯಸೀಂ ॥೩॥

ಆಗ್ನೀಧ್ರಶ್ಚೇಧ್ಮಜಿಹ್ವಶ್ಚ ಯಜ್ಞಬಾಹುಸ್ತೃತೀಯಕಃ ।
ಮಹಾವೀರಶ್ಚತುರ್ಥಸ್ತು ಪಂಚಮೋ ರುಕ್ಮಶುಕ್ರಕಃ ॥೪॥

ಘೃತಪೃಷ್ಠಶ್ಚ ಸವನೋ ಮೇಧಾತಿಥಿರಥಾಷ್ಟಮಃ ।
ವೀತಿಹೋತ್ರಃ ಕವಿಶ್ಚೇತಿ ದಶೈತೇ ವಹ್ನಿನಾಮಕಾಃ ॥೫॥

ಏತೇಷಾಂ ದಶಪುತ್ರಾಣಾಂ ತ್ರಯೋಽಸ್ಯಾಸನ್ವಿರಾಗಿಣಃ ।
ಕವಿಶ್ಚ ಸವನಶ್ಚೈವ ಮಹಾವೀರ ಇತಿ ತ್ರಯಃ ॥೬॥

ಆತ್ಮವಿದ್ಯಾ ಪರಿಷ್ಣಾತಾಃ ಸರ್ವೇ ತೇ ಹ್ಯೂರ್ಧ್ವರೇತಸಃ ।
ಆಶ್ರಮೇ ಪರಹಂಸಾಖ್ಯೇ ನಿಸ್ಪೃಹಾ ಹ್ಯಭವನ್ಮುದಾ ॥೭॥

---

ಭೇದವಿದೆ. ವಿಷ್ಣುಭಾಗವತ ೫-೧ ನೋಡಿ. ಮತ್ತು ವಿಷ್ಣುಪುರಾಣ ೨-೧ನ್ನೂ ನೋಡಿ. ॥೨॥

ಸುರೂಪಾ ಎಂಬವಳಲ್ಲಿ ಆ ಪ್ರಿಯವ್ರತನು ಶುದ್ಧಾತ್ಮರಾದ ಗುಣಾಢ್ಯರಾದ ಹತ್ತು ಗಂಡುಮಕ್ಕಳನ್ನೂ, ಇವರಿಗಿಂತಲೂ ಚಿಕ್ಕವಳಾದ ಊರ್ಜಸ್ವತೀ ಎಂಬ ಕನ್ಯೆಯನ್ನೂ ಪಡೆದನು. ॥೩॥

ಆಗ್ನೀಧ್ರ, ಇಧ್ಮಜಿಹ್ವ, ಯಜ್ಞಬಾಹು, ಮಹಾವೀರ, ರುಕ್ಮಶುಕ್ರ, ಘೃತಪೃಷ್ಠ, ಸವನ, ಮೇಧಾತಿಥಿ, ವೀತಿಹೋತ್ರ, ಕವಿ, ಎಂಬ ಈ ಹತ್ತು ಜನರೂ ಅಗ್ನಿನಾಮವುಳ್ಳ ಪ್ರಿಯವ್ರತನ ಗಂಡುಮಕ್ಕಳು. ॥೪-೫॥

ಈ ಹತ್ತು ಜನರಲ್ಲಿ 'ಕವಿ, ಸವನ, ಮಹಾವೀರ, ಎಂಬ ಈ ಮೂವರೂ ಇಂದ್ರಿಯಗಳನ್ನು ಜಯಿಸಿದವರಾಗಿ ವಿರಕ್ತರಾಗಿದ್ದರು. ॥೬॥

ಅವರೆಲ್ಲರೂ ಬಾಲ್ಯದಿಂದಲೂ ಆತ್ಮವಿದ್ಯೆಯನ್ನು ಚನ್ನಾಗಿ ಅಭ್ಯಾಸಮಾಡಿ ತಿಳಿದು ಬ್ರಹ್ಮಚರ್ಯಪ್ರಭಾವದಿಂದ ಊರ್ಧ್ವಮುಖವಾದ ರೇತಸ್ಸಿನ ತೇಜಸ್ಸಿನಿಂದೊಡಗೂಡಿ, ಪರಮಹಂಸಾಶ್ರಮದಲ್ಲಿರುತ್ತಾ ನಿಷ್ಕಾಮರಾಗಿ ಸಂತುಷ್ಟರಾಗಿದ್ದರು. ॥೭॥

ಅಪರಸ್ಯಾಂ ಚ ಜಾಯಾಯಾಂ ತ್ರಯಃ ಪುತ್ರಾಶ್ಚ ಜಜ್ಞಿರೇ ।
ಉತ್ತಮುಸ್ತಾಮಸಶ್ಚೈವ ರೈವತಶ್ಚೇತಿ ವಿಶ್ರುತಾಃ ॥೮॥

ಮನ್ವಂತರಾಧಿಪತಯ ಏತೇ ಪುತ್ರಾ ಮಹೌಜಸಃ ।
ಪ್ರಿಯವ್ರತಸ್ಸರಾಜೇಂದ್ರೋ ಬುಭುಜೇ ಜಗತೀಮಿಮಾಂ ॥೯॥

ಏಕಾದಶಾರ್ಬುದಾಬ್ದಾನಾಮವ್ಯಾಹತಬಲೇಂದ್ರಿಯಃ ।
ಯದಾ ಸೂರ್ಯಃ ಪೃಥಿವ್ಯಾಶ್ಚ ವಿಭಾಗೇ ಪ್ರಥಮೇಽತಪತ್ ॥೧೦॥

ಭಾಗೇ ದ್ವಿತೀಯೇ ತತ್ರಾಽಸೀದಂಧಕಾರೋದಯಃ ಕಿಲ ।
ಏವಂ ವ್ಯತಿಕರಂ ರಾಜಾ ವಿಲೋಕ್ಯ ಮನಸಾ ಚಿರಂ ॥೧೧॥

ಪ್ರಶಾಸ್ತಿ ಮಯಿ ಭೂಮ್ಯಾಂ ಚ ತಮಃ ಪ್ರಾದುರ್ಭವೇತ್ಕಥಂ ।
ಏವಂ ನಿವಾರಯಿಷ್ಯಾಮಿ ಭೂಮೌ ಯೋಗಬಲೇನ ಚ ॥೧೨॥

---

ಬರ್ಹಿಷ್ಮತಿ ಎಂಬ ಇನ್ನೊಬ್ಬ ಹೆಂಡಿತಿಯಲ್ಲಿ ಉತ್ತಮನು, ತಾಮಸ, ರೈವತ, ಎಂಬ ಪ್ರಸಿದ್ಧರಾದ ಮೂವರು ಗಂಡುಮಕ್ಕಳು ಹುಟ್ಟಿದರು. ॥೮॥

ಈ ಮೂವರೂ ಬಹಳ ಪರಾಕ್ರಮವುಳ್ಳವರಾಗಿ ಒಂದು ಮನ್ವಂತರ ಕಾಲ ಪೂರ್ಣವಾಗಿ ಪ್ರಪಂಚಕ್ಕೆ ಒಡೆಯರಾದರು. ರಾಜರಲ್ಲಿ ಶ್ರೇಷ್ಠನಾದ ಆ ಪ್ರಿಯವ್ರತನು ಇಂದ್ರಿಯಗಳನ್ನು ಜಯಿಸಿದವನಾಗಿ ಅಧಿಕವಾದ ಸಾಮರ್ಥ್ಯದಿಂದ ನೂರಹತ್ತು ಕೋಟಿ ವರ್ಷಗಳಕಾಲ ಈ ಭೂಮಿಯಲ್ಲಿ ರಾಜ್ಯಭಾರವನ್ನು ಮಾಡಿದನು. ಈ ಭೂಮಿಯ ಒಂದು ಭಾಗದಲ್ಲಿ ಸೂರ್ಯನು ಪ್ರಕಾಶಿಸುತ್ತಿದ್ದಾಗ, ಅದರ ಇನ್ನೊಂದು ಭಾಗದಲ್ಲಿ ಆ ಕಾಲದಲ್ಲಿ ಅಂಧಕಾರವೇ ಇರುತ್ತಿತ್ತು. ಈ ರೀತಿಯಾದ ವ್ಯತ್ಯಾಸವನ್ನು ಬಹುಕಾಲದವರೆಗೂ ನೋಡಿ ವ್ಯಾಕುಲಗೊಂಡು ಪ್ರಿಯವ್ರತನು ನಾನು ಇಷ್ಟು ಧರ್ಮದಿಂದ ಭೂಮಿಯನ್ನಾಳುತ್ತಿರುವಾಗ ಅಂಧಕಾರವು ಭೂಮಿಯಲ್ಲಿ ವ್ಯಾಪಿಸಿರುವುದು ಸರಿಯಲ್ಲ. ಆದ್ದರಿಂದ ನಾನು ವಿಶೇಷವಾದ ತಪಸ್ಸಿನ ಸಾಮರ್ಥ್ಯದಿಂದ ಭೂಮಿಯಲ್ಲಿ ತೋರುವ ಈ ಕತ್ತಲೆಯನ್ನು ಹೋಗಲಾಡಿಸುವೆನು. ॥೯-೧೦-೧೧-೧೨॥

ಏವಂ ವ್ಯವಸಿತೋ ರಾಜಾ ಪುತ್ರಃ ಸ್ವಾಯಂಭುವಸ್ಯ ಸಃ ।
ರಥೇನಾಽದಿತ್ಯವರ್ಣೇನ ಸಪ್ತಕೃತ್ವಃ ಪ್ರಕಾಶಯನ್ ॥೧೩॥

ತಸ್ಯಾಽಪಿ ಗಚ್ಛತೋ ರಾಜ್ಞೋ ಭೂಮೌ ಯದ್ರಥನೇಮಯಃ ।
ಪತಿತಾಸ್ತೇ ಸಮುದ್ರಾಖ್ಯಾಂ ಭೇಜಿರೇ ಲೋಕಹೇತವೇ ॥೧೪॥

ಜಾತಾಃ ಪ್ರದೇಶಾಸ್ತೇ ಸಪ್ತ ದ್ವೀಪಾ ಭೂಮೌ ವಿಭಾಗಶಃ ।
ರಥನೇಮಿಸಮುತ್ಖಾತಾಸ್ತೇ ಪರಿಖಾಃ ಸಪ್ತಸಿಂಧವಃ ॥೧೫॥

ಯತ ಆಸಂಸ್ತತಸ್ಸಪ್ತ ಭುವೋ ದ್ವೀಪಾ ಹಿ ತೇ ಸ್ಮೃತಾಃ ।
ಜಂಬೂದ್ವೀಪಃ ಪ್ಲಕ್ಷದ್ವೀಪಶ್ಶಾಲ್ಮಲೀದ್ವೀಪ ಸಂಜ್ಞಕಃ ॥೧೬॥

---

ಸ್ವಾಯಂಭುವ ಮನುವಿನ ಮಗನಾದ ಆ ಪ್ರಿಯವ್ರತರಾಜನು ಈ ರೀತಿಯಾಗಿ ನಿಶ್ಚಯಿಸಿಕೊಂಡು, ಸೂರ್ಯನ ಹಾಗೆ ಹೊಂಬಣ್ಣವುಳ್ಳ ರಥದಲ್ಲಿ ಕುಳಿತು ಭೂಮಿಯನ್ನು ಏಳುಸಲ ಪ್ರದಕ್ಷಿಣೆಮಾಡುತ್ತಾ ಆ ಎಲ್ಲೆಡೆಯಲ್ಲೂ ಬೆಳಕಾಗುವಂತೆ ಮಾಡಿದನು. [ಈ ರೀತಿಯಾಗಿ ಪ್ರದಕ್ಷಿಣೆ ಮಾಡುತ್ತಿರುವಾಗ ಚತುರ್ಮುಖ ಬ್ರಹ್ಮನು ಅವನ ಹತ್ತಿರಕ್ಕೆ ಬಂದು ಈ ಕೆಲಸವು ನಿನಗೆ ಸೇರಿದ್ದಲ್ಲವು ಎಂದು ತಡೆದು ಬಿಟ್ಟನೆಂಬ ವಿಷಯವು ಪುರಾಣಾಂತರದಲ್ಲಿ ಪ್ರಸಿದ್ಧವಾಗಿದೆ.] ॥೧೩॥

ಆ ಪ್ರಿಯವ್ರತರಾಜನು ಹೀಗೆ ಪ್ರದಕ್ಷಿಣೆಮಾಡುವಾಗ ಯಾವ ಭೂಭಾಗದಲ್ಲಿ ಅವನ ರಥ ಚಕ್ರಗಳು ಉರುಳಿದುವೋ ಅಲ್ಲಿ ಏಳು ದೊಡ್ಡ ಕಂದಕಗಳಹಾಗಿರುವ ಹಳ್ಳಗಳುಂಟಾಗಿ, ಲೋಕವ್ಯವಹಾರದಲ್ಲಿ ಅನುಕೂಲವಾಗಿರುವ ಸಮುದ್ರಗಳೆಂಬ ಹೆಸರನ್ನು ಪಡೆದುವು. ॥೧೪॥

ಆ ಪ್ರಿಯವ್ರತರಾಜನ ರಥಚಕ್ರಗಳ ಉರುಳುವಿಕೆಯಿಂದ ಈ ರೀತಿಯಲ್ಲಿ ಏಳು ಸಮುದ್ರಗಳು ಉಂಟಾದ ಮೇಲೆ, ಎರಡು ಸಮುದ್ರಗಳ ಮಧ್ಯದಲ್ಲಿರುವ ಭೂಮಿಯ ಎತ್ತರವಾದ ಭಾಗಗಳು ಭೂಪ್ರದೇಶವಾಗಿ ಉಳಿದುವು. ಈ ಪ್ರಕಾರವಾಗಿ ಆದ ಆರು ಭೂಭಾಗಗಳೂ ಮಧ್ಯದಲ್ಲಿ ಒಂದು ಭೂಭಾಗವೂ ಸೇರಿ ಒಟ್ಟು ಏಳು ದ್ವೀಪಗಳೆಂದು ಹೆಸರನ್ನು ಹೊಂದಿದುವು. ॥೧೫॥

ಈ ಸಪ್ತ ಸಮುದ್ರಗಳಲ್ಲಿ ಒಂದೊಂದರ ಬಹಿರ್ಭಾಗದಲ್ಲಿ ಸುತ್ತಲೂ, ಜಂಬೂ, ಪ್ಲಕ್ಷ, ಶಾಲ್ಮಲಿ, ಕುಶ, ಕ್ರೌಂಚ, ಶಾಕ, ಪುಷ್ಕರ, ಗಳೆಂಬ ಸಪ್ತದ್ವೀಪಗಳು, ಉಂಟಾ

**ಕುಶದ್ವೀಪಃ ಕ್ರೌಂಚದ್ವೀಪಶ್ಶಾಕದ್ವೀಪಶ್ಚ ಪುಷ್ಕರಃ ।**
**ತೇಷಾಂ ಚ ಪರಿಮಾಣಂ ತು ದ್ವಿಗುಣಂ ಚೋತ್ತರೋತ್ತರಂ ॥೧೭॥**

**ಸಮಂತತಶ್ಚೋಪಕ್ಲಪ್ತಂ ಬಹಿರ್ಭಾಗಕ್ರಮೇಣ ಚ ।**
**ಕ್ಷಾರೋದೇಕ್ಷುರಸೋ ದೌ ಚ ಸುರೋದಶ್ಚ ಘೃತೋದಕಃ ॥೧೮॥**

**ಕ್ಷೀರೋದೋ ದಧಿ ಮಂಡೋದಶ್ಶುದ್ಧೋದಶ್ಚೇತಿ ತೇ ಸ್ಮೃತಾಃ ।**
**ಸಪ್ತೈತೇ ಪ್ರತಿವಿಖ್ಯಾತಾಃ ಪೃಥಿವ್ಯಾಂ ಸಿಂಧವಸ್ತದಾ ॥೧೯॥**

**ಪ್ರಥಮೋ ಜಂಬುದ್ವೀಪಾಖ್ಯೋ ಯಃ ಕ್ಷಾರೋದೇನ ವೇಷ್ಟಿತಃ ।**
**ತತ್ಪತಿಂ ವಿದಧೇ ರಾಜಾ ಪುತ್ರಮಾಗ್ನೀಧ್ರ ಸಂಜ್ಞಕಂ ॥೨೦॥**

**ಪ್ಲಕ್ಷದ್ವೀಪೇ ದ್ವಿತೀಯೇಽಸ್ಮಿನ್ ದ್ವೀಪೇಽಕ್ಷುರಸಸಂಪ್ಲುತೇ ।**
**ಜಾತಸ್ತದಧಿಪಃ ಪ್ರೈಯವ್ರತ ಇಧ್ಮಾದಿಜಿಹ್ವಕಃ ॥೨೧॥**

---

ದುವು. ಈ ದ್ವೀಪಗಳಲ್ಲಿ ಮೊದಲನೆಯ ದ್ವೀಪಕ್ಕಿಂತಲೂ, ಎರಡನೆಯ ದ್ವೀಪವು ಎರಡರಷ್ಟು ವಿಸ್ತಾರ ಉಳ್ಳದ್ದು. ಇದೇ ರೀತಿಯಲ್ಲಿ, ಏಳು ದ್ವೀಪಗಳೂ ಸಹ ಉತ್ತರೋತ್ತರವಾಗಿ ಎರಡೆರಡರಷ್ಟು ಅಧಿಕ ಪರಿಮಾಣವುಳ್ಳವುಗಳಾಗಿವೆ. ||೧೬-೧೭||

ಈ ರೀತಿಯಲ್ಲಿ ಬಹಿರ್ಭಾಗಕ್ರಮದಿಂದ ಸುತ್ತಲೂ, ಲವಣಸಮುದ್ರ, ಕಬ್ಬಿನ ಹಾಲಿನ ಸಮುದ್ರ, ಮದ್ಯಸಮುದ್ರ, ತುಪ್ಪದ ಸಮುದ್ರ, ಕ್ಷೀರಸಮುದ್ರ, ದಧಿ ಸಮುದ್ರ, ಶುದ್ಧೋದಕಸಮುದ್ರ, ಹೀಗೆ ಭೂಮಿಯಲ್ಲಿ ಏಳು ಸಮುದ್ರಗಳು ಪ್ರಸಿದ್ಧಿಯನ್ನು ಪಡೆದುವು. ||೧೮-೧೯||

ಆ ಪ್ರಿಯವ್ರತನೆಂಬ ರಾಜನು ಲವಣಸಮುದ್ರದಿಂದ ಸುತ್ತುವರಿಯಲ್ಪಟ್ಟು ಎಲ್ಲಕ್ಕೂ ಕೇಂದ್ರದಲ್ಲಿರುವ ಜಂಬುದ್ವೀಪವೆಂಬ ಮೊದಲನೆಯ ದ್ವೀಪಕ್ಕೆ ತನ್ನ ಮಗನಾದ ಆಗ್ನೀಧ್ರನೆಂಬುವವನನ್ನು ಯಜಮಾನನನ್ನಾಗಿ ನಿಯಮಿಸಿದನು. ||೨೦||

ಕಬ್ಬಿನಹಾಲಿನ ಸಮುದ್ರದಿಂದ ಸುತ್ತುವರಿಯಲ್ಪಟ್ಟ ಪ್ಲಕ್ಷದ್ವೀಪವೆಂಬ, ಎರಡನೆಯ ದ್ವೀಪಕ್ಕೆ ಪ್ರಿಯವ್ರತನ ಮಗನಾದ ಇಧ್ಮಜಿಹ್ವನೆಂಬುವನು ಅಧಿಪತಿ ಯಾದನು. ||೨೧||

ಶಾಲ್ಮಲೀ ದ್ವೀಪ ಏತಸ್ಮಿನ್ ಸುರೋದಧಿ ಪರಿಪ್ಲುತೇ ।
ಯಜ್ಞಬಾಹುಂ ತದಧಿಪಂ ಕರೋತಿ ಸ್ಮ ಪ್ರಿಯವ್ರತಃ ॥೨೨॥

ಕುಶದ್ವೀಪೇಽತಿರಮ್ಯೇ ಚ ಘೃತೋದೇನೋಪವೇಷ್ಟಿತೇ ।
ಹಿರಣ್ಯರೇತಾ ರಾಜಾಽಭೂತ್ ಪ್ರಿಯವ್ರತತನೂಜನಿಃ ॥೨೩॥

ಕ್ರೌಂಚದ್ವೀಪೇ ಪಂಚಮೇ ತು ಕ್ಷೀರೋದಪರಿಸಂಪ್ಲುತೇ ।
ಪ್ರೈಯವ್ರತೋ ಘೃತಪೃಷ್ಠಃ ಪತಿರಾಸೀನ್ಮಹಾಬಲಃ ॥೨೪॥

ಶಾಕದ್ವೀಪೇ ಚಾರುತರೇ ದಧಿಮಂಡೋದಸಂಕುಲೇ ।
ಮೇಧಾತಿಥಿರಭೂದ್ರಾಜಾ ಪ್ರಿಯವ್ರತ-ಸುತೋಽವರಃ ॥೨೫॥

ಪುಷ್ಕರದ್ವೀಪಕೇ ಶುದ್ಧೋದಕಸಿಂಧು ಸಮಾಕುಲೇ ।
ವೀತಿಹೋತ್ರೋ ಬಭೂವಾಸೌ ರಾಜಾ ಜನಕಸಂಮತಃ ॥೨೬॥

---

ಮೂರನೆಯದಾದ ಮದ್ಯದಸಮುದ್ರದಿಂದ ಸುತ್ತುವರಿಯಲ್ಪಟ್ಟ ಶಾಲ್ಮಲೀ ದ್ವೀಪಕ್ಕೆ ಯಜ್ಞಬಾಹುವೆಂಬ ತನ್ನ ಮಗನನ್ನು ಪ್ರಿಯವ್ರತನು ಯಜಮಾನನನ್ನಾಗಿ ಮಾಡಿದನು. ॥೨೨॥

ನಾಲ್ಕನೆಯದಾದ ಆಜ್ಯಸಮುದ್ರದಿಂದ ಸುತ್ತುಗಟ್ಟಲ್ಪಟ್ಟ ಬಹಳ ಮನೋಹರವಾದ ಕುಶದ್ವೀಪಕ್ಕೆ ಪ್ರಿಯವ್ರತನ ಮಗನಾದ ಹಿರಣ್ಯರೇತಸ್ಸೆಂಬುವನು ರಾಜನಾದನು. ॥೨೩॥

ಕ್ಷೀರಸಮುದ್ರದಿಂದ ಸುತ್ತುವರಿಯಲ್ಪಟ್ಟ ಐದನೆಯದಾದ ಕ್ರೌಂಚದ್ವೀಪಕ್ಕೆ ಪ್ರಿಯವ್ರತನಮಗನಾದ ಪರಾಕ್ರಮಶಾಲಿಯಾದ ಘೃತಪೃಷ್ಠನೆಂಬುವನು ಯಜಮಾನನಾದನು. ॥೨೪॥

ಮೊಸರಿನ ಕೆನೆಯನ್ನೇ ನೀರಿನಸ್ಥಾನದಲ್ಲಿ ಪಡೆದಿರುವ ದಧಿಸಮುದ್ರದಿಂದ ಸುತ್ತುಗಟ್ಟಲ್ಪಟ್ಟ ರಮಣೀಯವಾದ ಆರನೆಯದಾದ ಶಾಕದ್ವೀಪಕ್ಕೆ ಪ್ರಿಯವ್ರತನ ಮಗನಾದ ಗುಣಶ್ರೇಷ್ಠನಾದ ಮೇಧಾತಿಥಿಯು ರಾಜನಾದನು. ॥೨೫॥

ಸಿಹಿನೀರಿನ ಸಮುದ್ರದಿಂದ ಸುತ್ತುವರಿಯಲ್ಪಟ್ಟ ಏಳನೆಯದಾದ ಪುಷ್ಕರ ದ್ವೀಪಕ್ಕೆ ತಂದೆಯಾದ ಪ್ರಿಯವ್ರತನಿಗೆ ಪ್ರೀತಿಪಾತ್ರನಾದ ವೀತಿಹೋತ್ರನು ರಾಜನಾದನು. ॥೨೬॥

ಕನ್ಯಾಮೂರ್ಜಸ್ವತೀ ನಾಮ್ನಾಂ ದದಾವುಶನಸೇ ವಿಭುಃ ।
ಆಸೀತ್ತಸ್ಯಾಂ ದೇವಯಾನೀ ಕನ್ಯಾ ಕಾವ್ಯಸ್ಯ ವಿಶ್ರುತಾ ॥೨೭॥

ಏವಂ ವಿಭಜ್ಯ ಪುತ್ರೇಭ್ಯಃ ಸಪ್ತದ್ವೀಪಾನ್ ಪ್ರಿಯವ್ರತಃ ।
ವಿವೇಕವಶಗೋ ಭೂತ್ವಾ ಯೋಗಮಾರ್ಗಾಶ್ರಿತೋಽಭವತ್ ॥೨೮॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಅಷ್ಟಮಸ್ಕಂಧೇ
ಚತುರ್ಥೋಽಧ್ಯಾಯಃ

---

ಆ ಪ್ರಿಯವ್ರತನು ಊರ್ಜಸ್ವತಿಯೆಂಬ ಹೆಸರುಳ್ಳ ತನ್ನ ಮಗಳನ್ನು ಉಶನನೆಂಬುವವನಿಗೆ, ಶುಕ್ರಾಚಾರ್ಯನಿಗೆ, ಕೊಟ್ಟು ವಿವಾಹ ಮಾಡಿದನು. ಆ ಊರ್ಜಸ್ವತಿಗೆ ಇತಿಹಾಸಪ್ರಸಿದ್ಧಳಾದ ದೇವಯಾನೆ ಎಂಬ ಕನ್ಯೆಯು ಹುಟ್ಟಿದಳು. ||೨೭||

ಆ ಪ್ರಿಯವ್ರತನು ಈ ಪ್ರಕಾರವಾಗಿ ತನ್ನ ಮಕ್ಕಳಿಗೆ ಏಳು ದ್ವೀಪಗಳನ್ನೂ ವಿಭಾಗಮಾಡಿಕೊಟ್ಟು ಆತ್ಮಜ್ಞಾನಸಂಪಾದನೆಗೋಸ್ಕರ ಯೋಗಮಾರ್ಗವನ್ನು ಅನುಸರಿಸಿದನು. ||೨೮||

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಎಂಟನೆಯ ಸ್ಕಂಧದಲ್ಲಿ
ನಾಲ್ಕನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಅಷ್ಟಮಸ್ಕಂಧೇ

### || ಪಂಚಮೋಽಧ್ಯಾಯಃ ||

### ಐದನೆಯ ಅಧ್ಯಾಯವು

|| ಶ್ರೀನಾರಾಯಣ ಉವಾಚ ||

**ದೇವರ್ಷೇ ಶೃಣು ವಿಸ್ತಾರಂ ದ್ವೀಪವರ್ಷವಿಭೇದತಃ ।**
**ಭೂಮಂಡಲಸ್ಯ ಸರ್ವಸ್ಯ ಯಥಾ ದೇವಪ್ರಕಲ್ಪಿತಂ ॥೧॥**

**ಸಮಾಸಾತ್ಸಂಪ್ರವಕ್ಷ್ಯಾಮಿ ನಾಽಲಂ ವಿಸ್ತರತಃ ಕ್ವಚಿತ್ ।**
**ಜಂಬೂದ್ವೀಪಃ ಪ್ರಥಮತಃ ಪ್ರಮಾಣೇ ಲಕ್ಷಯೋಜನಃ ॥೨॥**

---

ಈ ಅಧ್ಯಾಯದಲ್ಲಿ ಭೂಮಂಡಲದ ಪರಿಮಾಣವು ವರ್ಣಿಸಲ್ಪಡುವುದು. ನಾರದಮಹರ್ಷಿಯು ಭೂಮಂಡಲದ ಪರಿಮಾಣವಿಚಾರದಲ್ಲಿ ಶ್ರೀಮನ್ನಾರಾಯಣನನ್ನು ಪ್ರಶ್ನೆಮಾಡಿದನೆಂದು ಇಲ್ಲಿ ಭಾವಿಸಬೇಕು.

ಶ್ರೀಮನ್ನಾರಾಯಣನು ಹೇಳಿದನು-- ಎಲೈ ದೇವರ್ಷಿಯಾದನಾರದನೇ, ಜಂಬೂದ್ವೀಪ ಮೊದಲಾದ ದ್ವೀಪಭೇದಗಳಿಂದಲೂ, ಇಳಾವೃತ್ತ ಮೊದಲಾದ ವರ್ಷಭೇದಗಳಿಂದಲೂ ಕೂಡಿರುವ, ಪರಮೇಶ್ವರನಿಂದ ನಿರ್ಮಿತವಾದ ಈ ಸಮಸ್ತ ಭೂಮಂಡಲದ ಪರಿಮಾಣವನ್ನು ಹೇಳುವೆನು, ಕೇಳು. ||೧||

ಈ ಭೂಮಂಡಲದ ಪರಿಮಾಣವನ್ನು ಹೆಚ್ಚಾಗಿ ವಿಸ್ತರಿಸದೆ ಸಂಗ್ರಹವಾಗಿ ಹೇಳುತ್ತೇನೆ. ಮೊದಲನೆಯದಾದ ಜಂಬೂದ್ವೀಪವು ಲಕ್ಷಯೋಜನ ವಿಸ್ತಾರ ಉಳ್ಳದ್ದು. ||೨||

ವಿಶಾಲೋ ವರ್ತುಲಾಕಾರೋ ಯಥಾಽಬ್ಜಸ್ಯ ಚ ಕರ್ಣಿಕಾ ।
ನವವರ್ಷಾಣಿ ಯಸ್ಮಿಂಶ್ಚ ನವಸಾಹಸ್ರಯೋಜನೈಃ ॥೩॥

ಆಯಾಮೈಃ ಪರಿಸಂಖ್ಯಾನಿ ಗಿರಿಭಿಃ ಪರಿತಃ ಶ್ರಿತೈಃ ।
ಅಷ್ಟಭಿಃ ದೀರ್ಘರೂಪೈಶ್ಚ ಸುವಿಭಕ್ತಾನಿ ಸರ್ವತಃ ॥೪॥

ಧನುರ್ವತ್ಸಂಸ್ಥಿತೇ ಜ್ಞೇಯೇ ದೇವವರ್ಷೇ ದಕ್ಷಿಣೋತ್ತರೇ ।
ದೀರ್ಘಾಣಿ ತತ್ರ ಚತ್ವಾರಿ ಚತುರಸ್ರಮಿಲಾವೃತಂ ॥೫॥

ಇಲಾವೃತ್ತಂ ಮಧ್ಯವರ್ಷಂ ಯನ್ನಾಭ್ಯಾಂ ಸುಪ್ರತಿಷ್ಠಿತಃ ।
ಸೌವರ್ಣೋ ಗಿರಿರಾಜೋಽಯಂ ಲಕ್ಷಯೋಜನಮುಚ್ಛ್ರಿತಃ ॥೬॥

ಕರ್ಣಿಕಾರೂಪ ಏವಾಯಂ ಭೂಗೋಳಕಮಲಸ್ಯ ಚ ।
ಮೂರ್ಧ್ನಿ ದ್ವಾತ್ರಿಂಶತ್ಸಹಸ್ರಯೋಜನೈಃ ವಿತತಸ್ತ್ವಯಂ ॥೭॥

---

ಈ ಜಂಬೂದ್ವೀಪವು ಬಹಳ ದೊಡ್ಡದಾಗಿಯೂ, ಮತ್ತು ಕಮಲದ ಕರ್ಣಿಕೆಯಂತೆ ದುಂಡಾಗಿಯೂ, ಇರುತ್ತದೆ. ಇದರಲ್ಲಿರುವ ಒಂಬತ್ತು ವರ್ಷಗಳಲ್ಲಿ ಒಂದೊಂದು ವರ್ಷವೂ ಒಂಬತ್ತು ಸಾವಿರ ಯೋಜನ ವಿಸ್ತಾರ ಉಳ್ಳದ್ದೆಂದು ತಿಳಿಯಬೇಕು. ಈ ಒಂಬತ್ತು ವರ್ಷಗಳೂ ಕೂಡ ಎಲ್ಲ ಕಡೆಯಲ್ಲಿಯೂ, ಸಮುದ್ರದ ವರೆಗೂ ವ್ಯಾಪಿಸಿರುವ ಎಂಟು ನೀಳವಾದ ಪರ್ವತಗಳಿಂದ ವಿಭಾಗಿಸಲ್ಪಟ್ಟಿವೆ. ||೩-೪||

ಈ ಜಂಬೂದ್ವೀಪದ ಸನ್ನಿವೇಶವು ಹೇಗಿರುವುದೆಂದರೆ—ಇದರಲ್ಲಿ, ದಕ್ಷಿಣದಲ್ಲೂ ಮತ್ತು ಉತ್ತರದಲ್ಲೂ, ಇರುವ ಎರಡು ವರ್ಷಗಳು ಧನುಸ್ಸಿನ ಆಕಾರದಂತೆ ಇವೆಯೆಂದು ತಿಳಿಯಬೇಕು. ಮಿಕ್ಕ ನಾಲ್ಕು ವರ್ಷಗಳು ದೀರ್ಘಾಕಾರವಾಗಿವೆ. ಹೀಗೆ ಇಲಾವೃತ್ತವು ನಾಲ್ಕು ಕಡೆಗಳಲ್ಲೂ ಚಚ್ಚೌಕವಾಗಿದೆ. ||೫||

ಈ ಇಲಾವೃತ್ತವರ್ಷದ ಮಧ್ಯಭಾಗದಲ್ಲಿ ಲಕ್ಷಯೋಜನ ಎತ್ತರ ಉಳ್ಳ ಪರ್ವತಗಳಿಗೆಲ್ಲಾ ರಾಜನಾದ ಸುವರ್ಣಮಯವಾದ ಮೇರುಪರ್ವತವು ವ್ಯಾಪಿಸಿರುವುದು. ||೬||

ಈ ಮೇರು ಪರ್ವತವು ಭೂಗೋಳರೂಪವಾದ ಕಮಲಕ್ಕೆ ಕರ್ಣಿಕಾಸ್ಥಾನವಾಗಿದೆ. ಮತ್ತು ಮೇಲುಭಾಗದಲ್ಲಿ ಮೂವತ್ತೆರಡು ಸಾವಿರ ಯೋಜನದಷ್ಟು ವಿಸ್ತೀರ್ಣವಾಗಿದೆ. ||೭||

ಮೂಲೇ ಷೋಡಶಸಾಹಸ್ರಸ್ತಾವತಾಂತರ್ಗತಃ ಕ್ಷಿತೌ ।
ಇಳಾವೃತ್ತಸ್ಯೋತ್ತರತೋ ನೀಲಃ ಶ್ವೇತಶ್ಚ ಶೃಂಗವಾನ್ ॥೮॥

ತ್ರಯೋ ವೈ ಗಿರಯಃ ಪ್ರೋಕ್ತಾಃ ಮರ್ಯಾದಾವಧಯಸ್ತ್ರಿಷು ।
ರಮ್ಯಕಾಖ್ಯೇ ತಥಾ ವರ್ಷೇ ದ್ವಿತೀಯೇ ಚ ಹಿರಣ್ಮಯೇ ॥೯॥

ಕುರುವರ್ಷೇ ತೃತೀಯೇ ತು ಮರ್ಯಾದಾಂ ವ್ಯಂಜಯಂತಿ ತೇ ।
ಪ್ರಾಗಾಯತಾ ಉಭಯತಃ ಕ್ಷಾರೋದಾವಧಯಸ್ತಥಾ ॥೧೦॥

ದ್ವಿಸಹಸ್ರಪೃಥುತರಾಸ್ತಥಾ ಏಕೈಕಶಃ ಕ್ರಮಾತ್ ।
ಪೂರ್ವಾತ್ಪೂರ್ವಾಚ್ಚೋತ್ತರಸ್ಯಾಂ ದಶಾಂಶಾದಧಿಕಾಂಶತಃ ॥೧೧॥

ದೈರ್ಘ್ಯ ಏವ ಹ್ರಸಂತೀ ನೋ ನಾನಾನದನದೀಯುತಾಃ ।
ಇಳಾವೃತ್ತಾದ್ದಕ್ಷಿಣತೋ ನಿಷಧೋ ಹೇಮಕೂಟಕಃ ॥೧೨॥

---

ಮತ್ತು ಈ ಮೇರುಪರ್ವತವು ಕೆಳಭಾಗದಲ್ಲಿ ಹದಿನಾರುಸಾವಿರ ಯೋಜನದಷ್ಟು ವಿಸ್ತಾರ ಉಳ್ಳದ್ದಾಗಿ ಭೂಮಿಯಲ್ಲಿ ವ್ಯಾಪಿಸಿದೆ. ಇಳಾವೃತ್ತದ ಉತ್ತರ ದಿಕ್ಕಿನಲ್ಲಿ ನೀಲ, ಶ್ವೇತ, ಶೃಂಗ ಎಂಬ ಹೆಸರುಳ್ಳ, ॥೮॥

ಮೂರು ಪರ್ವತಗಳು ಮೊದಲನೆಯ ರಮ್ಯಕವೆಂಬ ವರ್ಷದಲ್ಲೂ, ಎರಡನೆಯ ಹಿರಣ್ಮಯವೆಂಬ ವರ್ಷದಲ್ಲೂ, ಮೂರನೆಯ ಕುರುವರ್ಷದಲ್ಲೂ, ಎಲ್ಲೆಯ, ಅವಧಿಯನ್ನು ತೋರಿಸುತ್ತವೆ. ಈ ಮೂರು ಪರ್ವತಗಳು ಪೂರ್ವಭಾಗದಲ್ಲೂ, ಮೇಲ್ಭಾಗ ಕೆಳಭಾಗಗಳಲ್ಲೂ ದೀರ್ಘಾಕಾರವಾದವುಗಳಾಗಿ ಕ್ಷೀರಸಮುದ್ರವನ್ನೇ ಅವಧಿಯಾಗಿಪಡೆದಿವೆ. ॥೯-೧೦॥

ಈ ಮೂರು ಪರ್ವತಗಳು ಎರಡು ಸಾವಿರ ಯೋಜನ ವಿಸ್ತೀರ್ಣ ಉಳ್ಳವುಗಳಾಗಿವೆ. ಪೂರ್ವಭಾಗಕ್ಕಿಂತ ಉತ್ತರಭಾಗದಲ್ಲಿ ದಶಾಂಶಕ್ಕಿಂತ ಸ್ವಲ್ಪ ಹೆಚ್ಚಾದ ಅಂಶದಿಂದ ಕೂಡಿ ॥೧೧॥

ಉದ್ದದಲ್ಲಿ ವ್ಯತ್ಯಾಸವನ್ನು ಹೊಂದಿವೆ. ಮತ್ತು ಈ ಪರ್ವತಗಳು ಸಮುದ್ರಗಾಮಿಗಳಾದ, ಪೂರ್ವಕ್ಕೂ ಪಶ್ಚಿಮಕ್ಕೂ ಹರಿಯುವ ಅನೇಕ ನದಿ ನದ ಮತ್ತು ಉಪನದಿಗಳಿಂದ ಕೂಡಿವೆ. ಇಳಾವೃತ್ತದ ದಕ್ಷಿಣಭಾಗದಲ್ಲಿ ನಿಷಧ, ಹೇಮಕೂಟ ಎಂಬ ಪರ್ವತಗಳೂ, ॥೧೨॥

ಹಿಮಾಲಯಶ್ಚೇತಿ ತ್ರಯಃ ಪ್ರಾಗ್ವಿಸ್ತೀರ್ಣಾಃ ಸುಶೋಭನಾಃ ।
ಅಯುತೋತ್ಸೇಧಭಾಜಸ್ತೇ ಯೋಜನೈಃ ಪರಿಕೀರ್ತಿತಾಃ ॥೧೩॥

ಹರಿವರ್ಷಂ ಕಿಂಪುರುಷಂ ಭಾರತಂ ಚ ಯಥಾತಥಂ ।
ವಿಭಾಗಾತ್ಕಥಯಂತ್ಯೇತೇ ಮರ್ಯಾದಾಗಿರಯಸ್ತ್ರಯಃ ॥೧೪॥

ಇಳಾವೃತ್ತಾತ್ಪಶ್ಚಿಮತೋ ಮಾಲ್ಯವಾನ್ನಾಮ ಪರ್ವತಃ ।
ಪೂರ್ವೇಣ ಚ ತತಃ ಶ್ರೀಮಾನ್ ಗಂಧಮಾದನಪರ್ವತಃ ॥೧೫॥

ಆನೀಲನಿಷಧಂ ತ್ವೇತೌ ಚಾಯತೌ ದ್ವಿಸಹಸ್ರತಃ ।
ಯೋಜನೈಃ ಪೃಥುತಾಂ ಯಾತೌ ಮರ್ಯಾದಾಕಾರಕೌ ಗಿರೀ ॥೧೬॥

ಕೇತುಮಾಲಾಖ್ಯಭದ್ರಾಶ್ವ ವರ್ಷಯೋಃ ಪ್ರಥಿತೌ ಚ ತೌ ।
ಮಂದರಶ್ಚ ತಥಾ ಮೇರುರ್ಮಂದರಶ್ಚ ಸುಪಾರ್ಶ್ವಕಃ ॥೧೭॥

ಕುಮುದಶ್ಚೇತಿ ವಿಖ್ಯಾತಾ ಗಿರಯೋ ಮೇರುಪಾದಕಾಃ ।
ಯೋಜನಾಯುತ ವಿಸ್ತಾರೋನ್ನಾಹಾ ಮೇರೋಶ್ಚತುರ್ದಿಶಂ ॥೧೮॥

---

ಹಿಮಾಲಯವೆಂಬ ಪರ್ವತವೂ, ಒಟ್ಟು ಮೂರು ಪರ್ವತಗಳು ಇರುತ್ತವೆ. ಇವುಗಳು ಪೂರ್ವದಿಕ್ಕಿಗೆ ವಿಸ್ತರಿಸಿರುವವುಗಳಾಗಿ, ಬಹಳ ರಮ್ಯವಾದವುಗಳಾಗಿ ಅಯುತ ಎಂದರೆ ಹತ್ತುಸಾವಿರ ಯೋಜನ ಪ್ರಮಾಣವನ್ನು ಹೊಂದಿವೆ. ॥೧೩॥

ಈ ಮೂರು ಪರ್ವತಗಳೂ ಹರಿವರ್ಷ, ಕಿಂಪುರುಷ, ಭಾರತ, ಈ ವರ್ಷತ್ರಯಗಳ ಎಲ್ಲೆಯನ್ನು ಬೋಧನೆ ಮಾಡತಕ್ಕವುಗಳಾಗಿವೆ. ॥೧೪॥

ಇಳಾವೃತ್ತದ ಪಶ್ಚಿಮಭಾಗದಲ್ಲಿ ಮಾಲ್ಯವಾನ್ ಎಂಬ ಪರ್ವತವೂ, ಪೂರ್ವಭಾಗದಲ್ಲಿ ಶ್ರೇಷ್ಠವಾದ ಗಂಧ ಮಾದನಪರ್ವತವೂ ಇದೆ. ॥೧೫॥

ಈ ಎರಡು ಪರ್ವತಗಳೂ ಕೂಡ, ನೀಲ, ನಿಷಧ, ಪರ್ವತಗಳ ವರೆಗೂ ಹಬ್ಬಿಕೊಂಡು ಎರಡುಸಾವಿರ ಯೋಜನ ವಿಸ್ತಾರವುಳ್ಳವುಗಳಾಗಿ, ಕೇತುಮಾಲ ಭದ್ರಾಶ್ವ ವರ್ಷಗಳ ಎಲ್ಲೆಯನ್ನು ತೋರಿಸತಕ್ಕವುಗಳಾಗಿವೆ. ಮಂದರಮೇರು, ಮಂದರ, ಸುಪಾರ್ಶ್ವ, ಕುಮುದ, ಈ ಪ್ರಸಿದ್ಧಗಳಾದ ಪರ್ವತಗಳು ಅಯುತಯೋಜನ ಪ್ರಮಾಣವನ್ನು ಹೊಂದಿ ಮೇರುಪರ್ವತದ ನಾಲ್ಕುದಿಕ್ಕುಗಳಲ್ಲಿಯೂ ಅದರ ಪಾದಗಳೆಂಬುದಾಗಿ ಕರೆಯಲ್ಪಡುತ್ತವೆ. ॥೧೬-೧೭-೧೮॥

ಅವಷ್ಟಂಭಕರಾಸ್ತೇತು ಸರ್ವತೋಽಭಿವಿರಾಜಿತಾಃ ।
ಏತೇಷು ಗಿರಿಷು ಪ್ರಾಪ್ತಾಃ ಪಾದಪಾಶ್ಚೂತಜಂಬುನೀ ॥೧೯॥

ಕದಂಬನ್ಯಗ್ರೋಧ ಇತಿ ಚತ್ವಾರಃ ಪರ್ವತಾಃ ಸ್ಥಿತಾಃ ।
ಕೇತವೋ ಗಿರಿರಾಜೇಷು ಏಕಾದಶಶತೋ ಛ್ರಯಾಃ ॥೨೦॥

ತಾವದ್ವಿಟಪವಿಸ್ತಾರಾಃ ಶತಾಖ್ಯಪರಿಣಾಹಿನಃ ।
ಚತ್ವಾರಶ್ಚ ಹ್ರದಾಸ್ತೇಷು ಪಯೋ ಮಧ್ವಿಕ್ಷುಸಜ್ಜಲಾಃ ॥೨೧॥

ಯದುಪಸ್ಪರ್ಶಿನೋ ದೇವಾ ಯೋಗೈಶ್ವರ್ಯಾಣಿ ವಿಂದತೇ ।
ದೇವೋದ್ಯಾನಾನಿ ಚತ್ವಾರಿ ಭವಂತಿ ಲಲನಾ ಸುಖಾಃ ॥೨೨॥

ನಂದನಂ ಚೈತ್ರರಥಕಂ ವೈಭ್ರಾಜಂ ಸರ್ವಭದ್ರಕಂ ।
ಯೇಷು ಸ್ಥಿತ್ವಾಽಮರಗಣಾ ಲಲನಾ ಯೂಥಸಂಯುತಾಃ ॥೨೩॥

ಉಪದೇವಗಣೈರ್ಗೀತಮಹಿಮಾನೋ ಮಹಾಶಯಾಃ ।
ವಿಹರಂತಿ ಸ್ವತಂತ್ರಾಸ್ತೇ ಯಥಾಕಾಮಂ ಯಥಾಸುಖಂ ॥೨೪॥

---

ಈ ಪರ್ವತಗಳು ಎಲ್ಲಾ ದಿಕ್ಕುಗಳಲ್ಲೂ ಪ್ರಕಾಶಿಸುತ್ತಾ ಮೇರುಪರ್ವತವನ್ನಾಶ್ರಯಿಸಿಕೊಂಡಿವೆ. ಮತ್ತು ಇವುಗಳಿಗೆ ನೂರಹನ್ನೊಂದು ಯೋಜನ ಪರಿಮಾಣವುಳ್ಳ ಚೂತ-ಜಂಬು-ಕದಂಬ, ನ್ಯಗ್ರೋಧಗಳೆಂಬ ನಾಲ್ಕು ಪರ್ವತಗಳು ಧ್ವಜರೂಪಗಳಾಗಿರುತ್ತವೆ. ||೧೯-೨೦||

ಈ ಪರ್ವತಗಳಲ್ಲಿ ನೂರು ಯೋಜನ ವಿಸ್ತಾರವುಳ್ಳ, ಹಾಲು, ಜೇನುತುಪ್ಪ, ಕಬ್ಬಿನರಸ, ಸಿಹಿನೀರು ಇವುಗಳಿಂದ ಕೂಡಿದ ನಾಲ್ಕು ಸರೋವರಗಳು ಇವೆ. ||೨೧||

ಮತ್ತು ಈ ಪರ್ವತಗಳಲ್ಲಿ ಯಾವ ಉದ್ಯಾನಗಳಲ್ಲಿ ವಿಹರಿಸುವುದರಿಂದ ದೇವತೆಗಳು ಯೋಗಜ್ಞಾನವನ್ನೂ, ಐಶ್ವರ್ಯವನ್ನೂ ಹೊಂದುತ್ತಾರೋ ಅಂಥ ದೇವಸ್ತ್ರೀಯರಿಗೂ ಸುಖವನ್ನು ಕೊಡುವ, ನಂದನ, ಚೈತ್ರರಥ, ವೈಭ್ರಾಜ, ಸರ್ವಭದ್ರವೆಂಬ ನಾಲ್ಕು ದೇವೋದ್ಯಾನಗಳು ಇರುತ್ತವೆ. ಇವುಗಳಲ್ಲಿ ಗಂಧರ್ವರೇ ಮೊದಲಾದ ದೇವಸಮೂಹಗಳಿಂದ ಸ್ತುತಿಸಲ್ಪಟ್ಟ ಮಹಾತ್ಮ್ಯವುಳ್ಳ ಮಹಾಜ್ಞಾನಿಗಳಾದ ದೇವತೆಗಳು ಸ್ತ್ರೀಸಮೂಹದಿಂದ ಒಡಗೂಡಿ, ಯಾರ ಭಯವೂ ಯಾವ ಆತಂಕವೂ ಇಲ್ಲದೆ ಸ್ವೇಚ್ಛೆಯಿಂದ ಸುಖವನ್ನು ಅನುಭವಿಸುತ್ತಾರೆ. ||೨೨-೨೩-೨೪||

ಮಂದರೋತ್ಸಂಗಸಂಸ್ಥಸ್ಯ ದೇವಚೂತಸ್ಯ ಮಸ್ತಕಾತ್ ।
ಏಕಾದಶಶತೋಚ್ಛ್ರಾಯಾತ್ಫಲಾನ್ಯಮೃತಭಾಂಜಿ ಚ ॥೧೫॥

ಗಿರಿಕೂಟಪ್ರಮಾಣಾನಿ ಸುಸ್ವಾದೂನಿ ಮೃದೂನಿ ಚ ।
ತೇಷಾಂ ವಿಶೀರ್ಯಮಾಣಾನಾಂ ಫಲಾನಾಂ ಸುರಸೇನ ಚ ॥೧೬॥

ಅರುಣೋದಸವರ್ಣೇನ ಅರುಣೋದಾ ಪ್ರವರ್ತತೇ ।
ನದೀ ರಮ್ಯಜಲಾ ದೇವದೈತ್ಯರಾಜ ಪ್ರಪೂಜಿತಾಃ ॥೧೭॥

ಅರುಣಾಖ್ಯಾ ಮಹಾರಾಜ ವರ್ತತೇ ಪಾಪಹಾರಿಣೀ ।
ಪೂಜಯಂತಿ ಚ ತಾಂ ದೇವೀಂ ಸರ್ವಕಾಮಫಲಪ್ರದಾಂ ॥೧೮॥

ನಾನೋಪಹಾರಬಲಿಭಿಃ ಕಲ್ಮಷಘ್ನ್ಯಭಯಪ್ರದಾಂ ।
ತಸ್ಯಾಃ ಕೃಪಾವಲೋಕೇನ ಕ್ಷೇಮಾರೋಗ್ಯಂ ವ್ರಜಂತಿ ತೇ ॥೧೯॥

---

ಮಂದರಪರ್ವತದ ಸಮೀಪದಲ್ಲಿರುವ ನೂರಹನ್ನೊಂದು ಯೋಜನಪರಿಮಾಣವುಳ್ಳ ಶ್ರೇಷ್ಠವಾದ ಮಾವಿನಮರದ ಮೇಲ್ಭಾಗದಿಂದ ಅಮೃತರಸವುಳ್ಳ ಫಲಗಳು ಬೀಳುತ್ತವೆ. ॥೧೫॥

ಪರ್ವತಶಿಖರಾಕಾರವಾಗಿರುವ ಆ ಮಾವಿನ ಹಣ್ಣುಗಳು ಬಹಳ ರುಚಿಯಾಗಿಯೂ, ಮೃದುವಾಗಿಯೂ ಇರುವುವು. ಮತ್ತು ಆ ಪ್ರದೇಶದಲ್ಲಿ ಆ ದೇವಚೂತವೆಂಬ ವೃಕ್ಷದಿಂದ ಬಿದ್ದ ಮಾವಿನಹಣ್ಣುಗಳ ಒಳ್ಳೆಯರಸದಿಂದ ಕೂಡಿದ, ಸಂಜೆಗೆಂಪಿನ ಬಣ್ಣಕ್ಕೆ ಸಮಾನವಾದ ಬಣ್ಣವುಳ್ಳ, ನಿರ್ಮಲವಾದ ನೀರುಳ್ಳ, ದೇವದಾನವರಿಂದ ವಿಶೇಷವಾಗಿ ಆದರಿಸಿ ಸೇವಿಸಿ, ಪೂಜಿಸಲ್ಪಟ್ಟ, ಅರುಣೋದಾ ಎಂಬ ಹೆಸರುಳ್ಳ ನದಿಯು ಪ್ರವಹಿಸುವುದು. ॥೧೬-೧೭॥

ಎಲೈ ರಾಜನೇ, ಆ ಸ್ಥಳದಲ್ಲಿ ಸಮಸ್ತ ಪಾಪಗಳನ್ನೂ ಪರಿಹರಿಸುವ ಅರುಣಾ ಎಂಬ ಹೆಸರುಳ್ಳ ದೇವಿಯು ಇರುವಳು. ಸಮಸ್ತ ಇಷ್ಟಾರ್ಥಗಳನ್ನೂ ಕೊಡುವ, ಪಾಪಗಳನ್ನು ನಾಶಪಡಿಸಿ ಅಭಯದಾನಮಾಡುವ ಆ ದೇವಿಯನ್ನು ಅಲ್ಲಿರುವ ದೇವತೆಗಳು ಅನೇಕ ವಿಧವಾದ ಬಲಿ, ನಿವೇದನಗಳಿಂದ ಪೂಜೆಮಾಡುತ್ತಾರೆ. ಮತ್ತು ಅವರು ಆ ದೇವಿಯ ದಯಾಪೂರ್ಣದೃಷ್ಟಿಯಿಂದ ಕ್ಷೇಮವನ್ನೂ ಆರೋಗ್ಯವನ್ನೂ, ಹೊಂದುತ್ತಿರುವರು. ॥೧೯॥

ಆದ್ಯಾ ಮಾಯಾಽತುಲಾನಂತಾ ಪುಷ್ಟಿರೀಶ್ವರಮಾಲಿನೀ ।
ದುಷ್ಟ ನಾಶಕರೀ ಕಾಂತಿದಾಯಿನೀತಿ ಸ್ಮೃತಾ ಭುವಿ ॥೩೦॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಅಷ್ಟಮಸ್ಕಂಧೇ
ಪಂಚಮೋಽಧ್ಯಾಯಃ

---

ದೇವಸಮೂಹಗಳು ಆ ದೇವಿಯನ್ನು ಈ ನಾಮವಿಶೇಷಗಳಿಂದ ಪೂಜಿಸುವರು. ಆದ್ಯಾಮಾಯಾ, ಈ ಎಲ್ಲಕ್ಕೂ ಕಾರಣಳಾಗಿ ಮೊದಲಿನವಳಾದ, ಈ ಸಮಸ್ತಕ್ಕೂ ಅಧಿಷ್ಠಾನವಾಗಿರುವ ಬ್ರಹ್ಮರೂಪಿಣಿಯಾದ, ಮಾಯೆಯೆಂಬ ಹೆಸರನ್ನು ಹೊಂದಿರುವಳು. ಅತುಲಾ, ಅದ್ವಿತೀಯಳು, ಅನಂತಾ, ನಾಶರಹಿತಳು, ಪುಷ್ಟಿಃ–ಸಮಸ್ತ ಪ್ರಾಣಿಗಳಿಗೂ ಪೋಷಕಳು, ದುಷ್ಟನಾಶಕರೀ--ದುಷ್ಟರನ್ನು ಸಂಹರಿಸುವವಳು. ಈಶ್ವರಮಾಲಿನೀ–ಪರಮೇಶ್ವರನಿಗೆ ಅಲಂಕಾರಸ್ವರೂಪಳು. ಕಾಂತಿದಾಯಿನೀ–ಪ್ರತಿಭಾಕಾಂತಿಯನ್ನು ಉಂಟುಮಾಡಿಕೊಡುವವಳು, ಈ ಪ್ರಕಾರವಾಗಿ ಆ ದೇವಿಯು ಈ ಪ್ರಪಂಚದಲ್ಲಿ ಪ್ರಖ್ಯಾತಳಾಗಿರುವಳು. ಈ ದೇವಿಯನ್ನು ಪೂಜೆಮಾಡಿದುದರ ಫಲವಾಗಿಯೇ ಸುವರ್ಣವೆಂಬ ಲೋಹವು ಬಹಿಃ ಪ್ರಕಾಶವನ್ನು ಹೊರಗಿನ ಹೊಳಪನ್ನೂ ಹೊಂದಿತು. ॥೩೦॥

ಇಲ್ಲಿಗೆ ಶ್ರೀ ದೇವೀಭಾಗವತಮಹಾಪುರಾಣದ ಎಂಟನೆಯ ಸ್ಕಂಧದಲ್ಲಿ
ಐದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಅಷ್ಟಮಸ್ಕಂಧೇ

### ॥ ಷಷ್ಠೋಽಧ್ಯಾಯಃ ॥

### ಆರನೆಯ ಅಧ್ಯಾಯವು

॥ ಶ್ರೀ ನಾರಾಯಣ ಉವಾಚ ॥

**ಅರುಣೋದಾ ನದೀ ಯಾ ತು ಮಯಾ ಪ್ರೋಕ್ತಾ ಚ ನಾರದ ।**
**ಮಂದರಾನ್ನಿಪತಂತೀ ಸಾ ಪೂರ್ವೇಣೇಲಾವೃತಂ ಪ್ಲವೇತ್ ॥೧॥**

**ಯಜ್ಜೋಷಣಾದ್ಭವಾನ್ಯಾಶ್ಚಾನುಚರೀಣಾಂ ಸ್ತ್ರಿಯಾಮಪಿ ।**
**ಯಕ್ಷಗಂಧರ್ವಪತ್ನೀನಾಂ ದೇಹಗಂಧವಹೋಽನಿಲಃ ॥೨॥**

---

ನಾರಾಯಣನು ಹೇಳಿದನು—ಎಲೈ ನಾರದನೇ, ಪ್ರಾತಃಕಾಲದ ಸಂಜೆಗೆಂಪಿನಂತೆ ಬಣ್ಣವುಳ್ಳ, ಮಾವಿನಹಣ್ಣಿನ ರಸವೇ ನೀರಾಗಿ ಉಳ್ಳ, ನನ್ನಿಂದ ಹೇಳಲ್ಪಟ್ಟ ಆ ಅರುಣೋದಾನದಿಯು ಮಂದರಪರ್ವತದಿಂದ ಕೆಳಗೆ ಬಿದ್ದು ಇಳಾವೃತ್ತದ ಪೂರ್ವಭಾಗದಲ್ಲಿ ಪ್ರವಹಿಸುವುದು. ॥೧॥

ಆ ಇಳಾವೃತ್ತದ ಪೂರ್ವಭಾಗದಲ್ಲಿ, ಪರಮೇಶ್ವರನೊಂದಿಗೆ ವಿಹರಿಸುತ್ತಿರುವ ಪಾರ್ವತಿಯ ಸೇವಕಿಯರು ಮತ್ತು ಯಕ್ಷಗಂಧರ್ವಸ್ತ್ರೀಯರೂ ಸಹ ಪೂರ್ವೋಕ್ತವಾದ ಮಾವಿನಹಣ್ಣಿನ ರಸದ ರುಚಿಯುಳ್ಳ ಆ ಅರುಣೋದಾನದಿಯ ಜಲವನ್ನು ಸೇವನೆಮಾಡುವುದರಿಂದ ಉಂಟಾದ ಅಂಥ ಸ್ತ್ರೀಯರ ಶರೀರದ ಸುವಾಸನೆಯನ್ನು ವಾಯುವು, ॥೨॥

**ವಾಸಯತ್ಯಭಿತೋ ಭೂಮಿಂ ದಶಯೋಜನಸಂಖ್ಯಯಾ ।**
**ಏವಂ ಜಂಬೂಫಲಾನಾಂ ಚ ತುಂಗದೇಶನಿಪಾತನಾತ್ ॥೩॥**

**ವಿಶೀರ್ಯತಾಮನಸ್ಥೀನಾಂ ಕುಂಜರಾಂಗಪ್ರಮಾಣಿನಾಂ ।**
**ರಸೇನ ಚ ನದೀ ಜಂಬೂ ನಾಮ್ನಾ ಮೇರ್ವಾಖ್ಯಮಂದರಾತ್ ॥೪॥**

**ಪತಂತೀ ಭೂಮಿಭಾಗೇ ಚ ದಕ್ಷಿಣೇಳಾವೃತಂ ಗತಾ ।**
**ದೇವೀ ಜಂಬೂಫಲಾಸ್ವಾದತುಷ್ಟಾ ಜಂಬ್ವಾದಿನೀ ಸ್ಮೃತಾ ॥೫॥**

**ತತ್ರತ್ಯಾನಾಂ ಚ ಲೋಕಾನಾಂ ದೇವನಾಗರ್ಷಿರಕ್ಷಸಾಂ ।**
**ಪೂಜನೀಯಪದಾ ಮಾನ್ಯಾ ಸರ್ವಭೂತದಯಾಕರೀ ॥೬॥**

**ಪಾವನೀ ಪಾಪಿನಾಂ ರೋಗನಾಶನೀ ಸ್ಮರತಾಮಪಿ ।**
**ಕೀರ್ತಿತಾ ವಿಘ್ನಸಂಹರ್ತ್ರೀ ಮಾನನೀಯಾ ದಿವೌಕಸಾಂ ॥೭॥**

---

ಹತ್ತು ಯೋಜನದ ವರೆಗಿನ ಪ್ರದೇಶದಲ್ಲಿ ಹರಡಿ ಆ ದೇಶವನ್ನು ಸುವಾಸನೆಯುಳ್ಳದ್ದನ್ನಾಗಿ ಮಾಡುವುದು. ಇದೇ ರೀತಿಯಲ್ಲಿ ಬಹಳ ಎತ್ತರವಾದ ಪ್ರದೇಶದಿಂದ ಕೆಳಗೆ ಬೀಳುವ, ಸೂಕ್ಷ್ಮವಾದ ಬೀಜಗಳುಳ್ಳ, ನೇರಳೇ ಹಣ್ಣುಗಳ ರಸವೇ ಉದಕವಾಗಿ ಉಳ್ಳ ಜಂಬೂ ಎಂಬ ನದಿಯು, ॥೩-೪॥

ಮೇರುಪರ್ವತದಿಂದ ಕೆಳಗೆ ಬಿದ್ದು ಇಳಾವೃತ್ತದ ದಕ್ಷಿಣದಲ್ಲಿ ಪ್ರವಹಿಸುವುದು. ಜಂಬೂವೃಕ್ಷದ ಹಣ್ಣುಗಳ ರುಚಿಯಿಂದ ಸಂತುಷ್ಟಳಾದ ದೇವಿಯು ಜಂಬ್ವಾದಿನೀ ಎಂಬ ಹೆಸರಿನಿಂದ ಪ್ರಸಿದ್ಧಳಾದಳು. ॥೫॥

ಆ ದೇವಿಯು, ಆ ಪ್ರದೇಶದಲ್ಲಿರುವ ದೇವತೆಗಳು, ಸರ್ಪಗಳು, ಮುನಿಗಳು ರಾಕ್ಷಸರು, ಇವರಿಂದ ಆರಾಧಿಸಲ್ಪಡುವವಳಾಗಿ, ಎಲ್ಲರಿಂದಲೂ ಗೌರವಿಸಲ್ಪಟ್ಟು ಸಮಸ್ತ ಪ್ರಾಣಿಗಳಲ್ಲೂ ದಯೆಯುಳ್ಳವಳಾಗಿರುವಳು. ॥೬॥

ಮತ್ತು ಆ ದೇವಿಯು ಪಾಪಿಷ್ಠರನ್ನು ಶುದ್ಧಿಗೊಳಿಸುವವಳೂ, ಅವರ ವ್ಯಾಧಿಗಳನ್ನು ಪರಿಹರಿಸತಕ್ಕವಳೂ, ತನ್ನ ನಾಮಸ್ಮರಣೆಯನ್ನು ಮಾಡುವ ಜನರಿಗೆ ಒದಗುವ ವಿಘ್ನಗಳನ್ನು ಪರಿಹಾರಮಾಡುವವಳೂ, ದೇವತೆಗಳಿಂದಲೂ ಪೂಜಿಸಲ್ಪಟ್ಟವಳೂ ಆಗಿರುವಳು. ॥೭॥

ಕೋಕಿಲಾಕ್ಷೀ ಕಾಮಕಲಾ ಕರುಣಾ ಕಾಮಪೂಜಿತಾ ।
ಕಠೋರವಿಗ್ರಹಾ ಧನ್ಯಾ ನಾಕಿಮಾನ್ಯಾ ಗಭಸ್ತಿನೀ ॥೮॥

ಏಭಿರ್ನಾಮಪದೈಃ ಕಾಮಂ ಜಪನೀಯಾ ಸದಾ ನೃಣಾಂ ।
ಜಂಬೂನದೀ ರೋಧಸೋರ್ಯಾ ಮೃತ್ತಿಕಾತೀರವರ್ತಿನೀ ॥೯॥

ಜಂಬೂರಸೇನಾನುವಿಧ್ಯಮಾನಾ ವಾಯ್ವರ್ಕಯೋಗತಃ ।
ವಿದ್ಯಾಧರಾಮರಸ್ತ್ರೀಣಾಂ ಭೂಷಣಂ ವಿವಿಧಂ ಮಹತ್ ॥೧೦॥

ಜಾಂಬೂನದಸುವರ್ಣಂ ಚ ಪ್ರೋಕ್ತಂ ದೇವವಿನಿರ್ಮಿತಂ ।
ಯತ್ಸುವರ್ಣಂ ಚ ವಿವಿಧಾ ಯೋಷಿದ್ಭಿಃ ಕಾಮುಕಾಸ್ಸದಾ ॥೧೧॥

ಮುಕುಟಂ ಕಟಿಸೂತ್ರಂ ಚ ಕೇಯೂರಾದೀನ್ಪ್ರಕುರ್ವತೇ ।
ಮಹಾಕದಂಬಃ ಸಂಪ್ರೋಕ್ತಃ ಸುಪಾರ್ಶ್ವಗಿರಿಸಂಸ್ಥಿತಃ ॥೧೨॥

---

ಆ ದೇವಿಯು, ಕೋಕಿಲಾಕ್ಷೀ, ಕಾಮಕಲಾ, ಕರುಣಾ, ಕಾಮಪೂಜಿತಾ, ಕಠೋರವಿಗ್ರಹಾ, ಧನ್ಯಾ, ನಾಕಿಮಾನ್ಯಾ, ಗಭಸ್ತಿನೀ, ಈ ನಾಮವಿಶೇಷಗಳಿಂದ, ಜನರಿಂದ ಹೆಚ್ಚಾಗಿ ಯಾವಾಗಲೂ ಜಪಿಸಲ್ಪಡುವವಳಾಗಿದ್ದಾಳೆ. ಹಿಂದೆ ಹೇಳಲ್ಪಟ್ಟ ಜಂಬೂನದಿಯ ಎರಡು ದಡಗಳ ತೀರದಲ್ಲಿರುವ ಮಣ್ಣಿನರಾಶಿಯು, ॥೮-೯॥

ನೇರಳೆಹಣ್ಣಿನ ರಸದಿಂದ ಮಿಶ್ರಿತವಾದ ವಾಯುಸೂರ್ಯರ ಸಂಬಂಧದಿಂದ ಸುವರ್ಣರೂಪವಾಗಿ ದೇವತಾಸ್ತ್ರೀಯರಿಗೆ ಅನೇಕ ವಿಧವಾದ ಆಭರಣಗಳ ರಚನೆಗೆ ಸಹಾಯಕವಾಗಿದೆ. ॥೧೦॥

ಪರಮೇಶ್ವರನಿಂದ ನಿರ್ಮಿತವಾದ ಈ ಸುವರ್ಣವು ಜಂಬೂನದಿಯ ಸುವರ್ಣವೆಂದು ಹೇಳಲ್ಪಟ್ಟಿದೆ. ಈ ಸುವರ್ಣವನ್ನು ಕಾಮಶೀಲರಾದ ಅನೇಕ ದೇವತೆಗಳು ಸ್ತ್ರೀಯರಿಂದೊಡಗೂಡಿ ಯಾವಾಗಲೂ, ॥೧೧॥

ಮಕುಟ, ಕಟಿಸೂತ್ರ, ಕೇಯೂರ, ಮೊದಲಾದ ಆಭರಣಗಳನ್ನು ಮಾಡಿಕೊಳ್ಳುತ್ತಾರೆ. ಸುಪಾರ್ಶ್ವಗಿರಿಯ ಸಮೀಪದಲ್ಲಿ ಮಹಾಕದಂಬವೆಂಬ, ಪರ್ವತವು ಇರುವುದು. ॥೧೨॥

ತಸ್ಯ ಕೋಟರದೇಶೇಭ್ಯಃ ಪಂಚಧಾರಾಶ್ಚ ಯಾಃ ಸ್ಮೃತಾಃ ।
ಸುಪಾರ್ಶ್ವೇ ಗಿರಿಮೂರ್ಧ್ನೀಹ ಪತಂತ್ಯೇತಾ ಭುವಂ ಗತಾಃ ॥೧೩॥

ಮಧುಧಾರಾ ಪಂಚ ತಾಸ್ತು ಪಶ್ಚಿಮೇಲಾವೃತಂ ಪ್ಲುತಾಃ ।
ಯಾಶ್ಚೋಪಭುಜ್ಯಮಾನಾನಾಂ ದೇವಾನಾಂ ಮುಖಗಂಧಭೃತ್॥೧೪॥

ವಾಯುಸ್ಸಮಂತತೋ ಗಚ್ಛನ್ ಶತಯೋಜನವಾಸನಃ ।
ಧಾರೇಶ್ವರೀ ಮಹಾದೇವೀ ಭಕ್ತಾನಾಂ ಕಾರ್ಯಕಾರಿಣೀ ॥೧೫॥

ದೇವಪೂಜ್ಯಾ ಮಹೋತ್ಸಾಹಾ ಕಾಲರೂಪಾ ಮಹಾನನಾ ।
ವಸತೇ ಕರ್ಮಫಲದಾ ಕಾಂತಾರಗ್ರಹಣೇಶ್ವರೀ ॥೧೬॥

ಕರಾಳದೇಹಾ ಕಾಲಾಂಗೀ ಕಾಮಕೋಟಿಪ್ರವರ್ತಿನೀ ।
ಇತ್ಯೇತೈರ್ನಾಮಭಿಃ ಪೂಜ್ಯಾ ದೇವೀ ಸರ್ವಸುರೇಶ್ವರೀ ॥೧೭॥

---

ಆ ಪರ್ವತದ ಮೇಲು ಭಾಗಗಳಿಂದ ಹರಿಯುವ ಐದು ಪ್ರವಾಹಗಳು ಸುಪಾರ್ಶ್ವಪರ್ವತದಿಂದ ಕೆಳಕ್ಕೆ ಹರಿದು ಬಿದ್ದು ಭೂಮಿಯನ್ನು ಹೊಂದುತ್ತವೆ. ||೧೩||

ಜೇನಿನಂತೆ ಸಿಹಿಯಾದ ನೀರುಳ್ಳ ಆ ಐದು ಪ್ರವಾಹಗಳೂ ಇಳಾವೃತ್ತದ ಪಶ್ಚಿಮಭಾಗದಲ್ಲಿ ಹರಿಯುವುವು. ಇವುಗಳನ್ನು ಸೇವಿಸುವ ದೇವತೆಗಳ ಮುಖದಲ್ಲಿರುವ ಸುಗಂಧವನ್ನು ಹರಡುವ, ||೧೪||

ವಾಯುವು ಸುತ್ತಲೂ ನೂರುಯೋಜನದವರೆಗೆ, ಪರಿಮಳವನ್ನು ಕೊಡುವುದು. ಆ ಸ್ಥಳದಲ್ಲಿ ಭಕ್ತರ ಕೆಲಸಗಳನ್ನು ನೆರವೇರಿಸುವ "ಧಾರೇಶ್ವರೀ" ಎಂಬ ಶ್ರೇಷ್ಠಳಾದ ದೇವಿಯು ಇರುವಳು. ||೧೫||

ಆ ದೇವಿಯು, ದೇವತೆಗಳಿಂದಲೂ ಪೂಜಿಸಲ್ಪಟ್ಟವಳೂ, ಹೆಚ್ಚಾದ ಉತ್ಸಾಹ ಉಳ್ಳವಳೂ, ಕಾಲಸ್ವರೂಪಿಣಿಯೂ, ಶ್ರೇಷ್ಠವಾದ ಮುಖವುಳ್ಳವಳೂ, ಪುಣ್ಯ ಪಾಪ ರೂಪವಾದ ಕೆಲಸಗಳಿಗೆ ಉಚಿತವಾದ ಫಲವನ್ನು ಕೊಡುವವಳೂ, ||೧೬||

ಸಮಸ್ತ ದೇವತೆಗಳಿಗೂ ರಕ್ಷಕಳೂ ಆದ ಆ ದೇವಿಯು, ಕರಾಳದೇಹಾ, ಕಾಲಾಂಗೀ, ಕಾಮಕೋಟಿಪ್ರವರ್ತಿನೀ, ಈ ನಾಮ ವಿಶೇಷಗಳಿಂದ ಪೂಜಿಸಲ್ಪಡಬೇಕು. ||೧೭||

ಏವಂ ಕುಮುದರೂಢೋ ಯೋ ನಾಮ್ನಾ ಶತಬಲೋ ವಟಃ ।
ತತ್ಸ್ಕಂಧೇಭ್ಯೋಧೋಮುಖಾಶ್ಚ ನದಾಃ ಕುಮುದಮೂರ್ಧತಃ॥೧೮॥

ಪಯೋ ದಧಿ ಮಧು ಘೃತ ಗುಡಾನ್ನಾದ್ಯಂಬರಾದಿಭಿಃ ।
ಶಯ್ಯಾಸನಾದ್ಯಾಭರಣೈಃ ಸರ್ವೇ ಕಾಮದುಘಾಶ್ಚ ತೇ ॥೧೯॥

ಉತ್ತರೇಣೇಳಾವೃತಂ ತೇ ಪ್ಲಾವಯಂತಿ ಸಮಂತತಃ ।
ಮೀನಾಕ್ಷೀ ತತ್ತಲೇ ದೇವೀ ದೇವಾಸುರನಿಷೇವಿತಾ ॥೨೦॥

ನೀಲಾಂಬರಾ ರೌದ್ರಮುಖೀ ನೀಲಾಲಕಯುತಾ ಚ ಸಾ ।
ನಾಕಿನಾಂ ದೇವಸಂಘಾನಾಂ ಫಲದಾ ವರದಾ ಚ ಸಾ ॥೨೧॥

ಅತಿಮಾನ್ಯಾಽತಿಪೂಜ್ಯಾ ಚ ಮತ್ತಮಾತಂಗಗಾಮಿನೀ ।
ಮದನೋನ್ಮಾದಿನೀ ಮಾನಪ್ರಿಯಾ ಮಾನಪ್ರಿಯಾಂತರಾ ॥೨೨॥

---

ಇದೇ ಪ್ರಕಾರವಾಗಿ ಕುಮುದಪರ್ವತದಲ್ಲಿರುವ ಶತಬಲವೆಂಬ ಹೆಸರುಳ್ಳ ವಟವೃಕ್ಷದ ಶಾಖೆಗಳಿಂದ ಐದು ನದಿಗಳು ಕುಮುದಪರ್ವತದ ಶಿರಸ್ಸಿನಲ್ಲಿ ಕೆಳಮುಖವಾಗಿ ಹರಿದು ಬೀಳುತ್ತವೆ. ||೧೮||

ಹಾಲು, ಮೊಸರು, ಜೇನು, ತುಪ್ಪ, ಬೆಲ್ಲ, ಅನ್ನ, ವಸ್ತ್ರ, ಶಯ್ಯಾ, ಆಸನ ಮೊದಲಾದುವುಗಳಿಂದಲೂ, ಅನೇಕ ಆಭರಣಗಳಿಂದಲೂ, ಪೂಜಿಸಲ್ಪಡುವ, ಸಕಲೇಷ್ಟಾರ್ಥಗಳನ್ನೂ ಕೊಡುವ ಆ ಐದು ನದಿಗಳು, ||೧೯||

ಇಳಾವೃತ್ತದ ಉತ್ತರಭಾಗದಲ್ಲಿ ಸುತ್ತಲೂ ಪ್ರವಹಿಸುತ್ತವೆ. ಆ ನದಿಗಳ ತೀರಪ್ರದೇಶದಲ್ಲಿ ದೇವತೆಗಳಿಂದಲೂ, ಮತ್ತು ರಾಕ್ಷಸರಿಂದಲೂ, ಸೇವಿಸಲ್ಪಟ್ಟ ಮೀನಾಕ್ಷೀ ದೇವಿಯು ನೆಲೆಸಿ ಇದ್ದಾಳೆ. ||೨೦||

ಆ ದೇವಿಯು ಕಪ್ಪಾದ ಬಟ್ಟೆಯನ್ನು ಧರಿಸಿರುವವಳೂ, ಭಯಂಕರವಾದ ಮುಖಉಳ್ಳವಳೂ, ಕಪ್ಪಾದ ಮುಂಗುರುಳುಗಳುಳ್ಳವಳೂ, ಸ್ವರ್ಗಲೋಕದಲ್ಲಿರುವ ದೇವಸಮೂಹಗಳಿಗೂ ಒಳ್ಳೆಯ ಫಲಗಳನ್ನೂ, ಇಷ್ಟಾರ್ಥಗಳನ್ನೂ ಕೊಡುವವಳೂ ಆಗಿರುತ್ತಾಳೆ. ||೨೧||

ಮತ್ತು ಆ ದೇವಿಯು ಹೆಚ್ಚಾಗಿ ಗೌರವಿಸಲ್ಪಡಲು ಅರ್ಹತೆಯುಳ್ಳವಳೂ, ಹೆಚ್ಚಾಗಿ ಪೂಜಿಸಲ್ಪಡುವವಳೂ, ಮದಿಸಿದ ಆನೆಯಂತೆ ನಡೆಯುಳ್ಳವಳೂ,

ಮಾರವೇಗಧರಾ ಮಾರಪೂಜಿತಾ ಮಾರಮಾದಿನೀ ।
ಮಯೂರವರಶೋಭಾಢ್ಯಾ ಶಿಖಿವಾಹನಗರ್ಭಭೂಃ ॥೨೩॥

ಏಭಿರ್ನಾಮಪದೈರ್ವಂದ್ಯಾ ದೇವೀ ಸಾ ವಾಮಲೋಚನಾ ।
ಜಪತಾಂ ಸ್ಮರತಾಂ ಮಾನದಾತ್ರೀ ಚೇಶ್ವರಸಂಗಿನೀ ॥೨೪॥

ತೇಷಾಂ ನದಾನಾಂ ಪಾನೀಯಪಾನಾನುಗತಚೇತಸಾಂ ।
ಪ್ರಜಾನಾಂ ನ ಕದಾಚಿತ್ಸ್ಯಾದ್ವಲೀಪಲಿತಲಕ್ಷಣಂ ॥೨೫॥

ಕ್ಲಮಸ್ವೇದಾದಿ ದೌರ್ಗಂಧ್ಯಂ ಜರಾಮಯಭೃತಿರ್ಭ್ರಮಾಃ ।
ಶೀತೋಷ್ಣವಾತವೈವರ್ಣ್ಯಂ ಮುಖೋಪಪ್ಲವಸಂಚಯಾಃ ॥೨೬॥

---

ಮನ್ಮಥನಂತೆ, ತಾಪವನ್ನುಂಟುಮಾಡುವವಳೂ, ಮನ್ಮಥನೂ ಮೋಹಿತನಾಗುವಷ್ಟು ಸೌಂದರ್ಯವುಳ್ಳವಳೂ, ತುಂಬ ಅಭಿಮಾನವತಿಯೂ, ಆತ್ಮಗೌರವ ಸ್ವಾಭಿಮಾನಗಳಲ್ಲಿ ಆದರವುಳ್ಳವರನ್ನು ಆಶ್ರಯಕೊಟ್ಟು ಕಾಪಾಡುವವಳೂ ಆಗಿರುವಳು. ॥೨೨॥

ಮನ್ಮಥನ ವೇಗವನ್ನು ಎಂದರೆ ಇಚ್ಛಾಶಕ್ತಿಯನ್ನು ಮೇರೆ ಮೀರದಿರುವಂತೆ ಸ್ವಾಧೀನದಲ್ಲಿಟ್ಟುಕೊಂಡಿರುವ, ಮನ್ಮಥನಿಂದಲೂ ಪೂಜಿಸಲ್ಪಡುವ, ಮನ್ಮಥನನ್ನೂ ಹುರಿದುಂಬಿಸಿ ಪ್ರೇರಿಸಬಲ್ಲ, ನವಿಲಿನಂತೆ ವಿಚಿತ್ರವಾದ ಕಾಂತಿಯಿಂದ ತುಂಬಿರುವ, ನವಿಲೇ ವಾಹನವಾಗಿ ಉಳ್ಳ ಷಣ್ಮುಖನಿಗೆ ತಾಯಿಯಾದ, ಸುಂದರವಾದ ಕಣ್ಣುಗಳುಳ್ಳ ಮತ್ತು ತನ್ನ ನಾಮ, ಮಂತ್ರ ವಿಶೇಷಗಳನ್ನು ಜಪಿಸುವ ಮತ್ತು ಸ್ಮರಿಸುವ ಜನಗಳಲ್ಲಿ ಅಭಿಮಾನವನ್ನು ತೋರಿಸುವ, ಈಶ್ವರಾರ್ಧಾಂಗಿಯಾದ ಆ ದೇವಿಯು, ಮಾರವೇಗಧರಾ, ಮುಂತಾದ ನಾಮವಿಶೇಷಗಳನ್ನು ಅರ್ಥಜ್ಞಾನಪೂರ್ವಕವಾಗಿ ಜಪಿಸಿ ಧ್ಯಾನಿಸುವವರಿಂದ ನಮಸ್ಕರಿಸಲ್ಪಡುವವಳೂ ಆಗಿದಾಳೆ. ॥೨೩-೨೪॥

ಪಶ್ಚಿಮ ದಿಕ್ಕಿಗೆ ಹರಿದು ಪಶ್ಚಿಮ ಸಮುದ್ರಕ್ಕೆ ಸೇರುವ ಮಹಾ ನದಿಗಳಿಗೆ ನದ ಎಂದು ಹೆಸರು. ಹಿಂದೆ ಹೇಳಲ್ಪಟ್ಟ ಐದು ನದಿಗಳ ನೀರನ್ನು ಪಾನಮಾಡುವುದರಲ್ಲಿ ಆಸಕ್ತಿಯಿಂದ ಕೂಡಿದ ಜನರಿಗೆ ಯಾವಾಗಲೂ ಸುಕ್ಕು, ನರೆ, ಮೊದಲಾದ ಅವಸ್ಥೆಗಳು ಬರುವುದಿಲ್ಲ. ॥೨೫॥

ಮತ್ತು ಆಯಾಸದಿಂದುಂಟಾದ ಬೆವರು ಮುಂತಾದುವುಗಳಿಂದ ತೋರುವ ದುರ್ಗಂಧವೂ, ಶೀತ, ಉಷ್ಣ, ಗಾಳಿ ಇವುಗಳಿಂದುಂಟಾಗುವ ವರ್ಣವ್ಯತ್ಯಾಸವೂ,

ನಾಪದಶ್ಚೈವ ಜಾಯಂತೇ ಯಾವಜ್ಜೀವಂ ಸುಖಂ ಭವೇತ್ ।
ನೈರಂತರ್ಯೇಣ ತತ್ಸೌಖ್ಯದ್ವೈ ಸುಖಂ ನಿರತಿಶಾಯಕಂ ॥೨೭॥

ತತ ಊರ್ಧ್ವಂ ಪ್ರವಕ್ಷ್ಯಾಮಿ ಸನ್ನಿವೇಶಂ ಚ ತದ್ಗಿರೇಃ ।
ಸುವರ್ಣಮಯನಾಮ್ನೋ ವೈ ಸುಮೇರೋಃ ಪರ್ವತಾಃ ಪೃಥಕ್॥೨೮॥

ಗಿರಯೋ ವಿಂಶತಿಪರಾಃ ಕರ್ಣಿಕಾಯಾ ಇವೇಹ ತೇ ।
ಕೇಸರೀಭೂಯ ಸರ್ವೇಽಪಿ ಮೇರೋರ್ಮೂಲ ವಿಭಾಗಕೇ ॥೨೯॥

ಪರಿತಶ್ಚೋಪಕ್ಲಪ್ತಾಸ್ತೇ ತೇಷಾಂ ನಾಮಾನಿ ಶೃಣ್ವತಃ ।
ಕುರಂಗಃ ಕುರಗಶ್ಚೈವ ಕುಶುಂಭೋಽಥೋ ವಿಕಂಕತಃ ॥೩೦॥

ತ್ರಿಕೂಟಃ ಶಿಶಿರಶ್ಚೈವ ಪತಂಗೋ ರುಚಕಸ್ತಥಾ ।
ನಿಷಧಶ್ಚ ಶಿತೀವಾಸಃ ಕಪಿಲಶ್ಶಂಖ ಏವ ಚ ॥೩೧॥

ವೈಡೂರ್ಯಶ್ಚಾರುಧಿಶ್ಚೈವ ಹಂಸೋ ಋಷಭ ಏವ ಚ ।
ನಾಗಃ ಕಾಲಂಜರಶ್ಚೈವ ನಾರದಶ್ಚೇತಿ ವಿಂಶತಿಃ ॥೩೨॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಅಷ್ಟಮಸ್ಕಂಧೇ
ಷಷ್ಠೋಽಧ್ಯಾಯಃ

---

ಮುಪ್ಪು, ರೋಗ ಮುಂತಾದುವು ಸಂಭವಿಸಿ ಚಿತ್ತವಿಕಾರವೂ, ಮುಖರೋಗ ಮೊದಲಾದ ರೋಗಗಳೂ, ಉಂಟಾಗುವುದಿಲ್ಲ. ॥೨೬॥

ಮತ್ತು ಆ ಜನರಿಗೆ ಅಕಾಲಮರಣ ಮೊದಲಾದ ಆಪತ್ತುಗಳು ಉಂಟಾಗದೆ ಬದುಕಿರುವ ತನಕ ಸುಖವು ಸ್ಥಿರವಾಗಿರುವುದು. ಎಂದರೆ, ಆ ಸುಖವು ಎಲ್ಲೆಯಿಲ್ಲದಿರುವುದಾಗಿ ವಿಚ್ಛೇದವಿಲ್ಲದೇ ಇರುವುದು. ॥೨೭॥

ಇಲ್ಲಿಂದ ಮುಂದಕ್ಕೆ ಆ ಮೇರುಪರ್ವತವು ಇರುವ ಸ್ಥಿತಿಯನ್ನೂ, ಸುವರ್ಣಮಯವೆಂದು ಹೆಸರುಳ್ಳ ಆ ಮೇರುಪರ್ವತದ ಶಾಖೆಗಳನ್ನೂ ಹೇಳುತ್ತೇನೆ. ॥೨೮॥

ಆ ಮೇರುಪರ್ವತದ ಮೂಲದೇಶದಲ್ಲಿ ಕಮಲದ ಕರ್ಣಿಕೆಯಲ್ಲಿರುವ ಕೇಸರದಂತೆ ಶ್ರೇಷ್ಠವಾದ ಇಪ್ಪತ್ತು ಅಲ್ಪಪರಿಮಾಣವುಳ್ಳ ಪರ್ವತಗಳು ಇರುವುವು. ॥೨೯॥

ಆ ಮೇರುಪರ್ವತದ ಸುತ್ತಲೂ ಇರುವ ಪರ್ವತಗಳ ಹೆಸರುಗಳು ಯಾವುವೆಂದರೆ, ಕುರಂಗ, ಕುರಗ, ಕುಶುಂಭ, ವಿಕಂಕತ, ತ್ರಿಕೂಟ, ಶಿಶಿರ, ಪತಂಗ, ರುಚಕ,

ನಿಷಧ, ಶಿತೀವಾಸ, ಕಪಿಲ, ಶಂಖ, ವೈಡೂರ್ಯ, ಆರುಧಿ, ಹಂಸ, ಋಷಭ, ನಾಗ, ಕಾಲಂಜರ, ನಾರದ, ಹೀಗೆ ಇಪ್ಪತ್ತು ಪರ್ವತಗಳು ಇರುವುವು. (ಆದರೆ ಇಲ್ಲಿ ಹತ್ತೊಂಬತ್ತು ಹೆಸರುಗಳು ಮಾತ್ರ ಇವೆ.) ||೨೦-೨೧-೨೨||

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಎಂಟನೆಯ ಸ್ಕಂಧದಲ್ಲಿ

ಆರನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಅಷ್ಟಮಸ್ಕಂಧೇ

### || ಸಪ್ತಮೋಽಧ್ಯಾಯಃ ||

### ಏಳನೆಯ ಅಧ್ಯಾಯವು

|| ಶ್ರೀನಾರಾಯಣ ಉವಾಚ ||

**ಗಿರೀ ಮೇರುಂ ಚ ಪೂರ್ವೇಣ ದ್ವೌ ಚಾಷ್ಟಾದಶಯೋಜನೈಃ ।**
**ಸಹಸ್ರೈರಾಯತಂ ಚೋದಕ್ ದ್ವಿಸಹಸ್ರಂ ಪೃಥೂಚ್ಚಕೌ ||೧||**

**ಜಠರೋ ದೇವಕೂಟಶ್ಚ ತಾವೇತೌ ಗಿರಿವರ್ಯಕೌ ।**
**ಮೇರೋಃ ಪಶ್ಚಿಮತೋಽದ್ರೀ ದ್ವೌ ಪವಮಾನಸ್ತಥಾಪರಃ ||೨||**

**ಪಾರಿಯಾತ್ರಶ್ಚ ತೌ ತಾವದ್ವಿಖ್ಯಾತೌ ತುಂಗವಿಸ್ತರೌ ।**
**ಮೇರೋಃ ದಕ್ಷಿಣತಃ ಖ್ಯಾತೌ ಕೈಲಾಸಕರವೀರಕೌ ||೩||**

---

ಈ ಅಧ್ಯಾಯದಲ್ಲಿ ಮೇರುಪರ್ವತವು ವಿಶೇಷವಾಗಿ ವರ್ಣಿಸಲ್ಪಡುತ್ತದೆ.

ಶ್ರೀಮನ್ನಾರಾಯಣನು ಹೇಳಿದನು—ಮೇರುಪರ್ವತದ ಪೂರ್ವಭಾಗದಲ್ಲಿ ಹದಿನೆಂಟು ಸಾವಿರ ಯೋಜನದವರೆಗೂ ವಿಸ್ತಾರವೂ, ದೈರ್ಘ್ಯವೂ ಉಳ್ಳ ಉತ್ತರ ದಿಕ್ಕಿನಲ್ಲಿ ಎರಡುಸಾವಿರ ಯೋಜನದಷ್ಟು ಗಾತ್ರವಾಗುವಷ್ಟು ಅಗಲವೂ ಎತ್ತರವೂ ಉಳ್ಳ ಎರಡು ಪರ್ವತಗಳು ಇರುವುವು. ||೧||

ಆ ಎರಡು ಶ್ರೇಷ್ಠವಾದ ಪರ್ವತಗಳು ಜಠರ, ಕರವೀರ ಎಂಬ ಹೆಸರಿನಿಂದ ಕರೆಯಲ್ಪಟ್ಟಿವೆ. ಮೇರುಪರ್ವತದ ಪಶ್ಚಿಮಭಾಗದಲ್ಲಿ ಎತ್ತರದಲ್ಲೂ, ವಿಸ್ತಾರದಲ್ಲೂ, ಪ್ರಖ್ಯಾತಗಳಾದ, ಪವಮಾನ, ಪಾರಿಯಾತ್ರಗಳೆಂದು ಹೆಸರುಳ್ಳ ಪರ್ವತಗಳು ಇರುವುವು. ಮತ್ತು ದಕ್ಷಿಣಭಾಗದಲ್ಲಿ ಕೈಲಾಸ, ಕರವೀರಗಳೆಂಬ ಪರ್ವತಗಳು ಪ್ರಸಿದ್ಧವಾಗಿ ಇರುವುವು. ||೨-೩||

ಪ್ರಾಗಾಯತೌ ಪೂರ್ವವೃತ್ತೌ ಮಹಾಪರ್ವತರಾಜಕೌ ।
ಏವಂ ಚೋತ್ತರತೋ ಮೇರೋಸ್ತ್ರಿಶೃಂಗಮಕರೌ ಗಿರೀ ॥೪॥

ಏತೈಶ್ಚಾದ್ರಿವರ್ಯೈರಷ್ಟಸಂಖ್ಯೈಃ ಪರಿವೃತೋ ಗಿರಿಃ ।
ಸುಮೇರುಃ ಕಾಂಚನಗಿರಿಃ ಪರಿಭ್ರಾಜನ್ರವಿರ್ಯಥಾ ॥೫॥

ಮೇರೋರ್ಮೂರ್ಧನಿ ಧಾತುರ್ಹಿ ಪುರೀ ಪಂಕಜಜನ್ಮನಃ ।
ಮಧ್ಯತಶ್ಚೋಪಕ್ಲಪ್ತೇಯಂ ದಶಸಾಹಸ್ರಯೋಜನೈಃ ॥೬॥

ಸಮಾನಚತುರಸ್ರಾಂ ಚ ಶಾತಕೌಂಭಮಯೀಂ ಪುರೀಂ ।
ವರ್ಣಯಂತಿ ಮಹಾತ್ಮನಃ ಪರಾಪರವಿದೋ ಬುಧಾಃ ॥೭॥

ತಾಂ ಪುರೀಮನು ಲೋಕಾನಾಂ ಅಷ್ಟಾನಾಮೀಶಿತಾಂ ಪರಾಃ ।
ಪುರ್ಯಃ ಪ್ರಖ್ಯಾತ ಸೌವರ್ಣರೂಪಾಸ್ತಾಶ್ಚ ಯಥಾದಿಶಂ ॥೮॥

---

ಶ್ರೇಷ್ಠಗಳಾದ ಆ ಎರಡು ಪರ್ವತಗಳೂ ಪೂರ್ವದಿಕ್ಕಿನಲ್ಲಿ ದೀರ್ಘವಾಗಿ ಹಬ್ಬಿವೆ. ಇದೇ ರೀತಿಯಲ್ಲಿ ಮೇರುಪರ್ವತದ ಉತ್ತರ ಭಾಗದಲ್ಲಿ ತ್ರಿಶೃಂಗ, ಮಕರ ಗಳೆಂಬ ಪರ್ವತಗಳು ಇರುತ್ತವೆ. ॥೪॥

ಶ್ರೇಷ್ಠವಾದ ಈ ಎಂಟು ಉಪ ಪರ್ವತಗಳಿಂದ ಸುತ್ತುವರೆಯಲ್ಪಟ್ಟ ಮೇರು ಎಂಬ ಚಿನ್ನದ ಪರ್ವತವು ಸೂರ್ಯನಂತೆ ಪ್ರಕಾಶಿಸುತ್ತಿರುವುದು. ॥೫॥

ಆ ಮೇರುಪರ್ವತದ ಮೇಲುಭಾಗದಲ್ಲಿ ಹತ್ತುಸಾವಿರ ಯೋಜನ ವಿಸ್ತಾರ ವುಳ್ಳ ವಿಷ್ಣುವಿನ ನಾಭೀಕಮಲದಿಂದ ಉದ್ಭವಿಸಿದ ಚತುರ್ಮುಖ ಬ್ರಹ್ಮನ ಪಟ್ಟಣವು ಮಧ್ಯಭಾಗದಲ್ಲಿ ನಿರ್ಮಿತವಾಗಿದೆ. ॥೬॥

ನಾಲ್ಕು ಕಡೆಯಲ್ಲೂ ಚಚ್ಚೌಕವಾಗಿರುವ ಆ ಪಟ್ಟಣವನ್ನು ಶ್ರೇಷ್ಠವಾದ ಪರಬ್ರಹ್ಮಸ್ವರೂಪವನ್ನು ತಿಳಿದಿರುವ ಮಹಾತ್ಮರಾದ ಪಂಡಿತರು ಸುವರ್ಣಮಯವಾದ ದ್ದನ್ನಾಗಿ ವರ್ಣನೆಮಾಡುವರು. ॥೭॥

ಆ ಪಟ್ಟಣಕ್ಕೆ ಎದುರುಭಾಗದಲ್ಲಿ ಸುತ್ತಲೂ ವಿಶೇಷವಾದ ಖ್ಯಾತಿಯುಳ್ಳ, ಸುವರ್ಣಮಯವಾದ, ಅಷ್ಟದಿಕ್ಪಾಲಕರ ಪಟ್ಟಣಗಳು, ಬೇರೆ ಬೇರೆಯಾಗಿ ಪ್ರತಿದಿಕ್ಕು ಗಳಲ್ಲೂ ಇರುವುವು. ॥೮॥

**ಯಥಾರೂಪಂ ಸಾರ್ಧನೇತ್ರಸಹಸ್ರಪ್ರಮಿತಾಃ ಕೃತಾಃ ।**
**ಮೇರೌ ನವ ಪುರಾಣಿ ಸ್ಯುಃ ಮನೋವತ್ಯಮರಾವತೀ ॥೯॥**

**ತೇಜೋವತೀ ಸಂಯಮನೀ ತಥಾ ಕೃಷ್ಣಾಂಗನಾ ಪರಾ ।**
**ಶ್ರದ್ಧಾವತೀ ಗಂಧವತೀ ತಥಾ ಚಾನ್ಯಾ ಮಹೋದಯಾ ॥೧೦॥**

**ಯಶೋವತೀ ಚ ಬ್ರಹ್ಮೇಂದ್ರವಹ್ನ್ಯಾದೀನಾಂ ಯಥಾಕ್ರಮಂ ।**
**ತತ್ರೈವ ಯಜ್ಞಲಿಂಗಸ್ಯ ವಿಷ್ಣೋರ್ಭಗವತೋ ವಿಭೋಃ ॥೧೧॥**

**ವಾಮಪಾದಾಂಗುಷ್ಠನಖನಿರ್ಭಿನ್ನಸ್ಯ ಚ ನಾರದ ।**
**ಅಂಡೋರ್ಧ್ವಭಾಗರಂಧ್ರಸ್ಯ ಮಧ್ಯಾತ್ಸಂವಿಶತೀ ದಿವಃ ॥೧೨॥**

**ಮೂರ್ಧನ್ಯವತತಾರೇಯಂ ಗಂಗಾ ಸಂವಿಶತೀ ವಿಭೋಃ ।**
**ಲೋಕಾನಾಮಖಿಲಾನಾಂ ಚ ಪಾಪಹಾರಿ ಜಲಾಕುಲಾ ॥೧೩॥**

---

ಮೇರುಪರ್ವತದ ಮೇಲ್ಭಾಗದಲ್ಲಿರುವ ಈ ಒಂಬತ್ತು ಪಟ್ಟಣಗಳೂ ಆಯಾ ದಿಕ್ಪಾಲಕರ ಶರೀರ ಬಣ್ಣದಂತೆ ಬಣ್ಣವುಳ್ಳವುಗಳಾಗಿಯೂ, ಪ್ರತಿ ಪಟ್ಟಣವೂ ಎರಡೂವರೆಸಾವಿರ ಯೋಜನಪರಿಮಾಣದ ವಿಸ್ತಾರ ಉಳ್ಳವುಗಳಾಗಿಯೂ ಇವೆ. ಇವುಗಳ ಹೆಸರುಗಳು, ಮನೋವತೀ, ಅಮರಾವತೀ, ॥೯॥

ತೇಜೋವತೀ, ಸಂಯಮನೀ, ಕೃಷ್ಣಾಂಗನಾ, ಶ್ರದ್ಧಾವತೀ, ಗಂಧವತೀ ಮಹೋದಯಾ, ॥೧೦॥

ಯಶೋವತೀ, ಈ ರೀತಿಯಾಗಿ ಬ್ರಹ್ಮ, ಇಂದ್ರ, ಅಗ್ನಿ, ಮೊದಲಾದ ದಿಕ್ಪಾಲಕರ ಪಟ್ಟಣಗಳು ಇರುತ್ತವೆ. ಆ ಮೇರುಪರ್ವತದ ಶಿರೋಭಾಗದಲ್ಲೇ ಬಲಿಚಕ್ರವರ್ತಿಯ ಯಜ್ಞಪುರುಷನಾಗಿ ತ್ರಿವಿಕ್ರಮಾವತಾರಮಾಡಿದ, ಷಡ್ಗುಣೈಶ್ವರ್ಯ ಸಂಪನ್ನನಾದ, ॥೧೧॥

ಎಲೈ ನಾರದನೇ, ಮಹಾವಿಷ್ಣುವಿನ ಕಾಲಿನ ಉಗುರಿನಿಂದ ಭೇದಿಸಲ್ಪಟ್ಟ ಅಂಡಕಟಾಹದ ಮೆಲುಭಾಗದಲ್ಲಿ ರಂಧ್ರದ ಅವಕಾಶದ ಮಧ್ಯದಿಂದ ॥೧೨॥

ಪ್ರಪಂಚದ ಎಲ್ಲ ಜನರ ಪಾಪಗಳನ್ನೂ ಪರಿಹರಿಸುವ ಜಲಸಮೂಹದಿಂದ ವ್ಯಾಪ್ತವಾದ ಈ ಗಂಗೆಎಂಬ ಪವಿತ್ರವಾದ ನದಿಯು ಸ್ವರ್ಗದ ಶಿರಸ್ಸಿನಲ್ಲಿ, ಅವತರಿಸಿದಳು. ॥೧೩॥

ಇಯಂ ಚ ಸಾಕ್ಷಾದ್ಭಗವತ್ಪದೀ ಲೋಕೇಷು ವಿಶ್ರುತಾ ।
ಕಾಲೇನ ಮಹತಾ ಸಾ ತು ಯುಗಸಾಹಸ್ರಕೇನ ತು ॥೧೪॥

ದಿವೋ ಮೂರ್ಧಾನಮಾಗತ್ಯ ದೇವೀ ದೇವನದೀಶ್ವರೀ ।
ಯತ್ತದ್ವಿಷ್ಣುಪದಂ ನಾಮ ಸ್ಥಾನಂ ತ್ರೈಲೋಕ್ಯವಿಶ್ರುತಂ ॥೧೫॥

ಔತ್ತಾನಪಾದಿರ್ಯತ್ರಾಸ್ತೇ ಧ್ರುವಃ ಪರಮಪಾವನಃ ।
ಭಗವತ್ಪಾದಯುಗಲಂ ಪದ್ಮಕೋಶರಜೋ ದಧತ್ ॥೧೬॥

ಅದ್ಯಾಪ್ಯಾಸ್ತೇ ಸ ರಾಜರ್ಷಿಃ ಪದವೀಮಚಲಾಂ ಶ್ರಿತಃ ।
ತತ್ರ ಸಪ್ತರ್ಷಯಸ್ತಸ್ಯ ಪ್ರಭಾವಜ್ಞಾ ಮಹಾಶಯಾಃ ॥೧೭॥

ಪ್ರದಕ್ಷಿಣಂ ಪ್ರಕ್ರಮಂತಿ ಸರ್ವಲೋಕಹಿತೇಪ್ಸವಃ ।
ಆತ್ಯಂತಿಕೀ ಸಿದ್ಧಿರಿಯಂ ತಪತಾಂ ಸಿದ್ಧಿದಾಯಿನೀ ॥೧೮॥

---

ಈ ಗಂಗಾದೇವಿಯು ಲೋಕದಲ್ಲಿ ಭಗವಂತನ ಸಾನ್ನಿಧ್ಯ, ಸಾಕ್ಷಾತ್ಕಾರಗಳಿಗೆ ಮುಖ್ಯಸ್ಥಾನವೆಂಬುದಾಗಿ ಪ್ರಸಿದ್ಧಳಾಗಿರುವಳು. ಮತ್ತು ಒಂದು ಸಾವಿರ ಯುಗಗಳಷ್ಟು ಹೆಚ್ಚಾದ ಕಾಲದವರೆಗೂ, ॥೧೪॥

ಎಲ್ಲ ದೇವನದಿಗಳಲ್ಲೂ ಶ್ರೇಷ್ಠಳಾದ ಈ ಗಂಗಾದೇವಿಯು ಮೂರು ಲೋಕದಲ್ಲೂ ಪ್ರಸಿದ್ಧವಾದ, ಆಕಾಶಕ್ಕೆ ಶಿರಸ್ಥಾನವಾದ, ವಿಷ್ಣುಪದವೆಂಬ ಸ್ಥಾನವನ್ನು ಆಶ್ರಯಿಸಿದ್ದಳು. ॥೧೫॥

ಅಲ್ಲಿ ಭಗವಂತನ ಎರಡು ಪಾದಕಮಲದ ರಜಸ್ಸನ್ನು ಭಕ್ತಿಯಿಂದ ಧರಿಸಿರುವ ಅತಿ ಪವಿತ್ರನಾದ ಉತ್ತಾನಪಾದನ ಮಗನಾದ ಧ್ರುವನು ಇರುವನು. ॥೧೬॥

ರಾಜರ್ಷಿಯಾದ ಆ ಧ್ರುವನು ಶಾಶ್ವತವಾದ ಆ ಸ್ಥಾನವನ್ನು ಹೊಂದಿದವನಾಗಿ ಇವತ್ತಿಗೂ ಇರುವನು. ಅಲ್ಲಿ ಆ ಧ್ರುವನ ಮಹಿಮೆಯನ್ನು ತಿಳಿದ ಮಹಾತ್ಮರಾದ ಸಪ್ತರ್ಷಿಗಳು, ॥೧೭॥

ಸಮಸ್ತ ಲೋಕಕ್ಕೂ ಒಳ್ಳೆಯದನ್ನು ಕೋರುವವರಾಗಿ ಆ ಮಹಾಪುರುಷನನ್ನು ಪ್ರದಕ್ಷಿಣಾಕಾರವಾಗಿ ಸುತ್ತುತ್ತಿರುವರು. ಆ ಸಪ್ತರ್ಷಿಗಳು ಗಂಗೆಯನ್ನು ತಪಸ್ವಿಗಳಿಗೆ ಕಡೆಯ ಸಿದ್ಧಿಯನ್ನು ಎಂದರೆ ಶ್ರೇಷ್ಠವಾದ ಮೋಕ್ಷಮಾರ್ಗವನ್ನೂ ಕೊಡುವವಳನ್ನಾಗಿ ತಿಳಿದು, ॥೧೮॥

ಆದ್ರಿಯಂತೇ ಚ ಶಿರಸಾ ಜಟಾಜೂಟೋಷಿತೇನ ಚ ।
ತತೋ ವಿಷ್ಣುಪದಾದ್ದೇವೀ ನೈಕಸಾಹಸ್ರಕೋಟಿಭಿಃ ॥೧೯॥

ವಿಮಾನೈರಾಕುಲೇ ದೇವಯಾನೇಽವತರತೀ ಚ ಸಾ ।
ಚಂದ್ರಮಂಡಲಮಾಪ್ಲಾವ್ಯ ಪತಂತೀ ಬ್ರಹ್ಮಸದ್ಮನಿ ॥೨೦॥

ಚತುರ್ಧಾ ಭಿದ್ಯಮಾನಾ ಸಾ ಬ್ರಹ್ಮಲೋಕೇ ಚ ನಾರದ ।
ಚತುರ್ಭಿರ್ನಾಮಭಿರ್ದೇವೀ ಚತುರ್ದಿಶಮಭಿಸೃತಾ ॥೨೧॥

ಸರಿತಾಂ ಚ ನದೀನಾಂ ಚ ಪತಿಮೇವಾಽನ್ವಪದ್ಯತ ।
ಸೀತಾ ಚಾಲಕನಂದಾ ಚ ಚಕ್ಷುರ್ಭದ್ರೇತಿ ನಾಮಭಿಃ ॥೨೨॥

ಸೀತಾ ಚ ಬ್ರಹ್ಮಸದನಾಚ್ಛಿಖರೇಭ್ಯಃ ಕ್ಷಮಾಭೃತಾಂ ।
ಕೇಸರಾಭಿಧನಾಮ್ನಾ ಚ ಪ್ರಸ್ರವಂತೀ ಚ ಸ್ವರ್ಣದೀ ॥೨೩॥

---

ಜಡೆಗಳಾಗಿರುವ ತಲೆ ಕೂದಲುಗಳುಳ್ಳ ಶಿರಸ್ಸಿನಿಂದ ಕೂಡಿರುವ ಅವರು ಆ ಗಂಗೆಯಲ್ಲಿ ನಿತ್ಯವೂ ಆದರದಿಂದ ಸ್ನಾನ ಆಚಮನಾದಿ ಕರ್ಮಗಳನ್ನು ಮಾಡುತ್ತಿದ್ದರು. ಅನಂತರದಲ್ಲಿ ಆ ಗಂಗೆಯು ವಿಷ್ಣುಪದಸ್ಥಾನದ ಮಾರ್ಗದಿಂದ ಹೊರಟು ಅನೇಕ ಸಾವಿರಕೋಟಿ ಪ್ರಮಾಣಗಳಾದ, ॥೧೯॥

ವಿಮಾನಗಳಿಂದ ವ್ಯಾಪ್ತವಾದ ದೇವಮಾರ್ಗದಲ್ಲಿ ಹರಿದು ಬರುತ್ತಿರುವಳಾಗಿ, ಚಂದ್ರಮಂಡಲವನ್ನೂ ಬಳಸಿ ನೆನೆಯಿಸಿ ಬ್ರಹ್ಮಲೋಕದಲ್ಲಿ ಬೀಳುವವಳಾಗಿ, ॥೨೦॥

ನಾಲ್ಕು ಭಾಗಗಳಾಗಿ ಒಡೆದು ಆ ಗಂಗೆಯು ನಾಲ್ಕು ಹೆಸರುಗಳಿಂದ ನಾಲ್ಕು ದಿಕ್ಕುಗಳಲ್ಲೂ ಹೊರಗೆ ಹರಿದು ಬಂದಳು. ॥೨೧॥

ಸೀತಾ, ಅಲಕನಂದಾ, ಚಕ್ಷುಃ, ಭದ್ರಾ, ಎಂಬ ಈ ನಾಲ್ಕು ಪ್ರವಾಹಗಳೂ ಕಡೆಗೆ ಸರಿತ್ಪತಿಯಾದ ಸಮುದ್ರವನ್ನು ಹೊಂದಿದುವು. ॥೨೨॥

ಸೀತಾ ಎಂಬ ಹೆಸರುಳ್ಳ, ಸ್ವರ್ಗಗಂಗಾನದಿಯ ಪ್ರವಾಹವು ಬ್ರಹ್ಮಲೋಕದಿಂದ ಮುಂದಕ್ಕೆ ಹೊರಟು ಕೇಸರವೆಂಬ ಪರ್ವತಗಳ ಶಿಖರಗಳಿಂದ ಹರಿಯುತ್ತ, ॥೨೩॥

ಗಂಧಮಾದನಮೂರ್ಧ್ನೀಹ ಪತಿತಾ ಪಾಪಹಾರಿಣೀ ।
ಅಂತರೇಣ ತು ಭದ್ರಾಶ್ವವರ್ಷಂ ಪ್ರಾಚ್ಯಾಂ ಸಮಾಗತಾ ॥೨೪॥

ಕ್ಷಾರೋದಧಿಂ ಗತಾ ಸಾ ತು ದ್ಯುನದೀ ದೇವಪೂಜಿತಾ ।
ತತೋ ಮಾಲ್ಯವತಃ ಶೃಂಗಾತ್ ದ್ವಿತೀಯಾ ಪರಿನಿರ್ಗತಾ ॥೨೫॥

ತತೋ ವೇಗವತೀ ಭೂತ್ವಾ ಕೇತುಮಾಲಂ ಸಮಾಗತಾ ।
ಚಕ್ಷುರ್ನಾಮ್ನೀ ದೇವನದೀ ಪ್ರತೀಚ್ಯಾಂ ದಿಕ್ಪ್ರಪಾಗತಾ ॥೨೬॥

ಸರಿತಾಂ ಪತಿಮಾವಿಷ್ಟಾ ಸಾ ಗಂಗಾ ದೇವವಂದಿತಾ ।
ತತಸ್ತೃತೀಯಾ ಧಾರಾ ತು ನಾಮ್ನಾ ಖ್ಯಾತಾ ಚ ನಾರದ ॥೨೭॥

ಪುಣ್ಯಾ ಚಾಲಕನಂದಾ ವೈ ದಕ್ಷಿಣೇನಾಬ್ಜಭೂಪದಾತ್ ।
ವನಾನಿ ಗಿರಿಕೂಟಾನಿ ಸಮುತಿಕ್ರಮ್ಯ ಚಾಗತಾ ॥೨೮॥

---

ಭದ್ರಾಶ್ವವರ್ಷದ ಮಧ್ಯದಲ್ಲಿ ಪೂರ್ವದಿಕ್ಕಿನಲ್ಲಿ ತನ್ನ ದಿವ್ಯಜಲದಲ್ಲಿ ಸ್ನಾನ ಮಾಡುವ ಜನರ ಪಾಪಗಳನ್ನು ನೀಗಿಸುವಳಾಗಿ ಆ ದೇವನದಿಯು ಗಂಧಮಾದನ ಪರ್ವತದ ಶಿರಸ್ಸಿನಲ್ಲಿ ಹರಿಯಿತು. ॥೨೪॥

ಅನಂತರದಲ್ಲಿ ದೇವತೆಗಳಿಂದ ಪೂಜಿಸಲ್ಪಟ್ಟಆ ದೇವನದಿಯು ಕಡೆಗೆ ಲವಣ ಸಮುದ್ರವನ್ನು ಸೇರಿತು. ಎರಡನೆಯ ಗಂಗಾ ಪ್ರವಾಹವು ಮಾಲ್ಯವಾನ್ ಎಂಬ ಪರ್ವತದ ಶಿಖರದಿಂದ ಹೊರಟು, ॥೨೫॥

· ಆಮೇಲೆ ಬಹಳ ವೇಗವನ್ನು ಹೊಂದಿ ಕೇತುಮಾಲ ಪರ್ವತಕ್ಕೆ ಹರಿದು ಬಂದು ಚಕ್ಷುಃ ಎಂಬ ಹೆಸರುಳ್ಳದ್ದಾಗಿ ಆ ದೇವನದಿಯು ಪಶ್ಚಿಮ ದಿಕ್ಕಿನಲ್ಲಿ ಹರಿಯುತ್ತಾ, ॥೨೬॥

ದೇವತೆಗಳಿಂದಲೂ, ಪೂಜಿಸಲ್ಪಟ್ಟವಳಾಗಿ ಕಡೆಗೆ ಸಮುದ್ರವನ್ನು ಸೇರಿತು. ಎಲೈ ನಾರದನೇ, ಅನಂತರದಲ್ಲಿ ಮೂರನೆಯ ಗಂಗಾ ಪ್ರವಾಹವು, ॥೨೭॥

ಪವಿತ್ರವಾದ ಅಲಕನಂದಾ ಎಂಬ ಹೆಸರಿನಿಂದ ಪ್ರಸಿದ್ಧಿಯನ್ನು ಪಡೆದು ಬ್ರಹ್ಮಲೋಕದಿಂದ ದಕ್ಷಿಣಕ್ಕೆ ಹೊರಟು ಅರಣ್ಯಗಳಲ್ಲೂ, ಪರ್ವತ ಸಮೂಹಗಳಲ್ಲೂ ಪ್ರವಹಿಸುತ್ತಾ, ॥೨೮॥

ಹೇಮಕೂಟಂ ಗಿರಿವರಂ ಪ್ರಾಪ್ಯಾತೋಪೀಹ ನಿರ್ಗತಾ ।
ಅತಿವೇಗವತೀ ಭೂತ್ವಾ ಭಾರತಂ ಚಾಗತಾ ಪರಾ ॥೨೯॥

ದಕ್ಷಿಣಂ ಜಲಧಿಂ ಪ್ರಾಪ್ತಾ ತೃತೀಯಾ ಸಾ ಸರಿದ್ವರಾ ।
ಯಸ್ಯಾಃ ಸ್ನಾನಾಯ ಸರತಾಂ ಮನುಜಾನಾಂ ಪದೇ ಪದೇ ॥೩೦॥

ರಾಜಸೂಯಾಶ್ವಮೇಧಾದಿ ಫಲಂ ತು ನಹಿ ದುರ್ಲಭಂ ।
ತತಶ್ಚತುರ್ಥೀ ಧಾರಾ ತು ಶೃಂಗವತ್ಪರ್ವತಾತ್ಪುನಃ ॥೩೧॥

ಭದ್ರಾಭಿಧಾ ಸಂಸ್ರವಂತೀ ಕುರೂನ್ ಸಂತರ್ಪ್ಯ ಚೋತ್ತರಾನ್ ।
ಸಮುದ್ರಂ ಸಮನುಪ್ರಾಪ್ತಾ ಗಂಗಾ ತ್ರೈಲೋಕ್ಯಪಾವನೀ ॥೩೨॥

ಅನ್ಯೇ ನದಾಶ್ಚ ನದ್ಯಶ್ಚ ವರ್ಷೇ ವರ್ಷೇಽಪಿ ಸಂತಿ ಹಿ ।
ಬಹುಶೋ ಮೇರುಮಂದಾರಪ್ರಸೂತಾಶ್ಚೈವ ನಾರದ ॥೩೩॥

---

ಹೇಮಕೂಟವೆಂಬ ಶ್ರೇಷ್ಠವಾದ ಪರ್ವತಕ್ಕೆ ಹರಿದುಬಂದು ಅಲ್ಲಿಂದ ಹೊರಟು ಬಹಳವಾದ ರಭಸದೊಡನೆ ಆ ಪವಿತ್ರವಾದ ಗಂಗಾ ಪ್ರವಾಹವು ಭಾರತಕ್ಕೆ ಬಂದು, ॥೨೯॥

ಕಡೆಗೆ ದಕ್ಷಿಣ ಸಮುದ್ರಕ್ಕೆ ಸೇರಿತು. ಆ ಮೂರನೆಯದಾದ ಗಂಗಾ ಪ್ರವಾಹದಲ್ಲಿ ಸ್ನಾನಮಾಡುವುದಕ್ಕಾಗಿ ಹೋಗುವ ಮನುಷ್ಯರಿಗೆ ಪ್ರತಿಹೆಜ್ಜೆಯಲ್ಲೂ, ॥೩೦॥

ರಾಜಸೂಯ, ಅಶ್ವಮೇಧ, ಮೊದಲಾದ ಯಜ್ಞಗಳನ್ನು ಮಾಡಿದಷ್ಟು ಫಲವು ಸುಲಭವಾಗಿ ಸಿಕ್ಕುವುದು. ಅನಂತರದಲ್ಲಿ ನಾಲ್ಕನೆಯ ಗಂಗಾಪ್ರವಾಹವು ಶೃಂಗವೆಂಬ ಪರ್ವತದಿಂದ ಹೊರಟು, ॥೩೧॥

ಭದ್ರಾ ಎಂಬ ಹೆಸರಿನಿಂದ ಪ್ರಸಿದ್ಧಿಯನ್ನು ಪಡೆದು ಹರಿಯುತ್ತಾ ಉತ್ತರದಲ್ಲಿರುವ ಕುರುದೇಶಗಳನ್ನು ದಾಟಿ, ಮೂರುಲೋಕದ ಜನರನ್ನೂ ಶುದ್ಧಿಗೊಳಿಸುವ ಆ ಗಂಗೆಯೂ ಕಡೆಗೆ ಸಮುದ್ರವನ್ನು ಸೇರಿದಳು. ॥೩೨॥

ಎಲೈ ನಾರದನೇ, ಪ್ರತಿವರ್ಷದಲ್ಲೂ ಇರುವ ಇನ್ನೂ ಅನೇಕ ನದನದಿಗಳು ಪ್ರಾಯಿಕವಾಗಿ ಮೇರು, ಮಂದಾರ, ಈ ಪರ್ವತಗಳಿಂದಲೇ ಹುಟ್ಟಿಬಂದವುಗಳಾಗಿವೆ. ॥೩೩॥

ತತ್ರಾಪಿ ಭಾರತಂ ವರ್ಷಂ ಕರ್ಮಕ್ಷೇತ್ರಮುಶಂತಿ ಹಿ ।
ಅನ್ಯಾನಿ ಚಾಽಷ್ಟವರ್ಷಾಣಿ ಭೌಮ ಸ್ವರ್ಗಪ್ರದಾನಿ ಚ ॥೩೪॥

ಸ್ವರ್ಗಿಣಾಂ ಪುಣ್ಯಶೇಷಸ್ಯ ಭೋಗಸ್ಥಾನಾನಿ ನಾರದ ।
ಪುರುಷಾಣಾಂ ಚಾಯುತಾಯುಃ ವಜ್ರಾಂಗಾ ದೇವಸನ್ನಿಭಾಃ ॥೩೫॥

ಪುರುಷಾ ನಾಗಸಾಹಸ್ರೈಃ ದಶಭಿಃ ಪರಿಕಲ್ಪಿತಾಃ ।
ಮಹಾಸೌರತಸಂತುಷ್ಟಾಃ ಕಲತ್ರಾಢ್ಯಾಃ ಸುಖಾನ್ವಿತಾಃ ॥೩೬॥

ಏಕವರ್ಷೋಽನಕೇ ಚಾಯುಷ್ಯಾಪ್ತಗರ್ಭಾಃ ಸ್ತ್ರೀಯೋಽಪಿ ಹಿ ।
ತ್ರೇತಾಯುಗಸಮಃ ಕಾಲೋ ವರ್ತತೇ ಸರ್ವದೈವ ಹಿ ॥೩೭॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಅಷ್ಟಮಸ್ಕಂಧೇ
ಸಪ್ತಮೋಽಧ್ಯಾಯಃ

---

ಅವುಗಳು ಕರ್ಮಾಚರಣೆಗೆ ಯೋಗ್ಯವಾದ ಈ ಭಾರತವರ್ಷವನ್ನು ಹೊಂದಿ ಅಲ್ಲಿ ಪ್ರವಹಿಸುತ್ತವೆ. ಮಿಕ್ಕ ಎಂಟು ವರ್ಷಗಳೂ ಭೂಲೋಕದ ಮತ್ತು ಸ್ವರ್ಗ ಲೋಕದ ಸೌಖ್ಯವನ್ನು ಕೊಡತಕ್ಕವುಗಳಾಗಿವೆ. ॥೩೪॥

ಎಲೈ ನಾರದನೇ, ಸ್ವರ್ಗಲೋಕವನ್ನು ಹೊಂದಿದ ಜನರಿಗೆ ಅವರವರ ಪುಣ್ಯ ಶೇಷಗಳ ಫಲಗಳನ್ನು ಅನುಭವಿಸುವುದಕ್ಕೆ ಈ ವರ್ಷಗಳು ಭೋಗಸ್ಥಾನಗಳಾಗಿವೆ. ಅಲ್ಲಿರತಕ್ಕ ಜನರು ದೃಢವಾದ ಶರೀರಉಳ್ಳವರಾಗಿಯೂ, ದೇವತೆಗಳಿಗೆ ಸಮಾನ ರಾಗಿಯೂ, ಅಯುತ ಎಂದರೆ ಹತ್ತುಸಾವಿರ ವರ್ಷಗಳ ಪ್ರಮಾಣದ ಆಯು ಸ್ಸುಳ್ಳವರಾಗಿಯೂ ಇರುವರು. ॥೩೫॥

ಮತ್ತು ಅವರು ಹತ್ತುಸಾವಿರ ನಾಗಬಲವುಳ್ಳವರಾಗಿ, ವಿಶೇಷ ಸೌಖ್ಯಾನು ಭವದಿಂದ ಸಂತೋಷಯುಕ್ತರಾಗಿ, ತಮಗೆ ಅನುರೂಪರಾದ ಸ್ತ್ರೀಯರಿಂದ ಕೂಡಿ ಸುಖದಿಂದಿರುವರು. ॥೩೬॥

ಆ ಸ್ತ್ರೀಯರು ತಮ್ಮ ಆಯುಸ್ಸಿನಲ್ಲಿ ಒಂದು ವರ್ಷವು ಮಿಕ್ಕಿರುವಾಗ ಗರ್ಭ ವತಿಯರಾಗುವರು. ಎಂದರೆ ಅದುವರೆಗೂ ವಿಶೇಷವಾದ ಯೌವನದಿಂದಲೇ ಕೂಡಿ ಸುಖಿಸುತ್ತಿರುವರು. ಮತ್ತು ಆ ವರ್ಷಗಳಲ್ಲಿ ಯಾವಾಗಲೂ ತ್ರೇತಾಯುಗದ ಧರ್ಮವೇ ನಡೆಯುತ್ತಾ ಜನರು ಕೇವಲ ಪುಣ್ಯಶಾಲಿಗಳಾಗಿರುವರು. ॥೩೭॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಎಂಟನೆಯ ಸ್ಕಂಧದಲ್ಲಿ
ಏಳನೆಯ ಅಧ್ಯಾಯವು ಮುಗಿದುದು.

॥ ಶ್ರೀ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಅಷ್ಟಮಸ್ಕಂಧೇ

### ॥ ಅಷ್ಟಮೋಽಧ್ಯಾಯಃ ॥

### ಎಂಟನೆಯ ಅಧ್ಯಾಯವು

॥ ನಾರಾಯಣ ಉವಾಚ ॥

**ತೇಷು ವರ್ಷೇಷು ದೇವೇಶಾಃ ಪೂರ್ವೋಕ್ತೈಃ ಸ್ತವನೈಃ ಸದಾ ।**
**ಪೂಜಯಂತಿ ಮಹಾದೇವೀಂ ಜಪಧ್ಯಾನಸಮಾಧಿಭಿಃ ॥೧॥**

**ಸರ್ವರ್ತುಕುಸುಮಶ್ರೇಣೀ ಶೋಭಿತಾ ವನರಾಜಯಃ ।**
**ಫಲಾನಾಂ ಪಲ್ಲವಾನಾಂ ಚ ಯತ್ರ ಶೋಭಾ ನಿರಂತರಂ ॥೨॥**

**ತೇಷು ಕಾನನ ವರ್ಷೇಷು ವರ್ಷಪರ್ವತಸಾನುಷು ।**
**ಗಿರಿದ್ರೋಣೀಷು ಸರ್ವಾಸು ನಿರ್ಮಲೋದಕರಾಶಿಷು ॥೩॥**

---

ನಾರಾಯಣಮುನಿಯು ಹೇಳಿದನು—ಹಿಂದೆ ಹೇಳಿದ ಆಯಾ ವರ್ಷಗಳಲ್ಲಿ ಆಯಾ ದ್ವೀಪಗಳಲ್ಲಿರುವ ವಿಷ್ಣುರುದ್ರಸಂಕರ್ಷಣ ಅಗ್ನಿ ಮುಂತಾದ ದೇವತೆಗಳ ನಾಯಕರು ಹಿಂದೆ ಹೇಳಿದ ಅರುಣಾ, ಜಂಬ್ವಾದಿನೀ, ಧಾರೇಶ್ವರೀ, ಮಾನಾಕ್ಷೀ ದೇವಿಯರ ಸ್ತೋತ್ರಗಳಿಂದಲೂ ಜಪ, ಧ್ಯಾನ, ಸಮಾಧಿ ಇವುಗಳಿಂದಲೂ, ಆ ಭಗವತೀ ಭುವನೇಶ್ವರೀದೇವಿಯನ್ನು ಉಪಾಸನೆಮಾಡುತ್ತಿರುವರು. ॥೧॥

ಹಿಂದೆ ಹೇಳಿದ ವರ್ಷಗಳಲ್ಲಿರುವ ತೋಟಗಳಲ್ಲಿ ಎಲ್ಲ ಋತುಗಳಲ್ಲಿರುವ ಹೂ, ಚಿಗುರು, ಹಣ್ಣುಗಳು ಎಲ್ಲವೂ ಒಟ್ಟಿಗೆ ತುಂಬಿ ಯಾವಾಗಲೂ ಶೋಭಿಸುತ್ತಿರುವುವು! ಆ ವರ್ಷಗಳಲ್ಲಿರುವ ಪರ್ವತಗಳ ತಪ್ಪಲುಗಳಲ್ಲಿಯೂ ಕಾಡುಗಳಲ್ಲಿಯೂ ಗಿರಿನದಿಗಳೂ ಸರೋವರಗಳೂ ಪರಿಶುದ್ಧವಾದ ನೀರಿನಿಂದ ತುಂಬಿ ಅರಳಿದ ಕಮಲಗಳಿಂದಲೂ, ಸಾರಸ ಹಂಸವೇ ಮೊದಲಾದ ಹಕ್ಕಿಗಳಿಂದಲೂ ಕೂಡಿ ಪಕ್ಷಿಗಳ ಮನೋ

ವಿಕಚೋತ್ಪಲ ಮಾಲಾಸು ಹಂಸಸಾರಸಸಂಚಯೈಃ ।
ವಿಮಿಶ್ರಿತೇಷು ತೇಷ್ವೇವ ಪಕ್ಷಿಭಿಃ ಕೂಜಿತೇಷು ಚ ॥೪॥

ಜಲಕ್ರೀಡಾದಿಭಿಶ್ಚಿತ್ರ ವಿನೋದೈಃ ಕ್ರೀಡಯಂತಿ ಚ ।
ಸುಂದರೀ ಲಲಿತಭ್ರೂಣಾಂ ವಿಲಾಸಾಯತನೇಷುಚ ॥೫॥

ತತ್ರತ್ಯಾ ವಿಹರಂತ್ಯತ್ರ ಸ್ವೈರಂ ಯುವತಿಭಿಃ ಸಹ ।
ನವಸ್ವಪಿ ಚ ವರ್ಷೇಷು ಭಗವಾನಾದಿಪೂರುಷಃ ॥೬॥

ನಾರಾಯಣಾಖ್ಯೋ ಲೋಕಾನಾಮನುಗ್ರಹರತ್ಯೈಕದೃಕ್ ।
ದೇವೀಮಾರಾಧಯನ್ನಾಸ್ತೇ ಸ ಚ ಸರ್ವೈಶ್ಚ ಪೂಜ್ಯತೇ।
ಆತ್ಮವ್ಯೂಹೇನೇಜ್ಯಯಾಽಸೌ ಸನ್ನಿಧತ್ತೇ ಸಮಾಹಿತಃ ॥೭॥

ಇಲಾವೃತೇ ತು ಭಗವಾನ್ ಪದ್ಮಜಾಕ್ಷಿ ಸಮುದ್ಭವಃ ।
ಏಕ ಏವ ಭವೋ ದೇವೋ ನಿತ್ಯಂ ವಸತಿ ಸಾಂಗನಃ ॥೮॥

---

ಹರವಾದ ಧ್ವನಿಯಿಂದ ಶೋಭಿಸುತ್ತಿರುವುವು. ಆ ಸರೋವರಗಳಲ್ಲಿ ಅಲ್ಲಿನ ಜನರು ಮನೋಹರವಾದ ಸೌಂದರ್ಯವುಳ್ಳ ಯೌವನವತಿಯರಿಂದ ಕೂಡಿ ವಿಚಿತ್ರವಾದ ಜಲಕ್ರೀಡೆಯೇ ಮೊದಲಾದುವುಗಳಿಂದ ವಿನೋದಪಡುತ್ತಿರುವರು. ಆ ಪ್ರದೇಶವು ಹೀಗೆ ಆ ಸುಂದರಿಯರ ವಿಲಾಸಕ್ಕೆ ಆಶ್ರಯಸ್ಥಾನವಾಗಿರುವುದು. ॥೨-೩-೪-೫॥

ಆ ಒಂಬತ್ತು ವರ್ಷಗಳಲ್ಲಿಯೂ ಮಹಾಮಹಿಮನೂ ಆದಿಪುರುಷನೂ ಆದ ನಾರಾಯಣನು ಲೋಕದ ಜನರಿಗೆ ಅನುಗ್ರಹವನ್ನು ಮಾಡುವುದೇ ಮುಖ್ಯವಾದ ಲೀಲಾರೂಪವಾದ ಉದ್ದೇಶವುಳ್ಳವನಾಗಿ ದೇವಿಯನ್ನು ಪೂಜಿಸುತ್ತಿರುವನು. ಆ ನಾರಾಯಣನನ್ನು ಸರ್ವರೂ ಪೂಜಿಸುವರು. ಅವನು ಜನರು ಮಾಡುವ ಪೂಜೆ ಗೋಸ್ಕರವಾಗಿ ತನ್ನ ಮೂರ್ತಿಭೇದಗಳಿಂದ ಆ ವರ್ಷದ ಜನರಿಗೆ ಗೋಚರನಾಗಿರುವನು. ॥೬-೭॥

ಇಲಾವೃತವೆಂಬ ವರ್ಷದಲ್ಲಿ ಬ್ರಹ್ಮನ ಕಣ್ಣುಗಳ ಮಧ್ಯ ಎಂದರೆ, ಭ್ರೂಮಧ್ಯದಿಂದ ಹುಟ್ಟಿದ ಶಿವಾಂಶಸಂಭೂತನಾದ ರುದ್ರನು ತನ್ನ ಪತ್ನಿಯೊಡನೆ ಯಾವಾಗಲೂ ನೆಲೆಯಾಗಿರುವನು. ಅವನೊಬ್ಬನೇ ಅಲ್ಲಿಗೆ ದೇವನಾಗಿರುವನು. ॥೮॥

ತತ್ಕ್ಷೇತ್ರೇ ನಾಪರಃ ಕಶ್ಚಿತ್ಪ್ರವೇಶಂವಿತನೋತಿ ಚ ।
ಭವಾನ್ಯಾಃ ಶಾಪತಸ್ತತ್ರ ಪುಮಾನ್ ಸ್ತ್ರೀ ಭವತಿ ಸ್ಫುಟಂ ॥೯॥

ಭವಾನೀನಾಥಕೈಃ ಸ್ತ್ರೀಣಾ ಮಸಂಖ್ಯೈರ್ಗಣಕೋಟಿಭಿಃ ।
ಸಂರುಧ್ಯಮಾನೋ ದೇವೇಶೋ ದೇವಂ ಸಂಕರ್ಷಣಂ ಭಜನ್ ॥೧೦॥

ಆತ್ಮನಾ ಧ್ಯಾನಯೋಗೇನ ಸರ್ವಭೂತಹಿತೇಚ್ಛಯಾ ।
ತಾಂ ತಾಮಸೀಂ ತುರೀಯಾಂ ಚ ಮೂರ್ತಿಂ ಪ್ರಕೃತಿಮಾತ್ಮನಃ ॥೧೧॥
ಉಪ ಧಾವತೇ ಚೈಕಾಗ್ರ ಮನಸಾ ಭಗವಾನಜಃ ॥

॥ ಶ್ರೀಭಗವಾನುವಾಚ ॥

ಓಂನಮೋ ಭಗವತೇ ಮಹಾಪುರುಷಾಯ ಸರ್ವಗುಣ
ಸಂಖ್ಯಾನಾಯಾಽನಂತಾಯಾಽವ್ಯಕ್ತಾಯ ನಮ ಇತಿ ॥೧೨॥

---

ಆ ಕ್ಷೇತ್ರಕ್ಕೆ ಸಾಮಾನ್ಯರಾದವರೂ ಯಾರೂ ಪ್ರವೇಶಮಾಡುವುದಿಲ್ಲ. ರುದ್ರನ ಶಕ್ತಿಯಾದ ಭವಾನಿಯ ಶಾಪದಿಂದ ಅಲ್ಲಿಗೆ ಪ್ರವೇಶಿಸಿದ ಪುರುಷನು ಖಂಡಿತವಾಗಿಯೂ ಸ್ತ್ರೀಯಾಗಿ ಪರಿಣಮಿಸುವನು ! ॥೯॥

ರುದ್ರಾಣಿಯೇ ನಾಯಕನಾಗಿ ಉಳ್ಳ ಅನೇಕ ಸಂಖ್ಯೆಯ ಗಣಸ್ತ್ರೀಜನರಿಂದ ಕೂಡಿ ಅವರ ನಿರ್ಬಂಧದಿಂದ ಜಗತ್ತಿನ ಕ್ಷೇಮಕ್ಕಾಗಿ ತಾನು ಧ್ಯಾನಯೋಗವನ್ನು ಆಶ್ರಯಿಸಿ ಸಮಸ್ತ ಭೂತಗಳಿಗೂ ಹಿತವನ್ನುಂಟುಮಾಡಬೇಕೆಂಬ ಬಯಕೆಯಿಂದ, ತನ್ನ ಉತ್ಪತ್ತಿಗೆ ಕಾರಣನಾದ ತಮೋಗುಣದಿಂದ ಕೂಡಿದ ಬ್ರಹ್ಮನನ್ನೂ, ನಾಲ್ಕನೆಯ ನಿರ್ವಿಕಾರಸ್ಥಿತಿಯಿಂದಿರುವ ಸಂಕರ್ಷಣಮೂರ್ತಿಯನ್ನೂ, ಏಕಾಗ್ರವಾದ ಮನಸ್ಸಿನಿಂದ ಧ್ಯಾನಿಸುತ್ತಾ ಅವನ ಸಮೀಪಕ್ಕೆ ಹೋಗುತ್ತಿರುವನು. ॥೧೦-೧೧॥

ಭಗವಂತನು ಹೇಳಿದನು—ಇದು ಉಪಾಸನಾಮಂತ್ರವು. ನಾಶರಹಿತನೂ, ಯೋಗರಹಿತರಾದ ಇತರರಿಗೆ ಗೋಚರವಾಗದವನೂ, ಸಕಲ ಗುಣಗಳನ್ನೂ ಪ್ರಕಟಪಡಿಸತಕ್ಕವನೂ, ಓಂಕಾರವಾಚ್ಯನೂ, ಬೋಧ್ಯನೂ ಆದ ಮಹಾಮಹಿಮನೂ ಆಗಿರುವ ಅನಂತನೆಂಬ ಮಹಾಪುರುಷನಿಗೆ ನಮಸ್ಕಾರವು. ಎಂಬುದು ಈ ಮಂತ್ರದ ಅರ್ಥವು. ॥೧೨॥

ಭಜೇ ಭಜನ್ಯಾರಣ ಪಾದಪಂಕಜಂ ।
ಭಗಸ್ಯ ಕೃತ್ಸ್ನಸ್ಯ ಪರಂಪರಾಯಣಂ ॥
ಭಕ್ತೇಷ್ವಲಂ ಭಾವಿತ ಭೂತಭಾವನಂ ।
ಭವಾಪಹಂ ತ್ವಾ ಭವಭಾವಮೀಶ್ವರಂ ॥೧೩॥

ನ ಯಸ್ಯ ಮಾಯಾಗುಣಕರ್ಮವೃತ್ತಿಭಿಃ ।
ನಿರೀಕ್ಷಿತೋ ಹ್ಯಣ್ವಪಿ ದೃಷ್ಟಿರಜ್ಯತೇ ॥
ಈಶೇ ಯಥಾ ನೋ ಜಿತಮನ್ಯುರಂಹಸಾ ।
ಕಸ್ತಂ ನ ಮನ್ಯೇತ ಜಿಗೀಷುರಾತ್ಮನಃ ॥೧೪॥

ಅಸದ್ದೃಶೋ ಯಃ ಪ್ರತಿಭಾತಿ ಮಾಯಯಾ ।
ಕ್ಷೀಬೇವ ಮಧ್ವಾಸವ ತಾಮ್ರಲೋಚನಃ ॥
ನ ನಾಗವಧ್ವೋಽರ್ಹಣ ಈಶಿರೇ ಹ್ರಿಯಾ ।
ಯತ್ಪಾದಯೋಃ ಸ್ಪರ್ಶನಧರ್ಷಿತೇಂದ್ರಿಯಾಃ ॥೧೫॥

---

ಎಲೈ ಸೇವಿಸುವುದಕ್ಕೆ ಯೋಗ್ಯನಾದ ಪರಮೇಶ್ವರನೇ, ಸಮಸ್ತರನ್ನೂ ರಕ್ಷಿಸ ತಕ್ಕ ಪಾದಕಮಲಗಳುಳ್ಳ, ಎಲ್ಲ ಬಗೆಯ ಷಡ್ಗುಣೈಶ್ವರ್ಯಗಳಿಗೆ ಉತ್ತಮವಾದ ಆಶ್ರಯಸ್ಥಾನನಾಗಿರುವ, ಭಕ್ತರಲ್ಲಿ ವಿಶೇಷವಾಗಿ ಪ್ರಕಟಿಸಲ್ಪಟ್ಟ ಸ್ವಸ್ವರೂಪವುಳ್ಳ, ಭಕ್ತರ ಜನನಮರಣರೂಪವಾದ ಸಂಸಾರದುಃಖವನ್ನು ನಾಶಮಾಡುವ, ಭಕ್ತರಲ್ಲದವ ರಲ್ಲಿ ಸಂಸಾರಭಾವವನ್ನುಂಟುಮಾಡುವ, ನಿನ್ನನ್ನು ನಾನು ಭಜಿಸುತ್ತೇನೆ. ॥೧೩॥

ಓ ಅನಂತರೂಪಿಯಾದ ಪರಮೇಶ್ವರನೇ, ಯಾವ ನಿನ್ನ ಮಾಯಾಸಂಬಂಧ ವಾದ ಗುಣಗಳ ಕಾರ್ಯದಿಂದ ಕೂಡಿದ ಚಿತ್ತವೃತ್ತಿಗಳಿಂದ ನಿನ್ನನ್ನು ನೋಡು ತ್ತಿದ್ದರೂ ನನ್ನ ದೃಷ್ಟಿಯು ಸ್ವಲ್ಪವಾದರೂ ನಿನ್ನಲ್ಲಿ ಸಂಬಂಧಿಸಿರುವುದಿಲ್ಲ ! ಹೀಗಿರು ವುದರಿಂದ ನೋಡುತ್ತಿರುವ ನಮ್ಮನ್ನು ನೀನೇ ನಿಯಮನಮಾಡುತ್ತಿರುವೆ. ಆದರೆ ಆ ನೀನೇ ಕ್ರೋಧವೇಗಗಳನ್ನು ಜಯಿಸಿದ ನಮಗೆ ದೃಷ್ಟಿಗೋಚರನಾಗುವೆ ! ಆದು ದರಿಂದ ಇಂದ್ರಿಯಗಳನ್ನು ಜಯಿಸಲು ಆಪೇಕ್ಷಿಸುವ ಮುಮುಕ್ಷುವು ಯಾವನು ತಾನೇ ನಿನ್ನನ್ನು ಆದರಿಸದೆ ಇದ್ದಾನು ? ॥೧೪॥

ಮದ್ಯವನ್ನು ಕುಡಿದು ಮದಿಸಿ ಕಣ್ಣುಗಳು ಕೆಂಪಾದವರಿಗೆ, ಹೇಗೆ ಪದಾ ರ್ಥಗಳು ಇದ್ದುದು ಇದ್ದಂತೆಯೇ ಕಾಣುವುದಿಲ್ಲವೋ ಹಾಗೆ, ನಿನ್ನ ಮಾಯೆಯಿಂದ

ಯಮಾಹುರಸ್ಯ ಸ್ಥಿತಿಜನ್ಮಸಂಯಮಂ ।
ತ್ರಿಭಿರ್ವಿಹೀನಂ ಯಮನಂತಮೃಷಯಃ ॥
ನ ವೇದ ಸಿದ್ಧಾರ್ಥಮಿವ ಕ್ವಚಿತ್ ಸ್ಥಿತಂ ।
ಭೂಮಂಡಲಂ ಮೂರ್ಧಸಹಸ್ರಧಾಮಸು ॥೧೬॥

ಯಸ್ಯಾಽದ್ಯ ಆಸೀದ್ಗುಣವಿಗ್ರಹೋ ಮಹಾನ್ ।
ವಿಜ್ಞಾನಧಿಷ್ಣ್ಯೋ ಭಗವಾನಜಃ ಕಿಲ ॥
ಯತ್ಸಂಭೃತೋಽಹಂ ತ್ರಿವೃತಾ ಸ್ವತೇಜಸಾ ।
ವೈಕಾರಿಕಂ ತಾಮಸಮೈಂದ್ರಿಯಂ ಸೃಜೇ ॥೧೭॥

---

ಮದಿಸಿ ಸರಿಯಾದ ದೃಷ್ಟಿಯಿಲ್ಲದವರಿಗೆ ನೀನು ನಿನ್ನ ನಿಜಸ್ವರೂಪದಿಂದ ಕಾಣಿಸುವುದಿಲ್ಲ. ನಾಗಕನ್ಯೆಯ ಮೋಹದಿಂದ ಆ ಕನ್ಯೆಯ ಪಾದವನ್ನು ಪೂಜೆಮಾಡುವಾಗಲೇ ಇಂದ್ರಿಯಗಳ ಬಲಹೀನತೆಯಿಂದ ಮೋಹಗೊಂಡ ಮನಸ್ಸುಳ್ಳವರು ನಾಚಿಕೆಯಿಂದ ಮಿಕ್ಕ ಅವಯವಗಳ ಪೂಜೆಗೆ ಹೇಗೆ ತಾನೆ ಶಕ್ತರಾಗುವರು? ॥೧೫॥

ಓ ದೇವದೇವನೇ, ವೇದಗಳು ನಿನ್ನನ್ನು ಈ ಪ್ರಪಂಚದ ಉತ್ಪತ್ತಿಸ್ಥಿತಿನಾಶಗಳಿಗೆ ಕಾರಣನೆಂದೂ, ನಿನಗೆ ಮಾತ್ರ ಉತ್ಪತ್ತಿ ಸ್ಥಿತಿ ನಾಶಗಳಿಲ್ಲದುದರಿಂದ ಅನಂತನೆಂದೂ, ಹೇಳುತ್ತಾ ವರ್ಣಿಸುತ್ತಿರುವುವು. ನಿನ್ನ ಸಾವಿರ ಹೆಡೆಗಳ ಮೇಲೆ ಈ ಭೂಮಂಡಲವು ಒಂದು ಸಾಸುವೆಯ ಕಾಳಿನಂತೆ ಎಲ್ಲಿಯೋ ಒಂದು ಕಡೆ ಇರುವುದನ್ನು ಯಾರುತಾನೆ ತಿಳಿಯರು? ಅಂತಹ ನಿನಗೆ ನಮಸ್ಕಾರವು. ॥೧೬॥

ವಿಷ್ಣುರೂಪನಾದ ಹೇ ಪರಮೇಶ್ವರನೇ, ನಿನ್ನ ಮಾಯಾಗುಣಸಂಬಂಧವಾದ ಮಹತ್ತತ್ವವು ಮೊದಲು ಉಂಟಾಯಿತು. ಆ ಮೇಲೆ ವಿಜ್ಞಾನವೆಂಬ ಸತ್ವಗುಣಾಶ್ರಯವಾದ ಚಿತ್ತವೆಂಬ ತತ್ವವು ಉಂಟಾಯಿತು. ಆ ಚಿತ್ತವೆಂಬ ತತ್ವವೇ ವಿಷ್ಣುಸ್ವರೂಪನಾದ ನೀನು. ನಿನ್ನಿಂದ ಬ್ರಹ್ಮನು ಹುಟ್ಟಿದನು. ಆ ಮೇಲೆ ಬ್ರಹ್ಮನಿಂದ ರುದ್ರನಾದ ನಾನು ಹುಟ್ಟಿದೆನು. ಗುಣಗಳಿಂದಲೂ ನಿನ್ನ ವಿಭೂತಿರೂಪವಾದ ಅಹಂಕಾರತತ್ವದಿಂದಲೂ ವೈಕಾರಿಕವೆಂಬ ದೇವತಾವರ್ಗವನ್ನೂ ತಾಮಸವೆಂಬ ಭೂತವರ್ಗವನ್ನೂ ಇಂದ್ರಿಯವರ್ಗವನ್ನೂ ನಾನು ಸೃಷ್ಟಿಮಾಡುತ್ತಿರುವೆನು. ॥೧೭॥

ಏತೇ ವಯಂ ಯಸ್ಯ ವಶೇ ಮಹಾತ್ಮನಃ ।
ಸ್ಥಿತಾಶ್ಶಕುಂತಾ ಇವ ಸೂತ್ರಯಂತ್ರಿತಾಃ ॥
ಮಹಾನಹಂ ವೈಕೃತ ತಾಮಸೇಂದ್ರಿಯಾಃ ।
ಸೃಜಾಮ ಸರ್ವೇ ಯದನುಗ್ರಹಾದಿದಂ ॥೧೮॥

ಯನ್ನಿರ್ಮಿತಾಂ ಕರ್ಹ್ಯಪಿ ಕರ್ಮಪರ್ವಣೀಂ ।
ಮಾಯಾಂ ಜನೋಽಯಂ ಗುರು ಸರ್ಗಮೋಹಿತಃ ॥
ನ ವೇದ ನಿಸ್ತಾರಣಯೋಗಮಂಜಸಾ ।
ತಸ್ಮೈ ನಮಸ್ತೇ ವಿಲಯೋದಯಾತ್ಮನೇ ॥೧೯॥

---

ಈ ನಾವುಗಳು ದಾರದ ಬಲೆಯಲ್ಲಿ ಸಿಕ್ಕಿದ ಹಕ್ಕಿಗಳಂತೆ ನಿನ್ನ ಕ್ರಿಯಾಶಕ್ತಿ ಮೊದಲಾದ ಸೂತ್ರಗಳಿಗೆ ಅಧೀನರಾಗಿ ಮಹಾತ್ಮನಾದ ನಿನ್ನ ವಶದಲ್ಲಿದ್ದುಕೊಂಡು ನಿನ್ನ ಅನುಗ್ರಹದಿಂದಲೇ ಮಹತ್ತತ್ವ ಅಹಂಕಾರ ದೇವತಾವರ್ಗ ಭೂತವರ್ಗ ಇಂದ್ರಿಯವರ್ಗ ಇವುಗಳನ್ನು ಸೃಷ್ಟಿಮಾಡುತ್ತಿರುವೆವು. ॥೧೮॥

ಯಾವ ನಿನ್ನಿಂದ ನಿರ್ಮಿಸಲ್ಪಟ್ಟ, ಪ್ರಾಣಿಗಳ ಕರ್ಮಗಳಿಗೆ ತಕ್ಕ ಫಲಗಳೆಂಬ ಗ್ರಂಥಿಗಳುಳ್ಳ ಮಾಯೆಯನ್ನು ದೊಡ್ಡದಾದ ಪ್ರಪಂಚ ಸೃಷ್ಟಿಯಿಂದ ಭ್ರಾಂತರಾದ ನಾವು ಎಲ್ಲೆಲ್ಲಿಯೂ ತಿಳಿಯುತ್ತೇವೆ. ಆ ಮಾಯೆಯ ಬಿಡುಗಡೆಯ ಮಾರ್ಗವನ್ನು ತಿಳಿಯೆವು. ಅಂತಹ ಉತ್ಪತ್ತಿನಾಶಕಾರಣಸ್ವರೂಪನಾದ ನಿನಗೆ ನಮಸ್ಕಾರವು.

ಈ ಸಂದರ್ಭದಲ್ಲಿ ವಿಷ್ಣುಭಾಗವತದಲ್ಲಿರುವ ಶ್ಲೋಕಗಳೊಡನೆ ಆನುಪೂರ್ವಿಯ ಹೋಲಿಕೆಯು ಇರುವುದು ಉಚಿತನೆಂದು ತಿಳಿಯಬೇಕು. ವರ್ಷಭೇದ ಕಾಲಭೇದಗಳೂ ಆಯಾ ದೇವತೆಗಳೇ ಮುಂತಾದವರ ಉಪಾಸನಾ ಮಂತ್ರಗಳಿಗೂ ಸ್ತೋತ್ರವಾಕ್ಯಗಳಿಗೂ ಅರ್ಥವು ಸಮಾನವಾಗಿರುವುದೇ ಇದಕ್ಕೆ ಕಾರಣವು. ಇದರಂತೆಯೇ ನಾರದಪುರಾಣ, ತಂತ್ರರಾಜ, ಯಾಮಳಗಳಲ್ಲೂ, ಶಿವರಹಸ್ಯದ ಮತ್ತು ಬ್ರಹ್ಮೋತ್ತರಖಂಡದ ಪ್ರದೋಷಾಧ್ಯಾಯಗಳಲ್ಲೂ, ಬ್ರಹ್ಮವೈವರ್ತಮಹಾಪುರಾಣದ ಪ್ರಕೃತಿಖಂಡ, ದೇವೀಭಾಗವತದ ಒಂಬತ್ತನೆಯ ಸ್ಕಂಧಗಳಲ್ಲೂ, ಆನುಪೂರ್ವಿಯ ಹೋಲಿಕೆಯು ಇದೆ ಎಂಬುದು ಗಮನಾರ್ಹವಾದುದು. ॥೧೯॥

॥ ನಾರಾಯಣ ಉವಾಚ ॥

ಏವಂ ಸ ಭಗವಾನ್‌ರುದ್ರೋ ದೇವಂ ಸಂಕರ್ಷಣಂ ಪ್ರಭುಂ ।
ಇಲಾವೃತ ಮುಪಾಸೀತ ದೇವೀ(ಂ) ಗಣಸಮಾಹಿತಃ ॥೨೦॥

ತಥೈವ ಧರ್ಮಪುತ್ರೋಽಸೌ ನಾಮ್ನಾ ಭದ್ರಶ್ರವಾ ಇತಿ ।
ತತ್ಕುಲಸ್ಯಾಪಿ ಪತಯಃ ಪುರುಷಾ ಭದ್ರಸೇವಕಾಃ ॥೨೧॥

ಭದ್ರಾಶ್ವವರ್ಷೇ ತಾಂ ಮೂರ್ತಿಂ ವಾಸುದೇವಸ್ಯ ವಿಶ್ರುತಾಂ ।
ಹಯಮೂರ್ತಿಭಿದಾ ತಾಂ ತು ಹಯಗ್ರೀವಪದಾಂಕಿತಾಂ ॥೨೨॥

ಪರಮೇಣ ಸಮಾಧ್ಯನ್ಯವಾರಕೇಣ ನಿಯಂತ್ರಿತಾಂ ।
ಏವಮೇವ ಚ ತಾಂ ಮೂರ್ತಿಂ ಗೃಣಂತ ಉಪಯಾಂತಿ ಚ ॥೨೩॥

॥ ಭದ್ರಶ್ರವಾ ಊಚುಃ ॥

ಓಂನಮೋ ಭಗವತೇ ಧರ್ಮಾಯಾತ್ಮವಿಶೋಧನಾಯ ನಮಇತಿ ॥

---

ನಾರಾಯಣನು ಹೇಳಿದನು—ಈ ರೀತಿಯಲ್ಲಿ ಆ ಮಹಾತ್ಮನಾದ ರುದ್ರನು ತನ್ನ ಗಣಗಳಿಂದ ಕೂಡಿ ಇಲಾವೃತ ವರ್ಷದಲ್ಲಿ ವರ್ಷಾಧಿಪತಿಯಾದ ದೇವನಾದ ಸಂಕರ್ಷಣನನ್ನೂ ದೇವಿಯನ್ನೂ ಉಪಾಸನೆ ಮಾಡಿದನು. ॥೨೦॥

ಹಾಗೆಯೇ ಭದ್ರಾಶ್ವವೆಂಬ ವರ್ಷಕ್ಕೆ ಧರ್ಮಪುತ್ರನಾದ ಭದ್ರಶ್ರವನೆಂಬವನು ಅಧಿಪತಿಯು. ಅವನ ಕುಲದಲ್ಲಿ ಹುಟ್ಟಿದವರೆಲ್ಲರೂ ಭದ್ರಶ್ರವನ ಸೇವಕರು. ॥೨೧॥

ಭದ್ರಾಶ್ವ ವರ್ಷದಲ್ಲಿ ಜನರು ಹಯಗ್ರೀವನೆಂಬ ಹೆಸರುಳ್ಳ ಪ್ರಸಿದ್ಧವಾದ ವಾಸುದೇವನ ಅವತಾರವಾದ ಕುದುರೆಯ ಮುಖವುಳ್ಳ ಮೂರ್ತಿಯನ್ನು ಪೂಜಿಸುವರು. ॥೨೨॥

ಸಮಾಧಿಯಲ್ಲದ ಬಾಹ್ಯವ್ಯಾಪಾರಗಳನ್ನೆಲ್ಲವನ್ನೂ ಬಿಟ್ಟು ಶ್ರೇಷ್ಠವಾದ ಏಕಾಗ್ರಚಿತ್ತದಿಂದಲೇ ಆ ಹಯಗ್ರೀವಮೂರ್ತಿಯನ್ನು ಧ್ಯಾನಮಾಡುತ್ತ ಸಿದ್ಧಿಯನ್ನು ಪಡೆಯುವರು. ॥೨೩॥

ಇದು ಭದ್ರಶ್ರವನ ಸೇವಕರು ಭದ್ರಶ್ರವನನ್ನು ದೇವನೆಂದು ಉಪಾಸನ ಮಾಡುವ ಮಂತ್ರವು. ಮಹಾಮಹಿಮನೂ ಧರ್ಮಪುತ್ರನೂ ಮನಶ್ಶುದ್ಧಿಯುಳ್ಳವನೂ ಆದ ನಿನಗೆ ನಮಸ್ಕಾರವು ಎಂಬುದೇ ಇದರ ಅರ್ಥವು.

ಅಹೋ ವಿಚಿತ್ರಂ ಭಗವದ್ವಿಚೇಷ್ಟಿತಂ ।
ಘ್ನಂತಂ ಜನೋಽಯಂ ಹಿ ಮಿಷನ್ನ ಪಶ್ಯತಿ ॥
ಧ್ಯಾಯನ್ನಸದ್ಯರ್ಹಿವಿಕರ್ಮ ಸೇವಿತುಂ ।
ನಿರ್ಹೃತ್ಯ ಪುತ್ರಂ ಪಿತರಂ ಜಿಜೀವಿಷುಃ ॥೨೪॥

ವದಂತಿ ವಿಶ್ವಂ ಕವಯಃ ಸ್ಮ ನಶ್ವರಂ ।
ಪಶ್ಯಂತಿ ಚಾಽಧ್ಯಾತ್ಮವಿದೋ ವಿಪಶ್ಚಿತಃ ॥
ತಥಾಪಿ ಮುಹ್ಯಂತಿ ತವಾಽಜ ಮಾಯಯಾ ।
ಸುವಿಸ್ಮಿತಂ ಕೃತ್ಯಮಜಂ ನತೋಽಸ್ಮಿ ತಂ ॥೨೫॥

ವಿಶ್ವೋದ್ಭವಸ್ಥಾನ ನಿರೋಧಕರ್ಮ ತೇ ।
ಹ್ಯಕರ್ತುರಂಗೀಕೃತಮಪ್ಯಪಾವೃತಃ ॥
ಯುಕ್ತಂ ನ ಚಿತ್ರಂ ತ್ವಯಿ ಕಾರ್ಯಕಾರಣೇ ।
ಸರ್ವಾತ್ಮನಿ ವ್ಯತಿರಿಕ್ತೇ ಚ ವಸ್ತುತಃ ॥೨೬॥

---

ಈ ಜನರು ನೋಡುತ್ತಿದ್ದರೂ ಎಲ್ಲರನ್ನೂ ಕೊಲ್ಲತಕ್ಕ ಮೃತ್ಯುವನ್ನು ಕಾಣುವುದಿಲ್ಲ. ಇದು ಆಶ್ಚರ್ಯಕರವಾದ ಭಗವಂತನ ಮಾಯೆಯೇ ಸರಿ. ಹೇಗೆಂದರೆ ಮಾನವನು ಮರಣಹೊಂದಿದ ಮಗನನ್ನೋ ವೃದ್ಧನಾದ ತಂದೆಯನ್ನೋ ಸುಟ್ಟು, ತಾನು ಅವರಿಬ್ಬರಿಗೂ ಸೇರಿದ ಹಣವನ್ನು ತೆಗೆದುಕೊಂಡು ಬದುಕಲು ಅಪೇಕ್ಷಿಸುತ್ತಾನೆ. ಮತ್ತು ತುಚ್ಛವಾದ ವಿಷಯಸುಖಗಳನ್ನು ಅನುಭವಿಸುವುದಕ್ಕಾಗಿ ಪಾಪಕಾರ್ಯಗಳನ್ನೇ ಯೋಚಿಸುತ್ತಿರುತ್ತಾನೆ. ॥೨೪॥

ಕವಿಗಳು ಶಾಸ್ತ್ರಗಳಿಂದ ಈ ಪ್ರಪಂಚವು ನಶ್ವರವಾದುದೆಂದು ತಿಳಿದು ಹೇಳುವರು. ಆತ್ಮಜ್ಞಾನವುಳ್ಳ ವಿದ್ವಾಂಸರು ನಿನ್ನ ಸ್ವರೂಪವನ್ನು ಸಮಾಧಿಯಲ್ಲಿ ತಿಳಿಯುವರು. ಓ ಉತ್ಪತ್ತಿರಹಿತನಾದ ಪರಮಾತ್ಮನೇ, ಹೀಗಿದ್ದರೂ ಈ ಜನರು ನಿನ್ನ ಮಾಯೆಯಿಂದ ಭ್ರಾಂತರಾಗಿರುವರು. ನಿನ್ನ ಈ ಕಾರ್ಯವು ಆಶ್ಚರ್ಯಕರವಾದುದು. ಆದುದರಿಂದ ಶಾಸ್ತ್ರಸಮಾಧಿ ಮುಂತಾದ ಕಷ್ಟವಾದ ಕೆಲಸಗಳನ್ನು ಬಿಟ್ಟು ನಿನ್ನನ್ನು ನಮಸ್ಕರಿಸುವೆನು. ॥೨೫॥

ಪ್ರಪಂಚವನ್ನು ಸೃಷ್ಟಿಮಾಡುವುದೇ ಮುಂತಾದ ಕಾರ್ಯಗಳನ್ನು ನೀನು ಮಾಡಿದರೂ ನಿನಗೆ ಅಜ್ಞಾನಾವರಣವು ಇಲ್ಲವೆಂದು ವೇದಗಳು ಹೇಳುವುವು. ಇದು

ವೇದಾನ್ಯುಗಾಂತೇ ತಮಸಾ ತಿರಸ್ಕೃತಾನ್ ।
ರಸಾತಲಾದ್ಯೋ ನೃತುರಂಗವಿಗ್ರಹಃ ॥
ಪ್ರತ್ಯಾದದೇ ವೈ ಕವಯೋಽಭಿಯಾಚತೇ ।
ತಸ್ಮೈ ನಮಸ್ತೇಽವಿತಥೇ ಹಿತಾಯ ತೇ ॥೨೭॥

ಏವಂ ಸ್ತುವಂತಿ ದೇವೇಶಂ ಹಯಶೀರ್ಷಂ ಹರಿಂ ಚ ತೇ ।
ಭದ್ರಶ್ರವ ಸನಾಮಾನೋ ವರ್ಣಯಂತಿ ಚ ತದ್ಗುಣಾನ್ ॥೨೮॥

ಏಷಾಂ ಚರಿತಮೇತದ್ಧಿ ಯಃ ಪಠೇಚ್ಛ್ರಾವಯೇಚ್ಚ ಯಃ ।
ಪಾಪಕಂಚುಕಮುತ್ಸೃಜ್ಯ ದೇವೀಲೋಕಂವ್ರಜೇಚ್ಚ ಸಃ ॥೨೯॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಅಷ್ಟಮಸ್ಕಂಧೇ
ಅಷ್ಟಮೋಽಧ್ಯಾಯಃ

---

ಆಶ್ಚರ್ಯಕರವಾದುದಲ್ಲ ; ಯುಕ್ತವಾದುದಾಗಿರುವುದು. ಹೇಗೆಂದರೆ :—ಮಾಯೆಯಿಂದ ಸಕಲ ಕಾರ್ಯಗಳಿಗಿಂತಲೂ ಸರ್ವಕಾರಣನಾದ ನೀನು ಬೇರೆಯಾಗಿ ಸರ್ವಾತ್ಮಸ್ವರೂಪನಾಗಿರುವೆ. ಉಪಾಧಿರಹಿತನಾದ ನಿನಗೆ ಮಾಯಾವರಣವಿಲ್ಲದಿರುವುದೂ ಕರ್ತೃತ್ವವಿಲ್ಲದಿರುವುದೂ ಯುಕ್ತವಾಗಿರುವುದು. ॥೨೬॥

ಯುಗದ ಕೊನೆಯಲ್ಲಿ ತಮನೆಂಬ ದೈತ್ಯನು ವೇದಗಳನ್ನು ಕದ್ದುಕೊಂಡು ರಸಾತಲಕ್ಕೆ ಹೋಗಲು ಬ್ರಹ್ಮನ ಪ್ರಾರ್ಥನೆಯಿಂದ ಮನುಷ್ಯ ಮತ್ತು ಕುದುರೆಯ ಆಕಾರವನ್ನು ಧರಿಸಿ (ಹಯಗ್ರೀವಾವತಾರವನ್ನುಮಾಡಿ) ಆ ವೇದಗಳನ್ನು ತಂದು ಕೊಟ್ಟೆಯಲ್ಲವೇ ? ಆ ಸತ್ಯಸಂಕಲ್ಪನಾದ ನಿನಗೆ ನಮಸ್ಕಾರವು. ॥೨೭॥

ಆ ಭದ್ರಶ್ರವರು ಈ ರೀತಿಯಲ್ಲಿ ಹಯಗ್ರೀವಾವತಾರವನ್ನು ಮಾಡಿದ ಹರಿಯನ್ನು ಸ್ತೋತ್ರಮಾಡಿ ಅವನ ಗುಣಗಳನ್ನು ವರ್ಣನೆಮಾಡುತ್ತಿರುವರು. ॥೨೮॥

ಈ ವರ್ಷಾಧಿಪತಿಗಳ ಚರಿತ್ರೆಯನ್ನು ಯಾರು ಪಠಿಸುವರೋ ಇತರರಿಗೆ ಯಾರು ಹೇಳುವರೋ ಅವರು ಪಾಪವೆಂಬ ಕವಚವನ್ನು ಕಳೆದುಹಾಕಿ ದೇವಿಯ ಲೋಕವಾದ ಮಣಿದ್ವೀಪಕ್ಕೆ ಹೋಗುವರು. ॥೨೯॥

ಇಲ್ಲಿಗೆ ಶ್ರೀ ದೇವೀಭಾಗವತಮಹಾಪುರಾಣದ ಎಂಟನೆಯ ಸ್ಕಂಧದಲ್ಲಿ
ಎಂಟನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಅಷ್ಟಮಸ್ಕಂಧೇ

॥ ನವಮೋಽಧ್ಯಾಯಃ ॥

**ಒಂಬತ್ತನೆಯ ಅಧ್ಯಾಯವು**

॥ ಶ್ರೀ ನಾರಾಯಣ ಉವಾಚ ॥

**ಹರಿವರ್ಷೇ ಚ ಭಗವಾನ್ ನೃಹರಿಃ ಪಾಪನಾಶನಃ ।**
**ವರ್ತತೇ ಯೋಗಯುಕ್ತಾತ್ಮಾ ಭಕ್ತಾನುಗ್ರಹಕಾರಕಃ ॥೧॥**

**ತಸ್ಯ ತದ್ದಯಿತಂ ರೂಪಂ ಮಹಾಭಾಗವತೋಽಸುರಃ ।**
**ಪಶ್ಯನ್ ಭಕ್ತಿಸಮಾಯುಕ್ತಃ ಸ್ತೌತಿ ತದ್ಗುಣತತ್ತ್ವವಿತ್ ॥೨॥**

॥ ಪ್ರಹ್ಲಾದ ಉವಾಚ ॥

**ಓಂ ನಮೋಭಗವತೇ ನರಸಿಂಹಾಯ ನಮಸ್ತೇಜಸ್ತೇಜಸೇ ಆವಿರಾವಿ**

---

ನಾರಾಯಣನು ಹೇಳಿದನು— ಹರಿವರ್ಷದಲ್ಲಿ ಮಹಾಮಹಿಮನಾದ ಹರಿಯು ಪಾಪನಾಶಕವಾದ ನರಸಿಂಹಾವತಾರವನ್ನು ಮಾಡಿ ಭಕ್ತರಿಗೆ ಅನುಗ್ರಹ ಮಾಡಲು ತಾನು ಯೋಗಿಯಾಗಿರುವನು. ॥೧॥

ಅವನ ಆ ಪ್ರೀತಿಪಾತ್ರವಾದ ರೂಪವನ್ನು ಭಗವದ್ಭಕ್ತರಲ್ಲಿ ಶ್ರೇಷ್ಠನಾದ ಪ್ರಹ್ಲಾದನು ನೋಡುತ್ತ ಅವನ ಗುಣಗಳ ತತ್ತ್ವವನ್ನು ಬಲ್ಲವನಾದುದರಿಂದ ಭಕ್ತಿಯಿಂದಕೂಡಿ ಹೀಗೆ ಸ್ತೋತ್ರಮಾಡುತ್ತಿರುತ್ತಾನೆ. ॥೨॥

ಇದು ಪ್ರಹ್ಲಾದನು ಉಪಾಸನೆಮಾಡಿದ ನರಸಿಂಹ ಮಂತ್ರವು. ಇದರ ಅರ್ಥವು ಮಹಾಮಹಿಮನಾದ, ನರಸಿಂಹಾವತಾರಮಾಡಿದ, ತೇಜೋರೂಪವಾದ ಪದಾರ್ಥಗಳಿಗೆಲ್ಲಕ್ಕೂ ತೇಜಸ್ಸನ್ನು ಕೊಡುವ, ವಜ್ರದಂತೆ ಹಲ್ಲುಗಳುಳ್ಳ, ದೇವನೇ, ಚೆನ್ನಾಗಿ

ರ್ಭವ ವಜ್ರದಂಷ್ಟ್ರ ಕರ್ಮಾಶಯಾನ್ ರಂಧಯರಂಧಯ ತಮೋ
ಗ್ರಸಗ್ರಸ ಓಂ ಸ್ವಾಹಾ ॥ ಅಭಯಂ ಮಮಾತ್ಮನಿ ಭೂಯಿಷ್ಠಾಃ ॥
ಓಂಕ್ಷ್ರೌಂ ॥

ಸ್ವಸ್ತ್ಯಸ್ತುವಿಶ್ವಸ್ಯ ಖಲಃ ಪ್ರಸೀದತಾಂ ।
ಧ್ಯಾಯಂತು ಭೂತಾನಿ ಶಿವಂ ಮಿಥೋ ಧಿಯಾ ॥
ಮನಶ್ಚ ಭದ್ರಂ ಭಜತಾ ದಧೋಕ್ಷಜೇ ।
ಆವೇಶ್ಯತಾಂ ನೋ ಮತಿರಪ್ಯಹೈತುಕೀ ॥೩॥

ಮಾಗಾರದಾರಾತ್ಮಜವಿತ್ತಬಂಧುಷು ।
ಸಂಗೋ ಯದಿಸ್ಯಾದ್ಭಗವತ್ಪ್ರಿಯೇಷು ನಃ ॥
ಯಃ ಪ್ರಾಣವೃತ್ತ್ಯಾ ಪರಿತುಷ್ಟ ಆತ್ಮವಾನ್ ।
ಸಿಧ್ಯತ್ಯದೂರಾನ್ನ ತಥೇಂದ್ರಿಯಪ್ರಿಯಃ ॥೪॥

---

ಪ್ರಕಟನಾಗು. (ದರ್ಶನವನ್ನು ಕೊಡು). ಕರ್ಮಗಳ ವಾಸನೆಯನ್ನು ನಾಶಮಾಡು. ಅಜ್ಞಾನವನ್ನು ನುಂಗಿಬಿಡು. ಜೀವಸ್ವರೂಪನಾದ ನನಗೆ ವಿಶೇಷವಾಗಿ ಅಭಯ ವುಂಟಾಗಲಿ.

ಪ್ರಪಂಚಕ್ಕೆಲ್ಲಕ್ಕೂ ಮಂಗಳವಾಗಲಿ. ದುಷ್ಟನೂ ತನ್ನ ಕ್ರೂರತನವನ್ನು ಬಿಟ್ಟು ಬಿಡಲಿ (ಶಾಂತಚಿತ್ತನಾಗಲಿ). ಪ್ರಾಣಿಗಳು ತಮ್ಮ ಮನಸ್ಸಿನಲ್ಲಿ ಪರಸ್ಪರವಾಗಿ ಮಂಗಳ ವನ್ನೇ ಯೋಚಿಸಲಿ. ಅವರ ಮನಸ್ಸು ಉಪಶಮಾದಿಗುಣಗಳನ್ನು ಹೊಂದಲಿ. ನಮ್ಮ ಮತ್ತು ಪ್ರಾಣಿಗಳ ಬುದ್ಧಿಯು ನಿಷ್ಕಾಮುವಾದುದಾಗಿ ಆ ಪರಮಾತ್ಮನಲ್ಲಿ ನೆಲೆಸಲಿ. ॥೩॥

ಮನೆ, ಹಣ, ಪುತ್ರ, ಬಂಧುಗಳು ಇವರುಗಳಲ್ಲಿ ನನ್ನ ಅಭಿಮಾನ ಸಂಗವು ಇಲ್ಲದೆ ಹೋಗಲಿ. ಆದರೆ ಭಗವದ್ಭಕ್ತರಲ್ಲಿ ಮಾತ್ರ ಸಂಗವು ಆಗಲಿ. ಪ್ರಾಣಧಾರಣೆಗೆ ಮಾತ್ರ ಆಗುವಷ್ಟು ಆಹಾರದಿಂದ ತೃಪ್ತನಾದ ಆತ್ಮಜ್ಞಾನಿಯು ಬೇಗನೆ ಸಿದ್ಧಿಹೊಂದು ವನು. ಇಂದ್ರಿಯ ಭೋಗಗಳಲ್ಲಾಸಕ್ತನಾದವನು ಹಾಗೆ ಸಿದ್ಧಿಹೊಂದಲಾರನು. ॥೪॥

ಯತ್ಸಂಗಲಬ್ಧಂ ನಿಜವೀರ್ಯವೈಭವಂ ।
ತೀರ್ಥಂ ಮುಹುಃ ಸಂಸ್ಪೃಶತಾಂ ಹಿ ಮಾನಸಂ ॥
ಹರತ್ಯಜೋಽಂತಃ ಶ್ರುತಿಭಿರ್ಗತೋಽಂಗಜಂ ।
ಕೋ ವೈ ನ ಸೇವೇತ ಮುಕುಂದ ವಿಕ್ರಮಂ ॥೫॥

ಯಸ್ಯಾಸ್ತಿ ಭಕ್ತಿರ್ಭಗವತ್ಯಕಿಂಚನಾ ।
ಸರ್ವೈರ್ಗುಣೈಸ್ತತ್ರ ಸಮಾಸತೇ ಸುರಾಃ ॥
ಹರಾವಭಕ್ತಸ್ಯ ಕುತೋ ಮಹದ್ಗುಣಾ ।
ಮನೋರಥೇನಾ ಸತಿ ಧಾವತೋ ಬಹಿಃ ॥೬॥

ಹರಿರ್ಹಿ ಸಾಕ್ಷಾದ್ಭಗವಾನ್ ಶರೀರಿಣಾಂ ।
ಆತ್ಮಾ ಝುಷಾಣಾಮಿವ ತೋಯಮೀಪ್ಸಿತಂ ॥

---

ಗಂಗಾದಿ ತೀರ್ಥಗಳು ಬಾರಿಬಾರಿಗೂ ಸ್ನಾನಾದಿಗಳಿಂದ ಸ್ಪರ್ಶಮಾಡುವ ಜನರ ಶರೀರ ಸಂಬಂಧವಾದ ಕೊಳೆಯನ್ನು ಮಾತ್ರ ನಾಶಮಾಡುವುವು. ಭಗವದ್ಭಕ್ತರ ಸಂಗದಿಂದ ಪ್ರಾಪ್ಯವಾದ ಮೋಕ್ಷವನ್ನೂ ಕೊಡತಕ್ಕ ಆ ಪರಮಾತ್ಮನ ಅಸಾಧಾರಣವಾದ ಮಹಿಮಾತಿಶಯವುಳ್ಳ ಪರಾಕ್ರಮವನ್ನು ಕಿವಿಯಿಂದ ಕೇಳುವವರ ಅಂತರ್ಗತನಾದ ಉತ್ಪತ್ತಿರಹಿತನಾದ ಪರಮಾತ್ಮನು ಮನಸ್ಸಿನ ಕೊಳೆಯನ್ನೂ ನಾಶಮಾಡುವನು. ಆದುದರಿಂದ ಆ ಭಗವದ್ಭಕ್ತರನ್ನು ಯಾರು ತಾನೇ ಸೇವಿಸದೆ ಇದ್ದಾರು?॥೫॥

ಮನಸ್ಸಿನ ಕೊಳೆಯು ನಾಶವಾಗುವುದರಿಂದ ಪ್ರಯೋಜನವೇನೆಂದರೆ ನಿಷ್ಕಾಮವಾದ ಭಕ್ತಿಯು ಭಗವಂತನಲ್ಲಿ ಯಾರಿಗೆ ಉಂಟಾಗುವುದೋ ಅವರಿಗೆ ಆ ದೇವನ ಅನುಗ್ರಹವಾಗುವುದು. ಆಗ ಸಮಸ್ತದೇವತೆಗಳೂ ಧರ್ಮಜ್ಞಾನಾದಿ ಸಕಲ ಸದ್ಗುಣಗಳಿಂದ ಕೂಡಿ ಅವನಿರುವ ಕಡೆಯಲ್ಲಿ ಯಾವಾಗಲೂ ವಾಸಮಾಡುವರು. ಮನೆ ಹೆಂಡಿತಿ ಮಕ್ಕಳು ಇವರಲ್ಲಾಸಕ್ತರಾದರೆ ದೃಢಭಕ್ತಿಯು ಉಂಟಾಗುವುದಿಲ್ಲವಾದುದರಿಂದ ಜ್ಞಾನವೈರಾಗ್ಯಾದಿ ಮಹಾಗುಣಗಳು ಹೇಗೆ ಉಂಟಾಗುವುವು? ಅಂಥವರಿಗೆ ವಿಷಯ ಸುಖಗಳುಂಟಾಗದೆ ಹೋದರೆ ಆ ಇಷ್ಟಾರ್ಥಸಾಧನೆಗಾಗಿ ಹೊರಗಡೆಗೇ ಓಡಿಹೋಗುತ್ತಿರುವರು. ॥೬॥

ಹರಿಭಕ್ತರಲ್ಲದೆ ಮನೆ ಹೆಂಡಿತಿ ಮುಂತಾದವರಲ್ಲಿ ಆಸಕ್ತರಾದವರಿಗೂ ಲೋಕದಲ್ಲಿ ಮಹತ್ವವು ಕಾಣುತ್ತಿರುವುದೆಂದರೆ, ನಿಜವು. ಆದರೆ ಅದು ಹಾಸ್ಯಾಸ್ಪದವಾದುದು.

ಹಿತ್ವಾ ಮಹಾಂ ಸ್ತ್ವಂ ಯದಿ ಸಜ್ಜತೇ ಗೃಹೇ ।
ತದಾ ಮಹತ್ವಂ ವಯಸಾ ದಂಪತೀನಾಂ ॥೭॥

ತಸ್ಮಾದ್ರಜೋರಾಗವಿಷಾದಮನ್ಯು ।
ಮಾನಸ್ಪೃಹಾಭಯದೈನ್ಯಾಧಿಮೂಲಂ ॥
ಹಿತ್ವಾ ಗೃಹಂ ಸಂಸೃತಿ ಚಕ್ರವಾಲಂ ।
ನೃಸಿಂಹಪಾದಂ ಭಜತಾಕುತೋಭಯಂ ॥೮॥

ಏವಂ ದೈತ್ಯಪತಿಃ ಸೋಽಪಿ ಭಕ್ತ್ಯಾಽನುದಿನಮೀಡತೇ ।
ನೃಹರಿಂ ಪಾಪಮಾತಂಗಹರಿಂ ಹೃತ್ಪದ್ಮವಾಸಿನಂ ॥೯॥

---

ಹೇಗೆಂದರೆ, ಮೀನುಗಳಿಗೆ ನೀರಿಲ್ಲದಿದ್ದರೆ ಪ್ರಾಣವಿರುವುದಿಲ್ಲ. ಆದುದರಿಂದ ಅವುಗಳಿಗೆ ಅತ್ಯಾವಶ್ಯಕವಾದ ನೀರೇ ಆತ್ಮವು. ಅದರಂತೆ ಶರೀರವನ್ನು ಧರಿಸಿದ ಸಕಲರಿಗೂ ಮಹಾಮಹಿಮನಾದ ಹರಿಯೇ ಆತ್ಮನು. ಅವನಿಲ್ಲದೆ ಮನುಷ್ಯನು ಬದುಕಿರಲಾರನು. ಅವನನ್ನು ಬಿಟ್ಟು ಗೃಹಾದಿಗಳಲ್ಲಿ ಆಸಕ್ತರಾಗಿ ಅತಿ ಪ್ರಸಿದ್ಧರಾಗಿದ್ದರೂ ಆಗ ಆ ದಂಪತಿಗಳಿಗೆ ವಯಸ್ಸಿನಿಂದ ಮಹತ್ವವೇ ಹೊರತು ಜ್ಞಾನಾದಿಸದ್ಗುಣಗಳಿಂದ ಪೂಜ್ಯತ್ವವು ಬರುವುದಿಲ್ಲ. ಗುಣಿಗಳಲ್ಲದ ಶೂದ್ರಾದಿಗಳಲ್ಲಿ ಚಿಕ್ಕ ವಯಸ್ಸಿನ ದಂಪತಿಗಳಿಗಿಂತ ವೃದ್ಧದಂಪತಿಗಳಿಗೆ ಹೆಚ್ಚು ಗೌರವವಿದ್ದಂತೆ ಮಾತ್ರ ಆಗುವುದು. ॥೭॥

ಆದುದರಿಂದ ಎಲೈ ರಾಕ್ಷಸರೇ, ರಜೋಗುಣದಿಂದುಂಟಾದ ಅತ್ಯಾಸೆ ದುಃಖ ಕೋಪ ಗೌರವಾಪೇಕ್ಷೆ ಭಯ ದೀನತೆ ಮನೋವ್ಯಥೆ ಇವುಗಳಿಗೆ ಕಾರಣವಾದ ಜನನ ಮರಣ ಪ್ರವಾಹಗಳಿಂದ ಕೂಡಿದ ಸಂಸಾರ ಚಕ್ರಸ್ವರೂಪವಾದ ಗೃಹಾದಿಗಳನ್ನು ಬಿಟ್ಟು ಯಾವ ಭಯವೂ ಇಲ್ಲದ ನೃಸಿಂಹನ ಪಾದವನ್ನು ಧ್ಯಾನಮಾಡಿರಿ. ಎಂದು ಪ್ರಹ್ಲಾದನು ದೈತ್ಯರಿಗೆ ಉಪದೇಶಿಸಿದನು. ॥೮॥

ಹೀಗೆ ದೈತ್ಯಪತಿಯಾದ ಪ್ರಹ್ಲಾದನೂ ಕೂಡ ತನ್ನ ಹೃದಯ ಕಮಲದಲ್ಲಿ ವಾಸವಾಗಿರುವ, ಪಾಪವೆಂಬ ಆನೆಗೆ ಸಿಂಹನಂತಿರುವ, ನರಸಿಂಹಮೂರ್ತಿಯನ್ನು ಭಕ್ತಿಯಿಂದ ಪ್ರತಿದಿನವೂ ಸ್ತೋತ್ರಮಾಡುತ್ತಿರುವನು. ॥೯॥

ಕೇತುಮಾಲೇ ಚ ವರ್ಷೇ ಹಿ ಭಗವಾನ್ ಸ್ಮರರೂಪಧೃಕ್ ।
ಆಸ್ತೇ ತದ್ವರ್ಷನಾಥಾನಾಂ ಪೂಜನೀಯಶ್ಚ ಸರ್ವದಾ ॥೧೦॥

ಏತೇನೋಪಾಸತೇ ಸ್ತೋತ್ರಜಾಲೇನ ಚ ರಮಾಽಬ್ಧಿಜಾ ।
ತದ್ವರ್ಷನಾಥಾ ಸತತಂ ಮಹತಾಂ ಮಾನದಾಯಿಕಾ ॥೧೧॥

॥ ರಮೋವಾಚ ॥

ಓಂ ಹ್ರಾಂ ಹ್ರೀಂ ಹ್ರೂಂ ಓಂ ನಮೋ ಭಗವತೇ ಹೃಷೀಕೇಶಾಯ ಸರ್ವಗುಣವಿಶೇಷೈರ್ವಿಲಕ್ಷಿತಾತ್ಮನೇ ಆಕೂತೀನಾಂ ಚಿತ್ತೀನಾಂ ಚೇತಸಾಂ ವಿಶೇಷಾಣಾಂ ಚಾಧಿಪತಯೇ ಷೋಡಶಕಲಾಯ ಛಂದೋಮಯಾಯಾನ್ನಮಯಾಯಾಮೃತಮಯಾಯ ಸರ್ವಮಯಾಯ ಸಹಸೇ ಓಜಸೇ ಬಲಾಯ ಕಾಂತಾಯ ಕಾಮಾಯ ನಮಸ್ತೇ ಉಭಯತ್ರ ಭೂಯಾತ್ ॥

---

ಕೇತುಮಾಲವೆಂಬ ವರ್ಷದಲ್ಲಿ ಭಗವಂತನು ಮನ್ಮಥನ ರೂಪವನ್ನು ಧರಿಸಿ ಆವರ್ಷಾಧಿಪತಿಗಳಿಗೆ ಯಾವಾಗಲೂ ಪೂಜ್ಯನಾಗಿರುವನು. ॥೧೦॥

ಆ ಕೇತುಮಾಲವರ್ಷಕ್ಕೆ ಅಧಿಪತಿಯಾದ, ಮಹಾತ್ಮರಿಗೆ ಗೌರವವನ್ನು ಕೊಡತಕ್ಕ, ಕ್ಷೀರಸಮುದ್ರದಲ್ಲಿ ಹುಟ್ಟಿದ ಲಕ್ಷ್ಮಿಯು ಮುಂದೆ ಹೇಳುವ ಸ್ತೋತ್ರ ಸಮೂಹದಿಂದ ಯಾವಾಗಲೂ ಆ ದೇವನನ್ನು ಧ್ಯಾನಮಾಡುತ್ತಿರುವಳು. ॥೧೧॥

ಇದು ಕೇತುಮಾಲವರ್ಷಕ್ಕೆ ದೇವನಾದ ಕಾಮದೇವನ ಮಂತ್ರ. ಇದರ ಅರ್ಥವು, ಮಹಾಮಹಿಮನೂ, ಇಂದ್ರಿಯಗಳಿಗೆ ಒಡೆಯನೂ, ಸಮಸ್ತ ಸದ್ಗುಣ ಗಳಿಂದಲೂ ಕೂಡಿದವನೂ, ಕ್ರಿಯಾ, ಜ್ಞಾನ, ಇಚ್ಛಾಶಕ್ತಿಗಳಿಂದ ಕೂಡಿ ಆ ಶಕ್ತಿ ಗಳಿಗೆ ವಿಷಯವಾದುವುಗಳಿಗೆಲ್ಲಕ್ಕೂ ಅಧಿಪತಿಯಾಗಿರುವವನೂ, ಹನ್ನೊಂದು ಇಂದ್ರಿಯಗಳೂ ಐದು ವಿಷಯಗಳೂ ಕೂಡಿ ಹದಿನಾರು ಕಲೆಗಳುಳ್ಳವನೂ, ವೇದೋಕ್ತ ಕರ್ಮಸ್ವರೂಪನೂ, ಅನ್ನಸ್ವರೂಪನೂ, ಅಮೃತವಾದ ಪರಮಾನಂದ ಸ್ವರೂಪನೂ, ಸಕಲ ಪ್ರಪಂಚಸ್ವರೂಪನೂ ಸಹನಶಕ್ತಿಯೂ ತೇಜಸ್ಸೂ ಬಲವೂ ಉಳ್ಳವನೂ, ಸುಂದರನೂ, ಆದ ಕಾಮದೇವನಾದ ನಿನಗೆ ನಮಸ್ಕಾರವು ಹೀಗಿದೆ.

ಸ್ತ್ರಿಯೋ ವ್ರತೈಸ್ತ್ವಾಂ ಹೃಷೀಕೇಶ್ವರಂ ಸ್ವತೋ ।
ಹ್ಯಾರಾಧ್ಯ ಲೋಕೇ ಪತಿಮಾಶಾಸತೇಽನ್ಯಂ ॥
ತಾಸಾಂ ನ ತೇ ವೈ ಪರಿಪಾಂತ್ಯಪತ್ಯಂ ।
ಪ್ರಿಯಂ ಧನಾಯೂಂಷಿ ಯತೋಽಸ್ವತಂತ್ರಾಃ ॥೧೨॥

ಸ ವೈ ಪತಿಃ ಸ್ಯಾದಕುತೋಭಯಃ ಸ್ವತಃ ।
ಸಮಂತತಃ ಪಾತಿ ಭಯಾತುರಂ ಜನಂ ॥
ಸ ಏಕ ಏವೇತರಥಾ ಮಿಥೋ ಭಯಂ ।
ನೈವಾತ್ಮಲಾಭಾದಧಿಮನ್ಯತೇ ಪರಂ ॥೧೩॥

ಯಾ ತಸ್ಯ ತೇ ಪಾದಸರೋರುಹಾರ್ಹಣಂ ।
ನ ಕಾಮಯೇತ್ಸಾಽಖಿಲ ಕಾಮಲಂಪಟಾ ॥
ತದೇವ ರಾಸೀಪ್ಸಿತಮೀಪ್ಸಿತೋಽರ್ಚಿತೋ ।
ಯದ್ಭಗ್ನಯಾಚ್ಞಾ ಭಗವನ್ ಪ್ರತಪ್ಯತೇ ॥೧೪॥

---

ಇಂದ್ರಿಯಗಳಿಗೆಲ್ಲಕ್ಕೂ ಒಡೆಯನಾಗಿ ಸ್ವತಃಪತಿಯಾದ ನಿನ್ನನ್ನು ಸ್ತ್ರೀಯರು ವ್ರತಗಳಲ್ಲಿ ಪೂಜೆಯನ್ನು ಮಾಡಿ ಬೇರೊಬ್ಬ ಪತಿಯನ್ನು ಅಪೇಕ್ಷಿಸುವರು. ಪತಿಕಾಮರಾದ ಸ್ತ್ರೀಯರು ವ್ರತಗಳಲ್ಲಿ ಕಾಮನನ್ನು ಪೂಜಿಸುವುದು ಪ್ರಸಿದ್ಧವಾಗಿರುವುದು. ಅವರ ಪತಿಗಳು ಸ್ವತಂತ್ರರಲ್ಲದ್ದರಿಂದ ಆ ಸ್ತ್ರೀಯರ ಇಷ್ಟವಾದ ಧನ, ಆಯಸ್ಸು ಪುತ್ರಾದಿಗಳನ್ನು ಕಾಪಾಡಲು ಶಕ್ತರಲ್ಲ. ||೧೨||

ಆ ಪತಿಯಾದವನು ಸ್ವತಂತ್ರನಾಗಿ ಇತರ ಭಯವು ಯಾವುದೂ ಇಲ್ಲದವನಾದರೆ ಭಯವನ್ನು ಹೊಂದಿದ ಜನರನ್ನು ಎಲ್ಲ ಭಯಗಳಿಂದಲೂ ರಕ್ಷಿಸುವನು. ಅಂತಹ ಪತಿಯು ನೀನೊಬ್ಬನೇ. ಏಕೆಂದರೆ ಆತ್ಮಲಾಭಕ್ಕಿಂತಲೂ ಬೇರೆ ಉತ್ತಮವಾದ ಲಾಭವಿಲ್ಲವು. ನೀನೇ ಆತ್ಮನು. ಹಾಗಿಲ್ಲದೆ ಅನೇಕರು ಸ್ವತಂತ್ರರಾದಲ್ಲಿ ರಾಜರಿಗೆ ಹೇಗೋ ಹಾಗೆ ಒಬ್ಬರಿಂದೊಬ್ಬರಿಗೆ ಭಯವು ಪ್ರಾಪ್ತವಾಗುವುದು. ||೧೩||

ಓ ಮಹಾಮಹಿಮನೇ, ಯಾವ ಸ್ತ್ರೀಯು ಹಿಂದೆ ಹೇಳಿದ ಲಕ್ಷಣಗಳಿಂದ ಕೂಡಿದ ನಿನ್ನ ಪಾದಪದ್ಮಪೂಜೆಯೊಂದನ್ನೇ ಅಪೇಕ್ಷಿಸಿ ಇತರ ಫಲಾಪೇಕ್ಷೆಯಿಲ್ಲದೆ ಇರುವಳೋ ಅಂಥವಳು ಸಮಸ್ತ ಇಷ್ಟಾರ್ಥಗಳನ್ನೂ ಹೊಂದುವಳು. ಫಲಾಪೇಕ್ಷೆಯಿಂದ ಪೂಜೆಮಾಡಿದವರಿಗೆ ನೀನು ಆ ಫಲವನ್ನು ಮಾತ್ರ ಕೊಡುವೆ. ಶಾಶ್ವತ

ಮತ್ಪ್ರಾಪ್ತಯೇಽಜೇಶ ಸುರಾಸುರಾದಯ ।
ಸ್ತಪ್ಯಂತ ಉಗ್ರಂ ತಪ ಐಂದ್ರಿಯೇ ಧಿಯಃ ॥
ಋತೇ ಭವತ್ಪಾದಪರಾಯಣಾನ್ನ ಮಾಂ ।
ವಿದಂತ್ಯಹಂ ತ್ವದ್ಧೃದಯಾ ಯತೋಽಜಿತಾ ॥೧೫॥

ಸ ತ್ವಂ ಮಮಾಪ್ಯಚ್ಯುತ ಶೀರ್ಷ್ಣಿ ವಂದಿತಂ ।
ಕರಾಂಬುಜಂ ಯತ್ತ್ವದಧಾಯಿ ಸಾತ್ವತಾಂ ॥
ಬಿಭರ್ಷಿ ಮಾಂ ಲಕ್ಷ್ಮ ವರೇಣ್ಯ ಮಾಯಯಾ ।
ಕ ಈಶ್ವರಸ್ಯೇಹಿತಮೂಹಿತುಂ ವಿಭುಃ ॥೧೬॥

---

ವಾದ ಸುಖದ ಫಲವನ್ನು ಕೊಡುವುದಿಲ್ಲವು. ಆದುದರಿಂದಲೇ ಫಲಾಪೇಕ್ಷೆಯುಳ್ಳವರು ಫಲಪ್ರಾಪ್ತಿಯಾದ ಮೇಲೆ ಫಲಭೋಗಾನಂತರದಲ್ಲಿ ಆ ಸುಖವು ಶಾಶ್ವತವಲ್ಲದ್ದರಿಂದ ಅದು ಮುಗಿದುಹೋಗಲು ತಮ್ಮ ಫಲಾಪೇಕ್ಷೆಯು ಅಲ್ಪ ಫಲವುಳ್ಳದ್ದಾಗಿ ವ್ಯರ್ಥವಾಯಿತೆಂದು ದುಃಖಪಡುವರು. ||೧೪||

ಬ್ರಹ್ಮನೂ ಈಶ್ವರನೂ ದೇವತೆಗಳೂ ಅಸುರರೂ ಮುಂತಾದವರು ಇಂದ್ರಿಯ ಭೋಗಗಳಲ್ಲಿ ಆಸಕ್ತರಾದವರಾಗಿ ನನ್ನ ಪ್ರಾಪ್ತಿ (ಲಕ್ಷ್ಮೀಪ್ರಾಪ್ತಿ)ಗೋಸ್ಕರವಾಗಿ ಕ್ರೂರವಾದ ತಪಸ್ಸನ್ನು ಮಾಡುವರು. ಹಾಗಾದರೂ ನಿನ್ನ ಪಾದಭಕ್ತಿಯಿಲ್ಲದೆ ಅವರು ನನ್ನ ಕಡೆಗಣ್ಣಿನ ನೋಟದಿಂದುಂಟಾದ ಸಂಪತ್ತನ್ನು ಹೊಂದಲಾರರು. ಏಕೆಂದರೆ ನಾನು ನಿನ್ನಲ್ಲೇ ಮನಸ್ಸುಳ್ಳವಳಾಗಿ ನಿನ್ನ ಅಧೀನಳಾಗಿರುವೆನು. ನಿನ್ನನ್ನು ಪೂಜೆಯಿಂದ ಅನುಸರಿಸಿದವರನ್ನು ಮಾತ್ರ ನಾನು ಅನುಗ್ರಹದೃಷ್ಟಿಯಿಂದ ನೋಡುವೆನು. ನಾನು ಭಕ್ತರಿಗೆ ಅನುಗ್ರಹವನ್ನು ಮಾಡಬೇಕಾದರೂ ನಿನ್ನ ಮೂಲಕವಾಗಿಯೇ ಮಾಡಬೇಕು. ನಿನ್ನನ್ನು ಪೂಜೆಯಿಂದ ಒಲಿಸಿಕೊಳ್ಳದಿದ್ದವರನ್ನು ನಾನೂ ಸ್ವತಂತ್ರವಾಗಿ ಅನುಗ್ರಹಿಸಲಾರೆನು. ಎಂದು ಅಭಿಪ್ರಾಯವು. ||೧೫||

ಓ ನಾಶರಹಿತನಾದ ದೇವನೇ, ಸಮಸ್ತ ಇಷ್ಟಾರ್ಥಗಳನ್ನೂ ಕೊಡತಕ್ಕುದೆಂದು ಸಜ್ಜನರು ಹೊಗಳುತ್ತಿರುವ ನಿನ್ನ ಕರಕಮಲವನ್ನು ಭಕ್ತರ ತಲೆಯ ಮೇಲೆ ಇಟ್ಟಿಯಲ್ಲವೆ? ಆ ಕರಕಮಲವನ್ನು ನನ್ನ ತಲೆಯ ಮೇಲೆಯೂ ಇಟ್ಟು ಅನುಗ್ರಹಿಸು. ಓ ಶ್ರೇಷ್ಠನಾದ ದೇವನೇ, ನನ್ನನ್ನು ಶ್ರೀವತ್ಸವೆಂಬ ಗುರುತಿನ ರೂಪದಲ್ಲಿ ನಿನ್ನ ಹೃದಯದಲ್ಲಿ ಧರಿಸಿರುವೆ. ಇದು ನನ್ನ ವಿಷಯದಲ್ಲಿ ನಿನಗೆ ಇರುವ ಪ್ರೀತಿ

**ಏವಂ ಕಾಮಂ ಸ್ತುವಂತ್ಯೇವ ಲೋಕಬಂಧುಸ್ವರೂಪಿಣಂ ।**
**ಪ್ರಜಾಪತಿಮುಖಾ ವರ್ಷನಾಥಾಃ ಕಾಮಸ್ಯ ಸಿದ್ಧಯೇ ॥೧೭॥**

**ರಮ್ಯಕೇ ನಾಮ ವರ್ಷೇ ಚ ಮೂರ್ತಿಂ ಭಗವತಃ ಪರಾಂ ।**
**ಮಾತ್ಸ್ಯಂ ದೇವಾಸುರೈರ್ವಂದ್ಯಾಂ ಮನುಃ ಸ್ತೌತಿ ನಿರಂತರಂ॥೧೮॥**

॥ ಮನುರುವಾಚ ॥

**ಓಂ ನಮೋ ಮುಖ್ಯತಮಾಯ ನಮಃ ಸತ್ವಾಯ ಪ್ರಾಣಾಯೌಜಸೇ ಬಲಾಯ ಮಹಾಮತ್ಸ್ಯಾಯ ನಮಃ ॥**

**ಅಂತರ್ಬಹಿಶ್ಚಾಖಿಲಲೋಕಪಾಲಕೈ ।**
**ರದೃಷ್ಟರೂಪೋ ವಿಚರಸ್ಯುರುಸ್ವನಃ ॥**

---

ಯನ್ನು ಮಾತ್ರ ತೋರಿಸುವುದು. ಭಕ್ತರ ವಿಷಯದಲ್ಲಿ ನಿನಗೆ ಹೆಚ್ಚಾದ ಕೃಪೆಯೂ ಇರುವುದು. ಇದು ಆಶ್ಚರ್ಯಕರವಾದುದು. ಸರ್ವೇಶ್ವರನಾದ ನಿನ್ನ ಮಾಯೆಯಿಂದ ಆವರಿಸಲ್ಪಟ್ಟಿರುವ ಯಾರುತಾನೇ ನಿನ್ನ ಇಷ್ಟವನ್ನು ತಿಳಿಯಲು ಶಕ್ತರಾಗುವರು? ||೧೬||

ಈ ರೀತಿಯಲ್ಲಿ ಲೋಕಕ್ಕೆಲ್ಲಕ್ಕೂ ಪ್ರೀತಿಪಾತ್ರನಾದ ಕಾಮದೇವನನ್ನು ಆ ವರ್ಷಕ್ಕೆ ಅಧಿಪತಿಗಳಾದ ಬ್ರಹ್ಮನೇ ಮುಂತಾದವರು ತಮ್ಮ ಇಷ್ಟಾರ್ಥಸಿದ್ಧಿಗೋಸ್ಕರ ವಾಗಿ ಸ್ತೋತ್ರಮಾಡುತ್ತಿರುವರು. ||೧೭||

ರಮ್ಯಕವೆಂಬ ವರ್ಷದಲ್ಲಿ ಆ ಪರಮಾತ್ಮನ ಅವತಾರವಾದ ದೇವತೆಗಳೂ ಅಸುರರೂ ಪೂಜಿಸತಕ್ಕ ಮತ್ಸ್ಯಮೂರ್ತಿಯನ್ನು ಮನುವು ಯಾವಾಗಲೂ ಸ್ತೋತ್ರ ಮಾಡುತ್ತಿರುವನು. ||೧೮||

ಇದು ರಮ್ಯಕ ವರ್ಷಕ್ಕೆ ದೇವನಾದ ಮತ್ಸ್ಯಮೂರ್ತಿಯ ಮಂತ್ರವು. ಅತ್ಯಂತ ಮುಖ್ಯನೂ ಸತ್ವಗುಣಪ್ರಧಾನನೂ ಸೂತ್ರಾತ್ಮನೂ ತೇಜೋವಂತನೂ ಬಲಶಾಲಿಯೂ ಆದ ಮಹಾಮತ್ಸ್ಯಮೂರ್ತಿಗೆ ನಮಸ್ಕಾರವು. ಎಂಬುದೇ ಇದರ ಅರ್ಥವು.

ವೇದರೂಪವಾದ ಧ್ವನಿಯುಳ್ಳ ನೀನು ವೇದಭಾಗಗಳಾದ ಬ್ರಾಹ್ಮಣಾದಿಗಳ ಹೆಸರಿನಿಂದ ಈ ಪ್ರಪಂಚವನ್ನು ವಿಧಿನಿಷೇಧಗಳ ರೂಪದಿಂದ ನಿನ್ನ ವಶಮಾಡಿ ಕೊಂಡು ಸಕಲ ಲೋಕಪಾಲಕರಿಗೂ ಕಾಣಿಸದಿರುವ ರೂಪವುಳ್ಳವನಾಗಿ ಈ

**ಸ ಈಶ್ವರಸ್ತ್ವಂ ಯ ಇದಂ ವಶೇ ನಯನ್ ।**
**ನಾಮ್ನಾ ಯಥಾ ದಾರುಮಯೀಂ ನರಃ ಸ್ತ್ರಿಯಂ ॥೧೯॥**

**ಯಂ ಲೋಕಪಾಲಾಃ ಕಿಲ ಮತ್ಸರಜ್ವರಾ ।**
**ಹಿತ್ವಾ ಯತಂತೋಽಪಿ ಪೃಥಕ್ ಸಮೇತ್ಯ ಚ ॥**
**ಪಾತುಂ ನ ಶೇಕುಃ ದ್ವಿಪದಶ್ಚತುಷ್ಪದಃ ।**
**ಸರೀಸೃಪಂ ಸ್ಥಾಣು ಯದತ್ರ ದೃಶ್ಯತೇ ॥೨೦॥**

**ಭವಾನ್ಯುಗಾಂತಾರ್ಣವ ಊರ್ಮಿಮಾಲಿನಿ ।**
**ಕ್ಷೋಣೀಮಿಮಾಮೋಷಧಿವೀರುಧಾಂ ನಿಧಿಂ ॥**
**ಮಯಾ ಸಹೋರುಕ್ರಮ ತೇಜಓಜಸಾ ।**
**ತಸ್ಮೈ ಜಗತ್ಪ್ರಾಣಗಣಾತ್ಮನೇ ನಮಃ ॥೨೧॥**

---

ಪ್ರಪಂಚದ ಒಳಗೂ ಹೊರಗೂ ವ್ಯಾಪಿಸಿರುತ್ತಾ ಸಂಚಾರಮಾಡುತ್ತಿರುವೆ. ಮನುಷ್ಯನು ಮರದಿಂದ ಮಾಡಿದ ಹೆಣ್ಣು ಬೊಂಬೆಯನ್ನು ತನ್ನ ವಶದಲ್ಲಿಟ್ಟುಕೊಂಡಿರುವಂತೆ, ನೀನೂ ಈ ಪ್ರಪಂಚವನ್ನು ನಿನ್ನ ವಶದಲ್ಲಿಟ್ಟುಕೊಂಡಿರುತ್ತೀಯೆ. ||೧೯||

ಇಂದ್ರಾದಿ ಲೋಕಪಾಲಕರು ಪರಸ್ಪರವಾಗಿ ಮಾತ್ಸರ್ಯವೆಂಬ ಜ್ವರವುಳ್ಳವರಾಗಿ, ತಾವೇ ಬೇರೆಯಾಗಿ ಅಥವಾ ಕೂಡಿ ಪ್ರಯತ್ನಪಟ್ಟರೂ, ಸರ್ವಾತ್ಮನಾದ ನಿನ್ನನ್ನು ಬಿಟ್ಟು, ಎರಡು ಕಾಲು ಮತ್ತು ನಾಲ್ಕು ಕಾಲುಗಳುಳ್ಳ ಪ್ರಾಣಿಗಳನ್ನೂ, ಸರೀಸೃಪಸ್ಥಾಣು ಮುಂತಾದ ಸ್ಥಾವರಜಂಗಮ ಪ್ರಾಣಿಗಳಿಂದ ಕೂಡಿದ, ಈ ಕಾಣುತ್ತಿರುವ ಪ್ರಪಂಚವನ್ನೂ, ಸ್ವತಂತ್ರರಾಗಿ ಕಾಪಾಡಲು ಶಕ್ತರಾಗಲಿಲ್ಲ! ಈ ವಿಷಯದಲ್ಲಿ ಶ್ರುತಿಯಲ್ಲಿ " ತಾ ಅಹಿಂಸತಾಹಮುಕ್ಥಮಸ್ಮ್ಯಹಮುಕ್ಥಮಸ್ಮಿ " ಇತ್ಯಾದಿಯಾಗಿ ಹೇಳಿರುವುದು. ಆದುದರಿಂದ ನೀನೊಬ್ಬನೇ ಪ್ರಾಣರೂಪದಿಂದ ಸಕಲ ಪ್ರಾಣಿಗಳನ್ನೂ ರಕ್ಷಿಸುವವನಾಗಿಯೂ ಈಶ್ವರನಾಗಿಯೂ ಇರುತ್ತೀಯೆ. ||೨೦||

ಉತ್ಪತ್ತಿರಹಿತನಾದ ನೀನು ಅನೇಕ ಅಲೆಗಳಿಂದ ಕೂಡಿದ ಪ್ರಳಯಕಾಲದ ಸಮುದ್ರದಲ್ಲಿ ಓಷಧಿಗಳು ಬಳ್ಳಿಗಳು ಇವುಗಳಿಗೆ ಆಶ್ರಯವಾದ ಈ ಭೂಮಿಯನ್ನು ನನ್ನೊಡನೆ ಧರಿಸಿಕೊಂಡು ನಿನ್ನ ಶಕ್ತಿಯಿಂದಲೇ ಸಂಚರಿಸುವೆ. ಜಗತ್ತಿನಲ್ಲಿರುವ ಪ್ರಾಣಿಗಳ ಸಮೂಹಕ್ಕೆ ಆತ್ಮಸ್ವರೂಪನಾದ ನಿನಗೆ ನಮಸ್ಕಾರವು. ||೨೧||

ಏವಂಸ್ತೌತಿ ಚ ದೇವೇಶಂ ಮನುಃ ಪಾರ್ಥಿವಸತ್ತಮಃ ।
ಮತ್ಸ್ಯಾವತಾರಂ ದೇವೇಶಂ ಸಂಶಯಚ್ಛೇದಕಾರಣಂ ॥೨೨॥

ಧ್ಯಾನಯೋಗೇನ ದೇವಸ್ಯ ನಿರ್ಧೂತಾಶೇಷಕಲ್ಮಷಃ ।
ಆಸ್ತೇ ಪರಿಚರನ್ ಭಕ್ತ್ಯಾ ಮಹಾಭಾಗವತೋತ್ತಮಃ ॥೨೩॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಅಷ್ಟಮಸ್ಕಂಧೇ
ನವಮೋಽಧ್ಯಾಯಃ.

---

ರಾಜರಲ್ಲಿ ಶ್ರೇಷ್ಠನಾದ ಆ ಮನುವು ಮತ್ಸ್ಯಾವತಾರ ಮಾಡಿದ, ಸಕಲರ ಸಂದೇಹವನ್ನೂ ನಾಶಮಾಡಲು ಸಾಮರ್ಥ್ಯವುಳ್ಳ, ಕಾರಣನಾದ, ದೇವತೆಗಳಿಗೆಲ್ಲರಿಗೂ ಒಡೆಯನಾದ, ಆ ಮತ್ಸ್ಯಮೂರ್ತಿಯನ್ನು ಈ ರೀತಿಯಲ್ಲಿ ಸ್ತೋತ್ರಮಾಡಿದನು. ॥೨೨॥

ಭಗವದ್ಭಕ್ತರಲ್ಲಿ ಶ್ರೇಷ್ಠನಾದ ಆ ಮನುಚಕ್ರವರ್ತಿಯು ದೇವನಾದ ಮತ್ಸ್ಯಮೂರ್ತಿಯ ಧ್ಯಾನದಿಂದ ಸಮಸ್ತ ಪಾಪಗಳನ್ನೂ ಕಳೆದುಕೊಂಡು ಶುದ್ಧನಾಗಿ ಭಕ್ತಿಯಿಂದ ಅವನನ್ನು ಪೂಜಿಸುತ್ತಿರುವನು. ॥೨೩॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಎಂಟನೆಯ ಸ್ಕಂಧದಲ್ಲಿ
ಒಂಬತ್ತನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಅಷ್ಟಮಸ್ಕಂಧೇ

### || ದಶಮೋಽಧ್ಯಾಯಃ ||

### ಹತ್ತನೆಯ ಅಧ್ಯಾಯವು

|| ಶ್ರೀನಾರಾಯಣ ಉವಾಚ ||

**ಹಿರಣ್ಮಯೇ ನಾಮ ವರ್ಷೇ ಭಗವಾನ್ಕೂರ್ಮರೂಪಧೃಕ್ ।**
**ಆಸ್ತೇ ಯೋಗಪತಿಃ ಸೋಽಯಮರ್ಯಮ್ಣಾ ಪೂಜ್ಯ ಈಡ್ಯತೇ ॥೧॥**

|| ಅರ್ಯಮೋವಾಚ ||

**ಓಂ ನಮೋ ಭಗವತೇ ಅಕೂಪಾರಾಯ ಸರ್ವಸತ್ವಗುಣ**
**ವಿಶೇಷಣಾಯ ನೋಪಲಕ್ಷಿತಸ್ಥಾನಾಯ ನಮೋವರ್ಷ್ಮಣೇ**
**ನಮೋಭೂಮ್ನೇ ನಮೋಽವಸ್ಥಾನಾಯ ನಮಸ್ತೇ ॥**

---

ಹಿರಣ್ಮಯವೆಂಬ ವರ್ಷದಲ್ಲಿ ಪರಮಾತ್ಮನು ಕೂರ್ಮಾವತಾರವನ್ನು ಮಾಡಿ ಯೋಗೇಶ್ವರನಾಗಿರುವನು. ಆ ದೇವನನ್ನು ಪಿತೃಗಣಾಧಿಪತಿಯಾದ ಅರ್ಯಮನು ಪೂಜಿಸಿ ಸ್ತೋತ್ರಮಾಡುತ್ತಿರುವನು. ||೧||

ಇದು ಹಿರಣ್ಮಯ ವರ್ಷಾಧಿಪತಿಯಾದ ಕೂರ್ಮಾವತಾರ ಮಾಡಿದ ದೇವನ ಮಂತ್ರವು. ಮಹಾಮಹಿಮನೂ, ಸಂಪೂರ್ಣ ಸತ್ವಗುಣದಿಂದ ಕೂಡಿದವನೂ, ಸಮುದ್ರದಲ್ಲಿ ಸಂಚರಿಸುತ್ತಿರುವುದರಿಂದ ಒಂದು ಗೊತ್ತಾದ ಸ್ಥಾನವಿಲ್ಲದವನೂ, ದೊಡ್ಡ ಶರೀರವುಳ್ಳವನೂ, ಕಾಲಪರಿಮಾಣಕ್ಕೆ ಸಿಕ್ಕದವನೂ, ಸರ್ವವ್ಯಾಪಿಯೂ ಆದ ಕೂರ್ಮದೇವನಿಗೆ ನಮಸ್ಕಾರವು ಎಂಬುದೇ ಇದರ ಅರ್ಥವು.

ಯದ್ರೂಪಮೇತನ್ನಿಜಮಾಯಯಾಽರ್ಪಿತಂ ।
ಅರ್ಥಸ್ವರೂಪಂ ಬಹುರೂಪರೂಪಿತಂ ॥
ಸಂಖ್ಯಾ ನ ಯಸ್ಯಾಸ್ತ್ಯಯಥೋಪಲಂಭನಾತ್ ।
ತಸ್ಮೈನಮಸ್ತೇಽವ್ಯಪದೇಶರೂಪಿಣೇ ॥೨॥

ಜರಾಯುಜಂ ಸ್ವೇದಜಮಂಡಜೋದ್ಭಿದಂ ।
ಚರಾಚರಂ ದೇವರ್ಷಿಪಿತೃಭೂತಮೈಂದ್ರಿಯಂ ॥
ದ್ಯೌಃ ಖಂ ಕ್ಷಿತಿಃ ಶೈಲಸರಿತ್ಸಮುದ್ರಂ ।
ದ್ವೀಪಗ್ರಹರ್ಕ್ಷೇತ್ಯಭಿಧೇಯ ಏಕಃ ॥೩॥

ಯಸ್ಮಿನ್ನಸಂಖ್ಯೇಯ ವಿಶೇಷನಾಮ ।
ರೂಪಾಕೃತೌ ಕವಿಭಿಃ ಕಲ್ಪಿತೇಯಂ ॥
ಸಂಖ್ಯಾ ಯಯಾ ತತ್ವದೃಶಾಽಪನೀಯತೇ ।
ತಸ್ಮೈನಮಃ ಸಾಂಖ್ಯ ನಿದರ್ಶನಾಯ ತೇ ॥೪॥

---

ಅನೇಕ ಆಕಾರಗಳನ್ನು ಧರಿಸಿದ ಭೂಮ್ಯಾದಿ ಪದಾರ್ಥಗಳ ಸ್ವರೂಪದಿಂದಿರುವ ಈ ಪ್ರಪಂಚವು ನಿನ್ನ ಮಾಯಾಶಕ್ತಿಯಿಂದ ಪ್ರಕಟವಾಗಿರುವುದು. ಅದು ಮಿಥ್ಯಾವಸ್ತುವಾದುದರಿಂದ ಬಿಸಿಲ್ಗುದುರೆಯ ನೀರಿನಂತೆ ಆ ಪ್ರಪಂಚಗಳನ್ನು ಲೆಕ್ಕ ಮಾಡಲಾಗುವುದಿಲ್ಲ. ಆದರೂ ಆ ಪ್ರಪಂಚಗಳೂ ನಿನಗಿಂತ ಬೇರೆಯಾದವುಗಳಲ್ಲ. ಹೇಳಲಸಾಧ್ಯವಾದ ಪ್ರಪಂಚಾಕಾರನಾದ ನಿನಗೆ ನಮಸ್ಕಾರವು. ||೨||

ಜರಾಯುವೆಂಬ ಗರ್ಭಕೋಶದಿಂದ ಹುಟ್ಟುವ ಪ್ರಾಣಿಗಳೂ, ಬೆವರಿನಿಂದ ಹುಟ್ಟುವ ಸೊಳ್ಳೆ ಮುಂತಾದುವೂ, ಮೊಟ್ಟೆಯಿಂದ ಹುಟ್ಟುವ ಪಕ್ಷಿಗಳೂ, ಭೂಮಿಯಲ್ಲಿ ಹುಟ್ಟುವ ವೃಕ್ಷಾದಿಗಳೂ ಸಕಲ ಚರಾಚರಪ್ರಾಣಿಗಳೂ ದೇವತೆಗಳೂ ಋಷಿಗಳೂ ಪಿತೃದೇವತೆಗಳೂ ಪಂಚಭೂತಗಳೂ ಇಂದ್ರಿಯಗಳೂ ಪರ್ವತ ಸಮುದ್ರ ದ್ವೀಪ ಗ್ರಹಗಳು ನಕ್ಷತ್ರಗಳು ಇವುಗಳೆಲ್ಲವೂ ನೀನೇ ಆಗಿರುವೆ. ನಿನ್ನನ್ನು ಬಿಟ್ಟು ಬೇರೆಯಾದುದು ಯಾವುದೂ ಇರುವುದಿಲ್ಲ. "ಸರ್ವಂ ಖಲ್ವಿದಂ ಬ್ರಹ್ಮ" ಎಂದು ವೇದವು ಹೇಳಿರುವುದು. ||೩||

ಲೆಕ್ಕವಿಲ್ಲದಷ್ಟು ನಾಮರೂಪ ಆಕೃತಿಗಳುಳ್ಳ ನಿನ್ನಲ್ಲಿ ಕಪಿಲಾದಿ ಮುನಿಗಳಿಂದ ಕಲ್ಪಿತವಾದ ಇಪ್ಪತ್ತುನಾಲ್ಕು ತತ್ವರೂಪವಾದ ಸಂಖ್ಯಾಜ್ಞಾನವೂ, ಯಾವ ನಿನ್ನ

ಏವಂ ಸ್ತುವತಿ ದೇವೇಶಮರ್ಯಮಾ ಸಹ ವರ್ಷಪೈಃ ।
ಗೀಯತೇ ಚಾಪಿ ಭಜತೇ ಸರ್ವಭೂತಭವಂ ಪ್ರಭುಂ ॥೫॥

ತಥೋತ್ತರೇಷು ಕುರುಷು ಭಗವಾನ್ಯಜ್ಞಪೂರುಷಃ ।
ಆದಿವಾರಾಹರೂಪೋಽಸೌ ಧರಣ್ಯಾ ಪೂಜ್ಯತೇ ಸದಾ ॥೬॥

ಸಂಪೂಜ್ಯ ವಿಧಿವದ್ದೇವಂ ತದ್ಭಕ್ತ್ಯಾಽದ್ರ್ರಾಽದ್ರ ಹೃತ್ಕಜಾ ।
ಭೂಮಿಃ ಸ್ತೌತಿ ಹರಿಂ ಯಜ್ಞವಾರಾಹಂ ದೈತ್ಯಮರ್ದನಂ ॥೭॥

॥ ಭೂರುವಾಚ ॥

ಓಂ ನಮೋ ಭಗವತೇ ಮಂತ್ರತತ್ವಲಿಂಗಾಯ ಯಜ್ಞಕ್ರತವೇ ಮಹಾಧ್ವರಾವಯವಾಯ ಮಹಾವರಾಹಾಯ ನಮಃ ಕರ್ಮಶುಕ್ಲಾಯ ತ್ರಿಯುಗಾಯ ನಮಸ್ತೇ ॥೮॥

---

ತತ್ವಜ್ಞಾನದಿಂದ ನಾಶವಾಗುವುದೋ ಅಂತಹ ಸಾಂಖ್ಯಸಿದ್ಧಾಂತರೂಪವಾದ ಪರಮಾರ್ಥರೂಪನಾದ ನಿನಗೆ ನಮಸ್ಕಾರವು. ॥೪॥

ಸಮಸ್ತ ಪ್ರಾಣಿಗಳಿಗೂ ಉತ್ಪತ್ತಿಕಾರಣನಾದ ಕೂರ್ಮಮೂರ್ತಿಯನ್ನು ಅರ್ಯಮನು ಆ ವರ್ಷಾಧಿಪತಿಗಳೊಡನೆ ಕೂಡಿ ಈ ರೀತಿಯಲ್ಲಿ ಸ್ತೋತ್ರಮಾಡಿ ಗಾನಮಾಡಿ ಪೂಜಿಸುತ್ತಿರುವನು. ॥೫॥

ಹಾಗೆಯೇ ಉತ್ತರ ಕುರುದೇಶದಲ್ಲಿ ಯಜ್ಞಪುರುಷನಾದ ವಿಷ್ಣುವು ಆದಿವರಾಹರೂಪದಿಂದ ಯಾವಾಗಲೂ ಭೂದೇವಿಯ ಪೂಜೆಯನ್ನು ಕೈಗೊಳ್ಳುತ್ತಿರುವನು. ॥೬॥

ಭೂದೇವಿಯು ತಮನೆಂಬ ದೈತ್ಯನನ್ನು ನಾಶಮಾಡಿದ ಯಜ್ಞವರಾಹನನ್ನು ವೇದವಿಧಿಗನುಸಾರವಾಗಿ ಪೂಜಿಸಿ ಆ ದೇವನಲ್ಲಿರುವ ಭಕ್ತಿಯಿಂದ ನೆನೆದ ಹೃದಯಕಮಲ ಉಳ್ಳವಳಾಗಿ ಅವನನ್ನು ಸ್ತೋತ್ರಮಾಡುತ್ತಿರುವಳು. ॥೭॥

ಇದು ವರಾಹಮೂರ್ತಿಯ ಜಪಧ್ಯಾನಮಂತ್ರವು. ಮಹಾಮಹಿಮಾಶಾಲಿಯೂ, ಮಂತ್ರಾರ್ಥಜ್ಞಾನದಿಂದ ತಿಳಿಯಲ್ಪಡತಕ್ಕವನೂ, ಯೂಪಸ್ತಂಭವಿಲ್ಲದ ಯಜ್ಞಗಳೂ ಯೂಪಸ್ತಂಭಸಹಿತವಾದ ಕ್ರತುಗಳೂ ಕೂಡಿ ಮಹಾಯಜ್ಞಸ್ವರೂಪವಾದ ಅವಯವಗಳುಳ್ಳವನೂ, ಪರಿಶುದ್ಧವಾದ ಕರ್ಮಗಳನ್ನು ಆಚರಿಸುವವನೂ, ಕೃತಯುಗದಲ್ಲಿ ಯಜ್ಞವಿಲ್ಲದುದರಿಂದ ಅದನ್ನು ಬಿಟ್ಟು ಮೂರು ಯುಗಗಳುಳ್ಳ

ಯಸ್ಯ ಸ್ವರೂಪಂ ಕವಯೋ ವಿಪಶ್ಚಿತೋ ।
ಗುಣೇಷು ದಾರುಷ್ವಿವ ಜಾತವೇದಸಂ ॥
ಮಥ್ನಂತಿ ಮಥ್ನಾ ಮನಸಾ ದಿದೃಕ್ಷವೋ ।
ಗೂಢಂ ಕ್ರಿಯಾರ್ಥೈರ್ನಮ ಈರಿತಾತ್ಮನೇ ॥೯॥

ದ್ರವ್ಯಕ್ರಿಯಾಹೇತ್ವಯನೇಶಕರ್ತೃಭಿ ।
ರ್ಮಾಯಾಗುಣೈರ್ವಸ್ತುಭಿರೀಕ್ಷಿತಾತ್ಮನೇ ॥
ಅನ್ವೀಕ್ಷಯಾಂಗಾತಿ ಶಯಾತ್ಮಬುದ್ಧಿಭಿ ।
ರ್ನಿರಸ್ತಮಾಯಾಽಽಕೃತಯೇ ನಮೋಽಸ್ತು ತೇ ॥೧೦॥

ಕರೋತಿ ವಿಶ್ವಸ್ಥಿತಿಸಂಯಮೋದಯಂ ।
ಯಸ್ಯೇಪ್ಸಿತಂ ನೇಪ್ಸಿತುಮೀಕ್ಷಿತುರ್ಗುಣೈಃ ॥

---

ವನೂ, ಅಥವಾ ಕಲಿಯುಗದಲ್ಲಿ ನೀನು ಗೋಚರಿಸದಿರುವುದರಿಂದ ಅದನ್ನು ಬಿಟ್ಟು ಮೂರು ಯುಗಗಳುಳ್ಳವನೂ, ಮಹಾವರಾಹಸ್ವರೂಪನೂ ಆದ ನಿನಗೆ ನಮಸ್ಕಾರವು. ಎಂದು ಇದರ ಅರ್ಥವು. ||೮||

ಬುದ್ಧಿವಂತರಾದ ಕವಿಗಳು ಕರ್ಮಗಳಿಂದಲೂ ಅವುಗಳ ಫಲಗಳಿಂದಲೂ ಪ್ರಕಟವಾಗದಿರುವ ನಿನ್ನ ಸ್ವರೂಪವನ್ನು ನೋಡಬೇಕೆಂಬ ಅಪೇಕ್ಷೆಯಿಂದ, ಅಗ್ನಿಯನ್ನು ಪಡೆಯಲು ಕಟ್ಟಿಗೆ (ಅರಣಿ)ಯನ್ನು ಮಥನಮಾಡುವಂತೆ, ದೇಹೇಂದ್ರಿಯಗಳಲ್ಲಿ ಮನಸ್ಸೆಂಬ ಕಡೆಗೋಲಿನಿಂದ ಮಥನಮಾಡುತ್ತಿರುವರು. ಎಂದರೆ ವಿವೇಕಕ್ಕೆ ಸಾಧನವಾದ ಮನಸ್ಸಿನಿಂದ ವಿಚಾರಮಾಡುತ್ತಿರುವರು. ||೯||

ದ್ರವ್ಯ (ವಿಷಯ) ಕ್ರಿಯಾ (ಇಂದ್ರಿಯ ವ್ಯಾಪಾರಗಳು) ಹೇತು (ದೇವತೆ) ಅಯನ (ದೇಹ) ಈಶ (ಕಾಲ) ಕರ್ತೃ (ಅಹಂಕಾರ) ಎಂಬ ಈ ಮಾಯಾಗುಣಗಳಿಂದ ವಸ್ತುರೂಪನಾಗಿ ಸಿದ್ಧಾಂತಮಾಡಿದ ಆತ್ಮಸ್ವರೂಪನೂ, ತರ್ಕದಿಂದಲೂ ಯಮನಿಯಮಾದಿ ಯೋಗಾಂಗಗಳಿಂದಲೂ ಕೂಡಿದ ಸೂಕ್ಷ್ಮಬುದ್ಧಿಯುಳ್ಳವರಿಂದ ದೂರಮಾಡಿದ ಮಾಯಾನಿರ್ಮಿತವಾದ ಅಜ್ಞಾನರೂಪವಾದ ಆಕಾರವುಳ್ಳವನೂ ಆದ ನಿನಗೆ ನಮಸ್ಕಾರವು. ||೧೦||

ಈಕ್ಷಣಕರ್ತೃವಾದ ಪರಮಾತ್ಮನ ಇಚ್ಛಾರೂಪವಾದ ಈಕ್ಷಣೆಯು ಪ್ರಕೃತಿಯ ಗುಣಗಳಿಂದ ಪ್ರಪಂಚದ ಉತ್ಪತ್ತಿ ಸ್ಥಿತಿ ಮುಂತಾದುವುಗಳನ್ನು ಮಾಡುತ್ತಿರುವುದು.

ಮಾಯಾ ಯಥಾ ಯೋ ಭ್ರಮತೇ ತದಾಶ್ರಯಂ ।
ಗ್ರಾವ್ಣೋ ನಮಸ್ತೇ ಗುಣಕರ್ಮಸಾಕ್ಷಿಣೇ ॥೧೧॥

ಪ್ರಮಥ್ಯ ದೈತ್ಯಂ ಪ್ರತಿವಾರಣಂ ಮೃಧೇ ।
ಯೋ ಮಾಂ ರಸಾಯಾ ಜಗದಾದಿಸೂಕರಃ ॥
ಕೃತ್ವಾಗ್ರದಂಷ್ಟ್ರಂ ನಿರಗಾದುದನ್ವತಃ ।
ಕ್ರೀಡನ್ನಿವೇಭಃ ಪ್ರಣತಾಽಸ್ಮಿ ತಂ ವಿಭುಂ ॥೧೨॥

ಕಿಂಪುರುಷೇ ವರ್ಷೇಽಸ್ಮಿನ್ಭಗವಂತಂ ದಾಶರಥಿಂ ಚ ಸರ್ವೇಶಂ ।
ಸೀತಾರಾಮಂ ದೇವಂ ಶ್ರೀಹನುಮಾನಾದಿಪೂರುಷಂ ಸ್ತೌತಿ ॥೧೩॥

॥ ಹನುಮಾನುವಾಚ ॥

ಓಂ ನಮೋ ಭಗವತೇ ಉತ್ತಮಶ್ಲೋಕಾಯ ನಮ ಇತಿ ॥
ಆರ್ಯಲಕ್ಷಣಶೀಲವ್ರತಾಯ ನಮ ಉಪಶಿಕ್ಷಿತಾತ್ಮನೇ

---

ಅಯಸ್ಕಾಂತಶಿಲೆಯ ಸನ್ನಿಧಾನದಿಂದ ಲೋಹವು ತಿರುಗುವಂತೆ, ಗುಣಗಳಿಗೂ ಜೀವ ಅದೃಷ್ಟ ಕರ್ಮ ಮುಂತಾದವುಗಳಿಗೂ ಸಾಕ್ಷಿಸ್ವರೂಪನಾದ ಆತ್ಮನ ಸನ್ನಿಧಾನದಿಂದ ಜಡವಾದ ಪ್ರಕೃತಿಯೂ ಸೃಷ್ಟಿ ಮುಂತಾದ ಕಾರ್ಯಗಳನ್ನು ಮಾಡುವುದು. ಅಂತಹ ಸಾಕ್ಷಿಸ್ವರೂಪನಾದ ನಿನಗೆ ನಮಸ್ಕಾರವು. ॥೧೧॥

ಪ್ರಪಂಚಕ್ಕೆ ಆದಿಕಾರಣನಾದ ವರಾಹರೂಪನಾದ ದೇವನು ಆನೆಯಂತಿರುವ ದೈತ್ಯನನ್ನು ಕೊಂದು ನನ್ನನ್ನು ತನ್ನ ಕೋರೆಹಲ್ಲುಗಳ ಮೇಲೆ ಧರಿಸಿ ರಸಾತಲದಿಂದ ಎತ್ತಿ, ಆನೆಯಂತೆ ಕ್ರೀಡಿಸುತ್ತಾ, ಪ್ರಳಯಸಮುದ್ರದ ದೆಸೆಯಿಂದ ಹೊರಗೆ ಬಂದನು. ಅಂತಹ ದೇವನಿಗೆ ನಾನು ನಮಸ್ಕಾರ ಮಾಡುವೆನು. ॥೧೨॥

ಕಿಂಪುರುಷ ವರ್ಷದಲ್ಲಿ ಮಹಾಮಹಿಮನೂ ಸರ್ವೇಶ್ವರನೂ ಆದಿಪುರುಷನೂ ಆದ ದಶರಥಪುತ್ರನಾದ ದೇವನಾದ ಸೀತಾರಾಮನನ್ನು ಹನುಮಂತನು ಸ್ತೋತ್ರ ಮಾಡುತ್ತಿರುವನು. ॥೧೩॥

ಇದು ಶ್ರೀರಾಮಮಂತ್ರ. ಮಹಾಮಹಿಮನಾದ ಉತ್ತಮವಾದ ಕೀರ್ತಿಯುಳ್ಳವನಿಗೆ ನಮಸ್ಕಾರವು. ಪೂಜ್ಯವಾದ ಲಕ್ಷಣಗಳೂ ನಡತೆಗಳೂ ವ್ರತಗಳೂ ಉಳ್ಳ ನಿನಗೆ ನಮಸ್ಕಾರವು. ಮನೋನಿಗ್ರಹವುಳ್ಳ, ಲೋಕದ ಜನರ ಸೇವೆಯನ್ನು ಸ್ವೀಕರಿ

ಉಪಾಸಿತಲೋಕಾಯ ನಮಃ ॥ ಸಾಧುವಾದ ನಿಕಷಣಾಯ
ನಮೋ ಬ್ರಹ್ಮಣ್ಯದೇವಾಯ ಮಹಾಪುರುಷಾಯ ಮಹಾ
ಭಾಗಾಯ ನಮ ಇತಿ ॥

ಯತ್ತದ್ವಿಶುದ್ಧಾನುಭವಾತ್ಮಮೇಕಂ ।
ಸ್ವತೇಜಸಾ ಧ್ವಸ್ತಗುಣವ್ಯವಸ್ಥಂ ॥
ಪ್ರತ್ಯಕ್ ಪ್ರಶಾಂತಂ ಸುಧಿಯೋಪಲಂಭನಂ ।
ಹ್ಯನಾಮರೂಪಂ ನಿರಹಂ ಪ್ರಪದ್ಯೇ ॥೧೪॥

ಮರ್ತ್ಯಾವತಾರಸ್ತ್ವಿಹ ಮರ್ತ್ಯಶಿಕ್ಷಣಂ ।
ರಕ್ಷೋವಧಾಯೈವ ನ ಕೇವಲಂ ವಿಭೋಃ ॥
ಕುತೋಽನ್ಯಥಾ ಸ್ಯಾದ್ರಮತಃ ಸ್ವಆತ್ಮನಃ ।
ಸೀತಾಕೃತಾನಿ ವ್ಯಸನಾನೀಶ್ವರಸ್ಯ ॥೧೫॥

---

ಸುವ ನಿನಗೆ ನಮಸ್ಕಾರವು. ಸಜ್ಜನನೆಂಬ ಪ್ರಸಿದ್ಧಿಗೆ ಒರೆಗಲ್ಲಿನಂತಿರುವ ಪರಬ್ರಹ್ಮ ಸ್ವರೂಪನೂ ಪುಣ್ಯವಂತನೂ ಮಹಾಪುರುಷನೂ ಆದ ನಿನಗೆ ನಮಸ್ಕಾರವು. ಎಂದು ಅರ್ಥವು.

ಪರಿಶುದ್ಧವಾದ ಆತ್ಮಾನುಭವಸ್ವರೂಪನೂ, ಶಾಂತನೂ, ತನ್ನ ಸ್ವಸ್ವರೂಪ ಪ್ರಕಾಶದಿಂದ ನಾಶಮಾಡಿದ ಜಾಗ್ರದಾದಿ ಗುಣವ್ಯವಸ್ಥೆಯುಳ್ಳವನೂ, ಸರ್ವಾಂತ ರನೂ, ನಾಮರೂಪಗಳಿಲ್ಲದವನೂ, ಅಹಂಕಾರರಹಿತನೂ, ಸಜ್ಜನರಿಗೆ ಆಶ್ರಯನೂ, ಏಕನೂ, ಆದ ನಿನ್ನನ್ನು ಶರಣುಹೊಂದುವೆನು. ॥೧೪॥

ಹಾಗಾದರೆ ಇಂತಹ ಶ್ರೀರಾಮನಿಗೆ ಸಾಮಾನ್ಯ ಜೀವನಿಗುಂಟಾಗುವ ಸಂಸಾರ ದುಃಖಗಳು ಹೇಗೆ ಉಂಟಾದುವು ಎಂದರೆ—ಆ ಪರಮಾತ್ಮನು ರಾಕ್ಷಸನಾದ ರಾವಣನನ್ನು ಕೊಲ್ಲುವುದಕ್ಕಾಗಿಯೇ ಮನುಷ್ಯಾವತಾರವನ್ನು ಮಾಡಿದನು. ಏಕೆಂದರೆ ಮನುಷ್ಯನಿಂದಲೇ ರಾವಣನ ವಧೆಯಾಗಬೇಕಾಗಿದ್ದಿತು. ಸಂಸಾರದಲ್ಲಿ ಸ್ತ್ರೀಸಂಗಾದಿಗಳಿಂದ ಉಂಟಾದ ದುಃಖವನ್ನು ನಿವಾರಣೆ ಮಾಡಲು ಅಸಾಧ್ಯವೆಂದು ಜನರಿಗೆ ತಿಳಿವಳಿಕೆಯನ್ನು ಕೊಡುವುದಕ್ಕಾಗಿಯೇ ಸೀತೆಯ ವಿರಹದಿಂದುಂಟಾದ ದುಃಖಗಳನ್ನು ಅನುಭವಿಸಿದನು. ಹಾಗಿಲ್ಲದಿದ್ದರೆ ಸ್ವಾತ್ಮಾನಂದದಲ್ಲಿರುವ ಈಶ್ವರನಿಗೆ ದುಃಖವೆಲ್ಲಿಯದು ? ॥೧೫॥

ನ ವೈ ಸ ಆತ್ಮಾಽಽತ್ಮವತಾಂ ಸುಹೃತ್ತಮಃ ।
ಸಕ್ತಸ್ತ್ರಿಲೋಕ್ಯಾಂ ಭಗವಾನ್ವಾಸುದೇವಃ ॥
ನ ಸ್ತ್ರೀಕೃತಂ ಕಶ್ಮಲಮಶ್ನುವೀತ ।
ನ ಲಕ್ಷ್ಮಣಂ ಚಾಪಿ ವಿಹಾತುಮರ್ಹತಿ ॥೧೬॥

ನ ಜನ್ಮ ನೂನಂ ಮಹತೋ ನ ಸೌಭಗಂ ।
ನ ವಾಙ್ನ ಬುದ್ಧಿರ್ನಾಕೃತಿಸ್ತೋಷಹೇತುಃ ॥
ತೈರ್ಯದ್ವಿಸೃಷ್ಟಾನಪಿ ನೋ ವನೌಕಸ ।
ಶ್ಚಕಾರ ಸಖ್ಯೇ ಬತ ಲಕ್ಷ್ಮಣಾಗ್ರಜಃ ॥೧೭॥

ಸುರೋಽಸುರೋ ವಾಽಪ್ಯಥ ವಾನರೋ ನರಃ ।
ಸರ್ವಾತ್ಮನಾ ಯಃಸುಕೃತಜ್ಞಮುತ್ತಮಂ ॥
ಭಜೇತ ರಾಮಂ ಮನುಜಾಕೃತಿಂ ಹರಿಂ ।
ಯ ಉತ್ತರಾನನಯತ್ಕೋಸಲಾನ್ ದಿವಂ ॥೧೮॥

---

ಆ ಭಗವಂತನು ಆತ್ಮಜ್ಞಾನಿಗಳಿಗೆ ಅತ್ಯಂತ ಸ್ನೇಹಿತನಾದುದರಿಂದ ಮೂರು ಲೋಕದ ಯಾವ ಭೋಗಗಳಲ್ಲೂ ಆಸಕ್ತನಾಗಲಾರನು. ಸ್ತ್ರೀ ಸಂಬಂಧವಾದ ದುಷ್ಟಫಲಗಳನ್ನು ಅನುಭವಿಸಲಾರನು. ಲಕ್ಷ್ಮಣನನ್ನೂ ತ್ಯಾಗಮಾಡಲು ಯೋಗ್ಯನಾಗಲಾರನು. ಆದುದರಿಂದ ಆ ರಾಮನು ಮಾಡಿದ ಕೆಲಸಗಳೆಲ್ಲವೂ ಒಳ್ಳೆಯ ನಡತೆಯ ಮಾದರಿಯನ್ನು ತೋರಿಸುವುದರಿಂದ ಲೋಕಶಿಕ್ಷಣೆಗೆಂದು ತಿಳಿಯಬೇಕು. ||೧೬||

ಮಹಾತ್ಮರಿಗೆ ಉತ್ತಮವಂಶದಲ್ಲಿ ಹುಟ್ಟುವುದು, ಸಂಪತ್ತು, ಮಾತು, ಬುದ್ಧಿ, ಕಾರ್ಯ ಇವುಗಳು ಸಂತೋಷಕಾರಣಗಳಾಗಲಾರವು. ಭಕ್ತಿಯೊಂದೇ ಸಂತೋಷ ಕಾರಣವು. ಲಕ್ಷ್ಮಣನ ಅಣ್ಣನಾದ ರಾಮನು ಮೇಲೆ ಹೇಳಿದ ಗುಣಗಳಿಲ್ಲದ ಕಪಿಯಾದ ಸುಗ್ರೀವನ ಸ್ನೇಹವನ್ನು ಮಾಡಲಿಲ್ಲವೆ? ಅವನಲ್ಲಿದ್ದುದು ಭಕ್ತಿಗುಣವೊಂದೇ. ||೧೭||

ಆದುದರಿಂದ ಅಲ್ಪವಾದ ಭಕ್ತಿಯನ್ನು ಮಾಡಿದರೂ ಸಂತೋಷಪಡುವ ಮನುಷ್ಯಾವತಾರಮಾಡಿದ ಹರಿಯಾದ ರಾಮನನ್ನು ದೇವತೆಗಳಾಗಲಿ ರಾಕ್ಷಸರಾಗಲಿ

|| ನಾರಾಯಣ ಉವಾಚ ||

ಏವಂ ಕಿಂಪುರುಷೇ ವರ್ಷೇ ಸತ್ಯಸಂಧಂ ದೃಢವ್ರತಂ ।
ರಾಮಂ ರಾಜೀವಪತ್ರಾಕ್ಷಂ ಹನುಮಾನ್ವಾನರೋತ್ತಮಃ ॥೧೯॥

ಸ್ತೌತಿ ಗಾಯತಿ ಭಕ್ತ್ಯಾ ಚ ಸಂಪೂಜಯತಿ ಸರ್ವಶಃ ।
ಯ ಏತಚ್ಛೃಣುಯಾಚ್ಚಿತ್ರಂ ರಾಮಚಂದ್ರಕಥಾನಕಂ ॥೨೦॥
ಸರ್ವಪಾಪವಿಶುದ್ಧಾತ್ಮಾ ಯಾತಿ ರಾಮಸಲೋಕತಾಂ ।

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಅಷ್ಟಮಸ್ಕಂಧೇ
ದಶಮೋಽಧ್ಯಾಯಃ

---

ವಾನರರಾಗಲಿ ನರರಾಗಲಿ ಸಂಪೂರ್ಣ ಭಕ್ತಿಯಿಂದ ಸೇವಿಸಿದರೆ ಉತ್ತರಕೋಸಲ ದೇಶದಲ್ಲಿರುವ ಸಕಲರೂ ಸ್ವರ್ಗಕ್ಕೆ ಹೋಗಲು ಶಕ್ತರಾಗುವರು. ||೧೮||

ನಾರಾಯಣನು ಹೇಳಿದನು—ಹೀಗೆ ಕಿಂಪುರುಷವರ್ಷದಲ್ಲಿ ಸತ್ಯಪ್ರತಿಜ್ಞೆಯುಳ್ಳವನೂ, ಹಿಡಿದ ವ್ರತವನ್ನು ದೃಢವಾಗಿ ನೆರವೇರಿಸುವನೂ, ಆದ ಕಮಲದಳದಂತೆ ಕಣ್ಣುಗಳುಳ್ಳ ರಾಮನನ್ನು ಕಪಿಶ್ರೇಷ್ಠನಾದ ಹನುಮಂತನು ಭಕ್ತಿಯಿಂದ ಪೂಜಿಸಿ ಗಾನಮಾಡಿ ಸ್ತೋತ್ರಮಾಡುತ್ತಿರುವನು. ಆಶ್ಚರ್ಯಕರವಾದ ಈ ರಾಮಚಂದ್ರನ ಕಥೆಯನ್ನು ಕೇಳಿದವರು ತಮ್ಮ ಪಾಪಗಳನ್ನೆಲ್ಲವನ್ನೂ ಕಳೆದುಕೊಂಡು ಶುದ್ಧರಾಗಿ ರಾಮನೊಡನೆ ಸಾಲೋಕ್ಯಮುಕ್ತಿಯನ್ನು ಹೊಂದುವರು. ||೧೯-೨೦||

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಎಂಟನೆಯ ಸ್ಕಂಧದಲ್ಲಿ
ಹತ್ತನೆಯ ಅಧ್ಯಾಯವು ಮುಗಿದುದು.

|| ಶ್ರೀ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಅಷ್ಟಮಸ್ಕಂಧೇ

### || ಏಕಾದಶೋಽಧ್ಯಾಯಃ ||

### ಹನ್ನೊಂದನೆಯ ಅಧ್ಯಾಯವು

|| ನಾರಾಯಣ ಉವಾಚ ||

**ಭಾರತಾಖ್ಯೇ ಚ ವರ್ಷೇಽಸ್ಮಿನ್ನಹಮಾದಿಜಪೂರುಷಃ ।**
**ತಿಷ್ಠಾಮಿ ಭವತಾ ಚೈವ ಸ್ತವನಂ ಕ್ರಿಯತೇಽನಿಶಂ ||೧||**

|| ನಾರದ ಉವಾಚ ||

**ಓಂ ನಮೋ ಭಗವತೇ ಉಪಶಮಶೀಲಾಯೋಪರತಾನಾತ್ಮ್ಯಾಯ ನಮೋಽಕಿಂಚನವಿತ್ತಾಯ ಋಷಿಋಷಭಾಯ ನರನಾರಾಯಣಾಯ ಪರಮಹಂಸ ಪರಮಗುರವೇ ಆತ್ಮಾರಾಮಾಧಿಪತಯೇ ನಮೋ ನಮಃ ಇತಿ ||**

---

ನಾರಾಯಣನು ಹೇಳಿದನು—ನಾರಾಯಣಋಷಿಯು ನಾರದನನ್ನು ಕುರಿತು ಎಲೈ ನಾರದನೇ, ಈ ಭಾರತ ವರ್ಷದಲ್ಲಿ ನಾನು ಇರುತ್ತೇನೆ. ನೀನು ಯಾವಾಗಲೂ ನನ್ನನ್ನು ಸ್ತೋತ್ರಮಾಡುತ್ತಿರುವೆ. ||೧||

ನಾರದನು ಹೇಳಿದನು -- ಶಾಂತಸ್ವಭಾವದವನೂ ಅಹಂಕಾರವಿಲ್ಲದವನೂ ಮನೋವೃತ್ತಿಯಿಲ್ಲದವನೂ ಋಷಿಗಳಲ್ಲಿ ಶ್ರೇಷ್ಠನೂ ಪರಿಶುದ್ಧಾತ್ಮನೂ ಗುರುಶ್ರೇಷ್ಠನೂ ಆತ್ಮಾನಂದವುಳ್ಳವರಲ್ಲಿ ಮುಖ್ಯನೂ ಉತ್ಪತ್ತಿ ನಾಶ ಮುಂತಾದ ಆರು ಅಂಶಗಳನ್ನು ತಿಳಿದವನೂ ಆದ ನರನಾರಾಯಣರೆಂಬ ಋಷಿಗಳಿಗೆ ನಮಸ್ಕಾರವು. ಇದು ನಾರದನು ಜಪಿಸುವ ಮಂತ್ರ.

ಕರ್ತಾಽಸ್ಯ ಸರ್ಗಾದಿಷು ಯೋ ನ ಬಧ್ಯತೇ
ನ ಹನ್ಯತೇ ದೇಹಗತೋಽಪಿ ದೈಹಿಕೈಃ ।
ದ್ರಷ್ಟುಃ ನ ದೃಗ್ಯಸ್ಯ ಗುಣೈ ರ್ವಿದೂಷ್ಯತೇ
ತಸ್ಮೈ ನಮೋಽಸಕ್ತ ವಿವಿಕ್ತ ಸಾಕ್ಷಿಣೇ ॥೨॥

ಇದಂ ಹಿ ಯೋಗೇಶ್ವರಯೋಗನೈಪುಣಂ
ಹಿರಣ್ಯಗರ್ಭೋ ಭಗವಾನ್ ಜಗಾದ ಯತ್ ।
ಯದಂತಕಾಲೇ ತ್ವಯಿ ನಿರ್ಗುಣೇ ಮನೋ
ಭಕ್ತ್ಯಾಽದಧೀತೋಜ್ಝಿತದುಷ್ಕಲೇ ವರಃ ॥೩॥

ಯಥೈಹಿಕಾಮುಷ್ಮಿಕಕಾಮಲಂಪಟಃ
ಸುತೇಷು ದಾರೇಷು ಧನೇಷು ಚಿಂತಯನ್ ।
ಶಂಕೇತ ವಿದ್ವಾನ್ಕುಕಲೇವರಾತ್ಯಯಾ
ದ್ಯಸ್ತಸ್ಯ ಯತ್ನಃ ಶ್ರಮ ಏವ ಕೇವಲಂ ॥೪॥

---

ಈ ಪ್ರಪಂಚವನ್ನು ಸೃಷ್ಟಿಮಾಡುವ ವಿಷಯದಲ್ಲಿ ತಾನು ಕರ್ತೃವಾದರೂ ತಾಫು ಕರ್ತೃವಲ್ಲವೆಂದು ತಿಳಿದಿರುವುದರಿಂದ ಅಸಕ್ತನೂ, ದೇಹದಲ್ಲಿದ್ದರೂ ಶರೀರಕ್ಕೆ ಸಂಬಂಧಿಸಿದ ಹಸಿವು ಬಾಯಾರಿಕೆ ಮೊದಲಾದುವುಗಳಿಂದ ನೋವನ್ನು ಹೊಂದ ದಿರುವುದರಿಂದ ವಿವಿಕ್ತನೂ, ತಾನು ನೋಡತಕ್ಕವನಾದರೂ ನೋಟಕ್ಕೆ ವಿಷಯ ವಾದ ವಸ್ತುಗಳಿಂದ ವಿಕಾರವಿಲ್ಲದವನಾದುದರಿಂದ ಸಾಕ್ಷಿಸ್ವರೂಪನೂ, ಆದ ನರನಾರಾಯಣರೆಂಬ ಋಷಿಗಳಿಗೆ ನಮಸ್ಕಾರವು. ॥೨॥

ಎಲೈ ಯೋಗಿಶ್ರೇಷ್ಠನಾದ ನಾರಾಯಣಋಷಿಯೇ, ಮನುಜನು ಹುಟ್ಟಿದ್ದು ಮೊದಲುಗೊಂಡು ಭಕ್ತಿಯಿಂದ ಕೊನೆಗಾಲದಲ್ಲಿ ಈ ಕೆಟ್ಟ ಶರೀರದ ಮೇಲಿನ ಅಭಿಮಾನವನ್ನು ಬಿಟ್ಟು ನಿರ್ಗುಣನಾದ ನಿನ್ನಲ್ಲಿ ಮನಸ್ಸನ್ನು ನೆಲೆಗೊಳಿಸಬೇಕೆಂಬ ಯೋಗಶಾಸ್ತ್ರದ ಗುಟ್ಟನ್ನು ಮಹಾತ್ಮನಾದ ಹಿರಣ್ಯಗರ್ಭಬ್ರಹ್ಮನು ಮೊದಲು ತಿಳಿಯ ಹೇಳಿದನು. ॥೩॥

ಭೂಲೋಕ ಮತ್ತು ಸ್ವರ್ಗಲೋಕದ ಸುಖಾನುಭವಗಳಲ್ಲಾಸಕ್ತನಾದ ಮೂಢನು ಮಕ್ಕಳು ಹೆಂಡಿತಿ ಹಣ ಇವುಗಳ ವಿಚಾರವನ್ನೇ ಚಿಂತಿಸುತ್ತಾ ಈ ಶರೀರವು ನಾಶವಾಗುವುದಲ್ಲಾ ಎಂದು ಹೇಗೆ ಆತಂಕ ಸಂದೇಹಪಡುತ್ತಿರುವನೋ,

ತನ್ನಃ ಪ್ರಭೋ ತ್ವಂ ಕುಕಲೇವರಾರ್ಪಿತಾಂ ।
ತ್ವಂ ಮಾಯಯಾಽಹಂಮಮತಾಂ ಅಧೋಕ್ಷಜ ॥
ಭಿಂದ್ಯಾಮ ಯೇನಾಶು ವಯಂ ಸುದುರ್ಭಿದಾಂ ।
ವಿಧೇಹಿ ಯೋಗಂ ತ್ವಯಿ ನಃ ಸ್ವಭಾವಂ ॥೫॥

ಏವಂ ಸ್ತೌತಿ ಸದಾ ದೇವಂ ನಾರಾಯಣಮನಾಮಯಂ ।
ನಾರದೋ ಮುನಿಶಾರ್ದೂಲಃ ಪ್ರಜ್ಞಾತಾಖಿಲಸಾರದೃಕ್ ॥೬॥

ಅಸ್ಮಿನ್ವೈ ಭಾರತೇ ವರ್ಷೇ ಸರಿಚ್ಛೈಲಾ ಸ್ತು ಸಂತಿ ಹಿ ।
ತಾನ್ಪ್ರವಕ್ಷ್ಯಾಮಿ ದೇವರ್ಷೇ ಶೃಣುಷ್ವೈಕಾಗ್ರಮಾನಸಃ ॥೭॥

ಮಲಯೋ ಮಂಗಲಪ್ರಸ್ಥೋ ಮೈನಾಕ ಶ್ಚ ತ್ರಿಕೂಟಕಃ ।
ಋಷಭಃ ಕುಟಕಃ ಕೋಲ್ಲಃ ಸಹ್ಯೋ ದೇವಗಿರಿ ಸ್ತಥಾ ॥೮॥

---

ಹಾಗೆಯೇ ವಿದ್ಯಾವಂತನೂ ಸಂದೇಹಪಟ್ಟರೆ ಅವನು ಮಾಡಿದ ಪ್ರಯತ್ನವೆಲ್ಲವೂ ಆಯಾಸಮಾತ್ರಫಲವುಳ್ಳದಾಗುವುದು. ಆಗಬೇಕಾದ ನಿಜವಾದ ಪ್ರಯೋಜನವಾಗಲಾರದು. ||೪||

ವಿದ್ವಾಂಸನಿಗೂ ಈ ಸ್ಥಿತಿಯುಂಟಾಗುವುದರಿಂದ ಇಂದ್ರಿಯಗಳನ್ನು ನಿಕೃಷ್ಟವಾಗೆಣಿಸಿದ ಎಲೈ ಗುರುವೇ, ನಿನ್ನಲ್ಲಿ ಸ್ವಾಭಾವಿಕವಾಗಿರುವ ಯೋಗವನ್ನು ನೀನೇ ನನಗೆ ಕರುಣಿಸು. ಮಾಯೆಯಿಂದ ಈ ಕೆಟ್ಟಶರೀರದಲ್ಲುಂಟಾದ ನಾನು ನನ್ನದು ಎಂಬ ಬಿಡಲು ಕಷ್ಟವಾದ ಅಭಿಮಾನವನ್ನು ಬೇಗನೆ ನಾಶಮಾಡಿಕೊಳ್ಳುವೆನು. ||೫||

ಮುನಿಶ್ರೇಷ್ಠನಾದ ಸಮಸ್ತ ಶಾಸ್ತ್ರಗಳ ಸಾರವನ್ನೂ ಬಲ್ಲ ನಾರದನು ಕಲ್ಮಷರಹಿತನೂ ಪರಬ್ರಹ್ಮಸ್ವರೂಪನೂ ಆದ ನಾರಾಯಣಋಷಿಯನ್ನು ಹೀಗೆ ಸ್ತೋತ್ರಮಾಡುತ್ತಿರಲು ಆ ನಾರಾಯಣಮುನಿಯು ನಾರದನನ್ನು ಕುರಿತು, ||೬||

ಎಲೈ ದೇವರ್ಷಿಯಾದ ನಾರದನೇ, ಈ ಭಾರತವರ್ಷದಲ್ಲಿರುವ ಪರ್ವತಗಳನ್ನೂ ನದಿಗಳನ್ನೂ ಹೇಳುವೆನು ಏಕಾಗ್ರಚಿತ್ತದಿಂದ ಕೇಳು. ||೭||

ಮಲಯ, ಮಂಗಲಪ್ರಸ್ಥ, ಮೈನಾಕ, ತ್ರಿಕೂಟ, ಋಷಭ, ಕುಟಕ, ಕೋಲ್ಲ, ಸಹ್ಯ, ದೇವಗಿರಿ, ಋಷ್ಯಮೂಕ, ಶ್ರೀಶೈಲ, ವೆಂಕಟಾದ್ರಿ, ಮಹೇಂದ್ರ, ವಾರಿಧಾರ,

ಋಷ್ಯಮೂಕಶ್ಚ ಶ್ರೀಶೈಲೋ ವೇಂಕಟಾದ್ರಿಃ ಮಹೇಂದ್ರಕಃ ।
ವಾರಿಧಾರಶ್ಚ ವಿಂಧ್ಯಶ್ಚ ಭುಕ್ತಿಮಾನ್ ಋಕ್ಷಪರ್ವತಃ ॥೯॥

ಪಾರಿಯಾತ್ರ ಸ್ತಥಾ ದ್ರೋಣಃ ಚಿತ್ರಕೂಟಗಿರಿಸ್ತಥಾ ।
ಗೋವರ್ಧನೋ ರೈವತಕಃ ಕಕುಭೋ ನೀಲಪರ್ವತಃ ॥೧೦॥

ಗೌರಮುಖಶ್ಚೇಂದ್ರಕೀಲೋ ಗಿರಿಃ ಕಾಮಗಿರಿ ಸ್ತಥಾ ।
ಏತೇ ಚಾನ್ಯೇಽಪ್ಯಸಂಖ್ಯಾಕಾ ಗಿರಯೋ ಬಹುಪುಣ್ಯದಾಃ ॥೧೧॥

ಏತದುತ್ಪನ್ನ ಸರಿತಃ ಶತಶೋಽಥ ಸಹಸ್ರಶಃ ।
ಪಾನಾವಗಾಹನಸ್ನಾನದರ್ಶನೋತ್ಕೀರ್ತನೈ ರಪಿ ॥೧೨॥

ನಾಶಯಂತಿ ಚ ಪಾಪಾನಿ ತ್ರಿವಿಧಾನಿ ಶರೀರಿಣಾಂ ।
ತಾಮ್ರಪರ್ಣೀ ಚಂದ್ರವಶಾ ಕೃತಮಾಲಾ ವಟೋದಕಾ ॥೧೩॥

ವೈಹಾಯಸೀ ಚ ಕಾವೇರೀ ವೇಣಾ ಚೈವ ಪಯಸ್ವಿನೀ ।
ತುಂಗಭದ್ರಾ ಕೃಷ್ಣವೇಣಾ ಶರ್ಕರಾವರ್ತಕಾ ತಥಾ ॥೧೪॥

ಗೋದಾವರೀ ಭೀಮರಥೀ ನಿರ್ವಿಂಧ್ಯಾ ಚ ಪಯೋಷ್ಣಿಕಾ ।
ತಾಪೀ ರೇವಾ ಚ ಸುರಸಾ ನರ್ಮದಾ ಚ ಸರಸ್ವತೀ ॥೧೫॥

ಚರ್ಮಣ್ವತೀ ಚ ಸಿಂಧು ಶ್ಚ ಅಂಧಶೋಣೌ ಮಹಾನದೌ ।
ಋಷಿಕುಲ್ಯಾ ತ್ರಿಸಾಮಾಚ ವೇದಸ್ಮೃತಿ ಮಹಾನದೀ ॥೧೬॥

---

ವಿಂಧ್ಯ, ಭುಕ್ತಿಮಾನ್, ಋಕ್ಷಪರ್ವತ, ಪಾರಿಯಾತ್ರ, ದ್ರೋಣ, ಚಿತ್ರಕೂಟ, ಗೋವರ್ಧನ, ರೈವತಕ, ಕಕುಭ, ನೀಲ, ಗೌರಮುಖ, ಇಂದ್ರಕೀಲ, ಗಿರಿ, ಕಾಮಗಿರಿ ಇವುಗಳಲ್ಲದೆ ಇನ್ನೂ ಅನೇಕ ಪುಣ್ಯಕರವಾದ ಪರ್ವತಗಳೂ,॥೮-೯-೧೦-೧೧॥

ಈ ಪರ್ವತಗಳಲ್ಲಿ ಹುಟ್ಟಿದ ಸಾವಿರಾರು ನದಿಗಳೂ ಸ್ನಾನ, ದರ್ಶನ, ನಾಮಸ್ಮರಣ, ಜಲಪಾನ, ಇವುಗಳಿಂದ ಮನುಜರ ಶರೀರ ವಾಕ್ಕು ಮನಸ್ಸುಗಳಿಂದ ಮಾಡಿದ ಮೂರು ವಿಧವಾದ ಪಾಪಗಳನ್ನೂ ನಾಶಮಾಡುವುವು. ॥೧೨॥

ಆ ನದಿಗಳು ಯಾವುವೆಂದರೆ—ತಾಮ್ರಪರ್ಣೀ, ಚಂದ್ರವಶಾ, ಕೃತಮಾಲಾ, ವಟೋದಕಾ, ವಿಹಾಯಸೀ, ಕಾವೇರೀ, ವೇಣಾ, ಪಯಸ್ವಿನೀ, ತುಂಗಭದ್ರಾ,

ಕೌಶಿಕೀ ಯಮುನಾ ಚೈವ ಮಂದಾಕಿನೀ ದೃಷದ್ವತೀ ।
ಗೋಮತೀ ಸರಯೂ ರೋಘವತೀ ಸಪ್ತವತೀ ತಥಾ ॥೧೭॥

ಸುಷೋಮಾ ಚ ಶತದ್ರುಶ್ಚ ಚಂದ್ರಭಾಗಾ ಮರುದ್ವೃಧಾ ।
ವಿತಸ್ತಾ ಚ ಅಸಿಕ್ನೀ ಚ ವಿಶ್ವಾ ಚೇತಿ ಪ್ರಕೀರ್ತಿತಾಃ ॥೧೮॥

ಅಸ್ಮಿನ್ವರ್ಷೇ ಲಬ್ಧಜನ್ಮಪುರುಷೈಃ ಸ್ವ ಸ್ವಕರ್ಮಭಿಃ ।
ಶುಕ್ಲಲೋಹಿತಕೃಷ್ಣಾಖ್ಯೈಃ ದಿವ್ಯಮಾನುಷನಾರಕಾಃ ॥೧೯॥

ಭವಂತಿ ವಿವಿಧಾ ಭೋಗಾಃ ಸರ್ವೇಷಾಂ ಚ ನಿವಾಸಿನಾಂ ।
ಯಥಾವರ್ಣವಿಧಾನೇನ ಅಪವರ್ಗೋ ಭವತಿ ಸ್ಫುಟಂ ॥೨೦॥

ಏತದೇವ ಚ ವರ್ಷಸ್ಯ ಪ್ರಾಧಾನ್ಯಂ ಕಾರ್ಯಸಿದ್ಧಿತಃ ।
ವದಂತಿ ಮುನಯೋ ವೇದವಾದಿನಃ ಸ್ವರ್ಗವಾಸಿನಃ ॥೨೧॥

---

ಕೃಷ್ಣವೇಣಾ, ಶರ್ಕರಾವರ್ತಕಾ, ಗೋದಾವರೀ, ಭೀಮರಥೀ, ನಿರ್ವಿಂಧ್ಯಾ ಪಯೋಷ್ಣೀ, ತಾಪೀ, ರೇವಾ, ಸುರಸಾ, ನರ್ಮದಾ, ಸರಸ್ವತೀ, ಚರ್ಮಣ್ವತೀ ಸಿಂಧು, ಅಂಧ, ಶೋಣಾ, ಋಷಿಕುಲ್ಯಾ; ತ್ರಿಸಾಮಾ, ವೇದಸ್ಮೃತಿ, ಮಹಾನದೀ, ಕೌಶಿಕೀ, ಯಮುನಾ, ಮಂದಾಕಿನೀ, ದೃಷದ್ವತೀ, ಸರಯೂ, ರೋಘವತೀ, ಸಪ್ತವತೀ, ಸುಷೋಮಾ, ಶತದ್ರು, ಚಂದ್ರಭಾಗಾ, ಮರುದ್ವೃಧಾ, ವಿತಸ್ತಾ, ಅಸಿಕ್ನೀ, ವಿಶ್ವಾ, ಇವುಗಳೇ ಪ್ರಸಿದ್ಧವಾದುವುಗಳು.॥೧೩-೧೪-೧೫-೧೬-೧೭-೧೮॥

ಈ ಭರತವರ್ಷದಲ್ಲಿ ಹುಟ್ಟಿದ ಪುರುಷರಿಗೆ ಸಾತ್ವಿಕ ರಾಜಸ ತಾಮಸರೂಪ ವಾದ ಅವರವರ ಕರ್ಮಗಳಿಂದ ದೇವಲೋಕ ಮನುಷ್ಯಲೋಕ ನರಕಲೋಕಸಂಬಂಧವಾದ ಬಗೆಬಗೆಯ ಅನುಭವಗಳು ಉಂಟಾಗುವುವು. ಮತ್ತು ಎಲ್ಲ ಜನರಿಗೂ ಅವರವರ ವರ್ಣಗಳಿಗೆ ತಕ್ಕಂತೆ ಮೋಕ್ಷವೂ ಉಂಟಾಗುವುದು. ॥೧೯-೨೦॥

ಇಲ್ಲಿ ಆಯಾಸವಿಲ್ಲದೆ ಈಶ್ವರಪ್ರಸಾದರೂಪವಾದ ಕಾರ್ಯಸಿದ್ಧಿಯಾಗುವುದರಿಂದ ಇತರ ಲೋಕಕ್ಕಿಂತಲೂ ಈ ಭರತವರ್ಷಕ್ಕೆ ಮುಖ್ಯತ್ವವು ಬಂದಿರುವುದು. ಎಂದು ವೇದವನ್ನು ಬಲ್ಲ ಮುನಿಗಳೂ ಸ್ವರ್ಗವಾಸಿಗಳಾದ ದೇವತೆಗಳೂ ಹೇಳುತ್ತಿರುವರು. ॥೨೧॥

ಅಹೋ ಅಮೀಷಾಂ ಕಿಮಕಾರಿ ಶೋಭನಂ ।
ಪ್ರಸನ್ನ ಏಷಾಂ ಸ್ವಿದುತ ಸ್ವಯಂ ಹರಿಃ ॥
ಯೈರ್ಜನ್ಮಲಬ್ಧಂ ನೃಷು ಭಾರತಾಜಿರೇ ।
ಮುಕುಂದಸೇವೌಪಯಿಕಂ ಸ್ಪೃಹಾ ಹಿ ನಃ ॥೨೨॥

ಕಿಂ ದುಷ್ಕರೈಃ ನಃ ಕ್ರತುಭಿಃ ತಪೋವ್ರತೈಃ ।
ದಾನಾದಿಭಿ ರ್ವಾ ದ್ಯುಜಯೇನ ಫಲ್ಗುನಾ ॥
ನ ಯತ್ರ ನಾರಾಯಣಪಾದಪಂಕಜ ।
ಸ್ಮೃತಿಃ ಪ್ರಮುಷ್ಟಾತಿಶಯೇಂದ್ರಿಯೋತ್ಸವಾತ್ ॥೨೩॥

ಕಲ್ಪಾಯುಷಾಂ ಸ್ಥಾನಜಯಾ ತ್ಪುನರ್ಭವಾ ।
ಕ್ಷಣಾಯುಷಾಂ ಭಾರತಭೂಜಯೋ ವರಂ ॥
ಕ್ಷಣೇನ ಮರ್ತ್ಯೇನ ಕೃತಂ ಮನಸ್ವಿನಃ ।
ಸಂನ್ಯಸ್ಯ ಸಂಯಾತ್ಯಭಯಂ ಪದಂ ಹತಃ ॥೨೪॥

---

ಈ ಭಾರತಭೂಮಿಯಲ್ಲಿ ಮಾನವರಾಗಿ ಯಾರು ಜನ್ಮವನ್ನು ಪಡೆದಿರುವರೋ ಅವರು ಎಷ್ಟು ಪುಣ್ಯಮಾಡಿರುವರೋ! ಈ ಜನರಿಗೆ ಯಾವ ಸಾಧನೆಯೂ ಇಲ್ಲದೆ ಹರಿಯು ಪ್ರಸನ್ನನಾಗಿರುವನು. ಇದು ಆಶ್ಚರ್ಯವಾದ ಸಂಗತಿಯು. ಆ ಮೋಕ್ಷವನ್ನು ಕೊಡತಕ್ಕ ನಾರಾಯಣನ ಸೇವೆಗೆ ಉಪಯೋಗವಾದ ಜನ್ಮವು ಬಂದುದರಿಂದ ಭಾರತಭೂಮಿಯಲ್ಲಿ ನಾವೂ ಜನಿಸಬೇಕೆಂದು ಆಸೆಯಾಗುವುದು. ॥೨೨॥

ಕಷ್ಟವಾದ ಯಜ್ಞ ತಪಸ್ಸು ವ್ರತಗಳು ದಾನ ಇವುಗಳಿಂದ ಬರುವ ಅಲ್ಪವಾದ ಸ್ವರ್ಗಫಲದಿಂದ ನಮಗೇನು ಪ್ರಯೋಜನ! ಆ ಸ್ವರ್ಗದಲ್ಲಿದ್ದರೆ ವಿಶೇಷವಾದ ಇಂದ್ರಿಯಸುಖದಲ್ಲಿರುವ ಪ್ರೀತಿಯಿಂದ ಆ ನಾರಾಯಣನ ಪಾದಕಮಲಗಳ ಜ್ಞಾಪಕವೂ ಕೂಡ ಉಂಟಾಗುವುದಿಲ್ಲ. ॥೨೩॥

ಒಂದು ಬ್ರಹ್ಮಕಲ್ಪಕಾಲ ಆಯಸ್ಸುಳ್ಳ ಪುನರ್ಜನ್ಮವನ್ನು ಕೊಡತಕ್ಕ ಲೋಕವನ್ನು ಸಂಪಾದಿಸುವುದಕ್ಕಿಂತಲೂ ಒಂದು ಕ್ಷಣಕಾಲ ಆಯಸ್ಸುಳ್ಳ ಭಾರತಭೂಮಿಯಲ್ಲಿ ಹುಟ್ಟುವುದೇ ಉತ್ತಮವಾದುದು. ಏತಕ್ಕೆಂದರೆ ಮುನಿಗಳು ಮನುಷ್ಯದೇಹದಿಂದ ಒಂದು ಕ್ಷಣಕಾಲದಲ್ಲಿ ಮಾಡಿದ ಕರ್ಮಫಲವನ್ನು ಈಶ್ವರಾರ್ಪಣಮಾಡಿ ಭಯರಹಿತವಾದ ಆ ಹರಿಯ ಪರಮಪದವನ್ನು ಪಡೆವರು. ॥೨೪॥

ನ ಯತ್ರ ವೈಕುಂಠಕಥಾ ಸುಧಾಪಗಾ ।
ನ ಸಾಧವೋ ಭಾಗವತಾ ಸ್ತದಾಶ್ರಯಾಃ ॥
ನ ಯತ್ರ ಯಜ್ಞೇಶಮುಖಾ ಮಹೋತ್ಸವಾಃ ।
ಸುರೇಶಲೋಕೋಽಪಿ ನ ವೈ ಸ ಸೇವ್ಯತಾಂ ॥೨೩॥

ಪ್ರಾಪ್ತಾ ನೃಜಾತಿಂ ತ್ವಿಹ ಯೇ ಚ ಜಂತವೋ ।
ಜ್ಞಾನಕ್ರಿಯಾದ್ರವ್ಯಕಲಾಪಸಂಭೃತಾಂ ॥
ನ ವೈ ಯತೇರನ್ ನ ಪುನರ್ಭವಾಯ ತೇ ।
ಭೂಯೋ ವನೌಕಾ ಇವ ಯಾಂತಿ ಬಂಧನಂ ॥೨೬॥

ಯೈಃ ಶ್ರದ್ಧಯಾ ಬರ್ಹಿಷಿ ಭಾಗಶೋ ಹವಿ ।
ರ್ನಿರುಪ್ತಮಿಷ್ಟಂ ವಿಧಿಮಂತ್ರವಸ್ತುತಃ ॥
ಏಕಃ ಪೃಥಙ್ನಾಮಭಿ ರಾಹುತೋ ಮುದಾ ।
ಗೃಹ್ಣಾತಿ ಪೂರ್ಣಃ ಸ್ವಯ ಮಾಶಿಷಾಂಪ್ರಭುಃ ॥೨೭॥

---

ಎಲ್ಲಿ ವಿಷ್ಣುವಿನ ಕಥೆ ಎಂಬ ಅಮೃತದ ಹೊಳೆಯು ಹರಿಯುವುದಿಲ್ಲವೋ ಎಲ್ಲಿ ಆ ಹೊಳೆಯನ್ನನುಸರಿಸಿದ ಭಗವಂತನ ಭಕ್ತರಿಲ್ಲವೋ ಎಲ್ಲಿ ಆ ದೇವನ ಪೂಜಾ ರೂಪವಾದ ಉತ್ಸವಗಳು ನಡೆಯುವುದಿಲ್ಲವೋ ಅದು ಬ್ರಹ್ಮಲೋಕವಾದರೂ ಅಲ್ಲಿಗೆ ಹೋಗತಕ್ಕುದಲ್ಲ. ॥೨೩॥

ಈ ಭೂಮಿಯಲ್ಲಿ ಜ್ಞಾನೋತ್ಪತ್ತಿಗೆ ಸಾಧನವಾದ ಕ್ರಿಯೆಗಳಿಂದ ಮತ್ತು ಪದಾರ್ಥಗಳಿಂದ ಕೂಡಿದ ಮನುಷ್ಯಜನ್ಮವನ್ನು ಪಡೆದು ಪುನರುತ್ಪತ್ತಿಯಿಲ್ಲದ ಮೋಕ್ಷಕ್ಕೆ ಪ್ರಯತ್ನಪಡದಿದ್ದರೆ ಅಂತಹವರು ಕಾಡಿನಲ್ಲಿರುವ ಹಕ್ಕಿ ಮುಂತಾದ ಪ್ರಾಣಿಗಳಂತೆ ಮತ್ತೆ ಬಂಧನಕ್ಕೆ ಒಳಗಾಗುವರು. ॥೨೬॥

ಯಾವ ಭಾರತಭೂಮಿಯ ಜನರು ಕರ್ಮಗಳಲ್ಲಿ ನಂಬಿಕೆಯನ್ನಿಟ್ಟುಕೊಂಡು ಯಜ್ಞಗಳಲ್ಲಿ, 'ಅಗ್ನಯೇ ಜುಷ್ಟಂ ನಿರ್ವಪಾಮಿ. ಇಂದ್ರಾಯ ಜುಷ್ಟಂ ನಿರ್ವಪಾಮಿ.' ಎಂದು ಬೇರೆ ಬೇರೆಯಾಗಿ ಮಂತ್ರವಿಧಿಗಳಿಂದ ಬೇರೆಬೇರೆ ಹೆಸರುಗಳಿಂದ ಕರೆದು ಕೊಟ್ಟ ಹವಿರ್ಭಾಗಗಳನ್ನು ಸಮಸ್ತ ಕಾಮನೆಗಳಿಗೂ ಒಡೆಯನಾದ ವಿಷ್ಣುವು ತಾನು ಪೂರ್ಣಕಾಮನಾದರೂ ಪ್ರೀತಿಯಿಂದ ಬಂದು ಆ ಹವಿರ್ಭಾಗಗಳನ್ನು ತೆಗೆದು ಕೊಳ್ಳುವನು. ಇದು ಭಾರತವಾಸಿಗಳ ಭಾಗ್ಯವಾಗಿರುವುದು. ॥೨೭॥

ಸತ್ಯಂ ದಿಶತ್ಯರ್ಥಿತಮರ್ಥಿತೋ ನೃಣಾಂ ।
ನೈವಾರ್ಥದೋ ಯತ್ಪುನಃ ಅರ್ಥಿತಾ ಯತಃ ॥
ಸ್ವಯಂ ವಿಧತ್ತೇ ಭಜತಾ ಮನಿಚ್ಛತಾ ।
ಮಿಚ್ಛಾಪಿಧಾನಂ ನಿಜಪಾದಪಲ್ಲವಂ ॥೨೮॥

(ಯದ್ಯತ್ರ ನಃ ಸ್ವರ್ಗಸುಖಾವಶೇಷಿತಂ
ಸ್ವಿಷ್ಟಸ್ಯ ಪೂರ್ತಸ್ಯ ಕೃತಸ್ಯ ಶೋಭನಂ ।
ತೇನಾಜನಾಭೇ ಸ್ಮೃತಿಮಜ್ಜನ್ಮನಃ ಸ್ಯಾತ್
ವರ್ಷೇಹರಿರ್ಭಜತಾಂ ಶಂ ತನೋತಿ ॥ )

॥ ನಾರಾಯಣ ಉವಾಚ ॥

ಏವಂ ಸ್ವರ್ಗಗತಾ ದೇವಾಃ ಸಿದ್ಧಾಶ್ಚ ಪರಮರ್ಷಯಃ ।
ಪ್ರವದಂತಿ ಚ ಮಾಹಾತ್ಮ್ಯಂ ಭಾರತಸ್ಯ ಸುಶೋಭನಂ ॥೨೯॥

---

ಈ ಭೂಮಿಯಲ್ಲಿ ಹರಿಯು ವರವನ್ನು ಕೇಳಿದ ಮನುಜರಿಗೆ ನಿಜವಾಗಿಯೂ ವರವನ್ನು ಕೊಡುವನು. ಹಾಗೆ ಕೊಟ್ಟರೂ ಮೋಕ್ಷವನ್ನು ಕೊಟ್ಟಂತಾಗಲಿಲ್ಲ. ಏತಕ್ಕೆಂದರೆ ಆ ಜನರಿಗೆ ಮತ್ತೆ ವರದಲ್ಲಾಸಕ್ತಿಯುಂಟಾಯಿತು. ನಿಷ್ಕಾಮವಾಗಿ ಸೇವೆ ಮಾಡುವವರಿಗಾದರೋ ಆ ಕಾಮವನ್ನು ಅಡಗಿಸುವ ಎಂದರೆ ಸರ್ವಕಾಮನೆಗಳನ್ನೂ ಪೂರ್ಣಮಾಡುವ ತನ್ನ ಚಿಗುರಿನಂತೆ ಕೋಮಲವಾದ ಪಾದಗಳನ್ನು ತಾನಾಗಿಯೇ ಕೊಡುವನು. ಆದುದರಿಂದ ನಿಷ್ಕಾಮವಾಗಿ ಸೇವೆಮಾಡುವವರೇ ಕೃತಾರ್ಥರು.॥೨೮॥

(ನಾವು ಮಾಡಿದ ಯಜ್ಞಯಾಗಾದಿಗಳ ಕೆರೆ ತೋಪುಗಳ ಪುಣ್ಯದ ಫಲವಾದ ಸ್ವರ್ಗಸುಖದಲ್ಲಿ, ಉಳಿದಿರುವ ಪುಣ್ಯದಿಂದ ಈ ವರ್ಷದಲ್ಲಿ ವಿಷ್ಣುವಿನ ಸ್ಮರಣೆಯು ಉಂಟಾಗುತ್ತದೆ. ಅದರಿಂದ ವಿಷ್ಣುವು ಆ ಭಕ್ತರಿಗೆ ಕಲ್ಯಾಣಗಳನ್ನು ಅನುಗ್ರಹಿಸುತ್ತಾನೆ.)

ನಾರಾಯಣನು ಹೇಳಿದನು — ಈ ರೀತಿಯಾಗಿ ಸ್ವರ್ಗದಲ್ಲಿರುವ ದೇವತೆಗಳೂ ಸಿದ್ಧರೂ ಶ್ರೇಷ್ಠರಾದ ಮಹರ್ಷಿಗಳೂ ಭಾರತಭೂಮಿಯ ಮಂಗಳಕರವಾದ ಮಾಹಾತ್ಮ್ಯೆಯನ್ನು ಹೊಗಳುವರು. ॥೨೯॥

ಜಂಬೂದ್ವೀಪಸ್ಯ ಚಾಷ್ಟೌ ಹಿ ಉಪದ್ವೀಪಾಃ ಸ್ಮೃತಾಃ ಪರೇ ।
ಹಯಮಾರ್ಗಾನ್ವಿಶೋಧದ್ಭಿಃ ಸಾಗರ್ಯೈಃ ಪರಿಕಲ್ಪಿತಾಃ ॥೩೦॥

ಸ್ವರ್ಣಪ್ರಸ್ಥ ಶ್ಚಂದ್ರಶುಕ್ರ ಆವರ್ತನರಮಾಣಕೌ ।
ಮಂದರೋಪಾಖ್ಯಹರಿಣೌ ಪಾಂಚಜನ್ಯ ಸ್ತಥೈವ ಚ ॥೩೧॥

ಸಿಂಹಲಶ್ಚೈವ ಲಂಕೇತಿ ಉಪದ್ವೀಪಾಷ್ಟಕಂ ಸ್ಮೃತಂ ।
ಜಂಬೂದ್ವೀಪಸ್ಯ ಮಾನಂ ಹಿ ಕೀರ್ತಿತಂ ವಿಸ್ತರೇಣ ಚ ॥೩೨॥
ಅತಃ ಪರಂ ಪ್ರವಕ್ಷ್ಯಾಮಿ ಪ್ಲಕ್ಷಾದಿ ದ್ವೀಪಷಟ್ಕಕಂ ॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಅಷ್ಟಮಸ್ಕಂಧೇ
ಏಕಾದಶೋಽಧ್ಯಾಯಃ

---

ಈ ಜಂಬೂದ್ವೀಪಕ್ಕೆ ಎಂಟು ಉಪದ್ವೀಪಗಳಿರುವುವು. ಯಜ್ಞದ ಕುದುರೆಯನ್ನು ಹುಡುಕುತ್ತಿದ್ದ ಸಗರಚಕ್ರವರ್ತಿಯ ಮಕ್ಕಳು ಇವುಗಳನ್ನು ಕಂಡುಹಿಡಿದರು. ॥೩೦॥

ಸ್ವರ್ಣಪ್ರಸ್ಥ, ಚಂದ್ರಶುಕ್ರ, ಆವರ್ತ, ರಮಣಕ, ಹರಿಮಂಥ, ಪಾಂಚಜನ್ಯ ಸಿಂಹಲ, ಲಂಕಾ, ಈ ಎಂಟೂ ಉಪದ್ವೀಪಗಳು. ಜಂಬೂದ್ವೀಪದ ಅಳತೆಯನ್ನು ಹಿಂದೆ ವಿಸ್ತಾರವಾಗಿ ಹೇಳಿದೆ. ಇಲ್ಲಿಂದ ಮುಂದೆ ಪ್ಲಕ್ಷಾದಿ ಆರು ದ್ವೀಪಗಳ ವಿಷಯವನ್ನು ಹೇಳುವೆನು. ॥೩೧-೩೨॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಎಂಟನೆಯ ಸ್ಕಂಧದಲ್ಲಿ
ಹನ್ನೊಂದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಅಷ್ಟಮಸ್ಕಂಧೇ

॥ ದ್ವಾದಶೋಽಧ್ಯಾಯಃ ॥

### ಹನ್ನೆರಡನೆಯ ಅಧ್ಯಾಯವು

॥ ಶ್ರೀನಾರಾಯಣ ಉವಾಚ ॥

ಜಂಬೂದ್ವೀಪೋ ಯಥಾ ಚಾಯಂ ಯತ್ಪ್ರಮಾಣೇನ ಕೀರ್ತಿತಃ ।
ತಾವತಾ ಸರ್ವತಃ ಕ್ಷಾರೋದಧಿನಾ ಪರಿವೇಷ್ಟಿತಃ ॥೧॥

ಜಂಬ್ವಾಖ್ಯೇನ ಯಥಾ ಮೇರುಃ ತಥಾ ಕ್ಷಾರೋದಕೇನ ಚ ।
ಕ್ಷಾರೋದಧಿಸ್ತು ದ್ವಿಗುಣ ಪ್ಲಕ್ಷಾಖ್ಯೇನೋಪವೇಷ್ಟಿತಃ ॥೨॥

ಯಥೈವ ಪರಿಖಾ ಬಾಹ್ಯೋಪವನೇನ ಹಿ ವೇಷ್ಟ್ಯತೇ ।
ಪ್ಲಕ್ಷಾಖ್ಯಶ್ಚ ಸ್ವಯಂ ಜಂಬುಪ್ರಮಾಣೋ ದ್ವೀಪರೂಪಧೃಕ್ ॥೩॥

---

ಜಂಬೂದ್ವೀಪವು ಎಷ್ಟು ಅಳತೆಯುಳ್ಳದಾಗಿರುವುದೋ ಆ ಅಳತೆಗೆ ತಕ್ಕಂತೆ ಆ ದ್ವೀಪದ ಸುತ್ತಲೂ ಲವಣಸಮುದ್ರವು ಸುತ್ತಿಕೊಂಡಿರುವುದು. ॥೧॥

ಮೇರುಪರ್ವತದ ಸುತ್ತಲೂ ಜಂಬೂದ್ವೀಪವು ಹೇಗೆ ಸುತ್ತಿಕೊಂಡಿರುವುದೋ ಹಾಗೆಯೇ ಲವಣಸಮುದ್ರವು ಅದರ ಎರಡರಷ್ಟು ವಿಸ್ತಾರವಾದ ಪ್ಲಕ್ಷದ್ವೀಪದಿಂದ ಸುತ್ತಿಕೊಳ್ಳಲ್ಪಟ್ಟಿರುವುದು. ॥೨॥

ಒಂದು ಪಟ್ಟಣಕ್ಕೆ ಕೋಟೆಯು ಇದ್ದರೆ ಆ ಕೋಟೆಯ ಸುತ್ತಲೂ ಅಗಳೂ (ಕಂದಕ) ಅದರ ಸುತ್ತಲೂ ಉಪವನವೂ ಹೇಗೆ ಇರುವುದೋ ಹಾಗೆ ಲವಣ ಸಮುದ್ರದ ಸುತ್ತಲೂ ಪ್ಲಕ್ಷದ್ವೀಪವಿರುವುದು. ಆ ದ್ವೀಪದಲ್ಲಿ ಪ್ಲಕ್ಷವೆಂಬ ಮರವು ಜಂಬೂದ್ವೀಪದಲ್ಲಿರುವ ಜಂಬೂವೃಕ್ಷದಂತೆ ದೊಡ್ಡದಾಗಿರುವುದು. ಪ್ಲಕ್ಷವೆಂದಕೆ

ಹಿರಣ್ಮಯೋಽಗ್ನಿಸ್ತತ್ರೈವ ತಿಷ್ಠತೀತಿ ವಿನಿಶ್ಚಯಃ ।
ಪ್ರಿಯವ್ರತಾತ್ಮಜ ಸ್ತತ್ರ ಸಪ್ತಜಿಹ್ವ ಇತಿ ಸ್ಮೃತಃ ॥೪॥

ಅಗ್ನಿಸ್ತದಧಿಪಸ್ತ್ವಿಧ್ಮಜಿಹ್ವಃ ಸ್ವಂ ದ್ವೀಪ ಮೇವಚ ।
ವಿಭಜ್ಯ ಸಪ್ತವರ್ಷಾಣಿ ಸ್ವ ಪುತ್ರೇಭ್ಯೋ ದದೌ ವಿಭುಃ ॥೫॥

ಸ್ವಯಮಾತ್ಮವಿದಾಂ ಮಾನ್ಯಾಂ ಯೋಗಚರ್ಯಾಂ ಸಮಾಶ್ರಿತಃ ।
ತೇನೈವ ಚಾತ್ಮಯೋಗೇನ ಭಗವಂತಂ ಉಪಾಗತಃ ॥೬॥

ಶಿವಂ ಚ ಯವಸಂ ಭದ್ರಂ ಶಾಂತಂ ಕ್ಷೇಮಾಮೃತೇ ತಥಾ ।
ಅಭಯಂ ಚೇತಿ ಸಪ್ತೈವ ತದ್ವರ್ಷಾಣಿ ಸದೇಕ್ಷತಾಂ ॥೭॥

ತೇಷು ಪ್ರೋಕ್ತಾ ನದೀಃ ಸಪ್ತ ಗಿರಯಃ ಸಪ್ತ ಚೈವ ಹಿ ।
ಅರುಣಾ ನೃಮ್ಣಾಂಗಿರಸೀ ಸಾವಿತ್ರೀ ಸುಪ್ರಭಾತಿಕಾ ॥೮॥

---

ಅರಳಿಮರವು. ಆ ಮರದಿಂದಲೇ ಆ ದ್ವೀಪಕ್ಕೆ ಆ ಹೆಸರು ಬಂದಿರುವುದು. ಆ ಮರದ ಕೆಳಗಡೆಯಲ್ಲಿ ಚಿನ್ನದ ಕಾಂತಿಯಂತೆ ಹೊಳೆಯುತ್ತಿರುವ ಅಗ್ನಿಯೂ ಇರುವುದು.॥೩॥

ಆ ಅಗ್ನಿಗೆ ಸಪ್ತಜಿಹ್ವನೆಂದು ಹೆಸರು. ಆ ಅಗ್ನಿಯು ಲೋಕಗಳಿಗೆ ದೇವೀ ಧರ್ಮಗಳನ್ನು ಉಪದೇಶಮಾಡುತ್ತ ತಾನೂ ದೇವಿಯ ಆರಾಧನೆಯನ್ನು ಮಾಡುತ್ತಿರುವನು. ಈ ವಿಚಾರವನ್ನು ಇಲ್ಲಿ ಹೇಳದಿದ್ದರೂ ಹಿಂದೆ ಹೇಳಿದ ಗ್ರಂಥಸಂದರ್ಭದಿಂದ ಊಹಿಸಬೇಕು. ಆ ಪ್ಲಕ್ಷದ್ವೀಪಕ್ಕೆ ಪ್ರಿಯವ್ರತನ ಮಗನಾದ ಇಧ್ಮಜಿಹ್ವನೆಂಬವನು ರಾಜನಾಗಿರುವನು. ಅವನು ಆ ದ್ವೀಪವನ್ನು ಏಳು (ಏಳು) ವರ್ಷಗಳಾಗಿ ಭಾಗಮಾಡಿ ತನ್ನ ಏಳು ಜನ ಮಕ್ಕಳಿಗೆ ಕೊಟ್ಟನು. (ವರ್ಷ-ಖಂಡ) ॥೪-೫॥

ತಾನು ಆತ್ಮಜ್ಞಾನವುಳ್ಳವರ ಪೂಜ್ಯವಾದ ಯೋಗಮಾರ್ಗವನ್ನು ಅನುಸರಿಸಿ ಆ ಯೋಗದಿಂದಲೇ ಪರಬ್ರಹ್ಮಸ್ವರೂಪವನ್ನು ಪಡೆದನು. ॥೬॥

ಶಿವ, ಯವಸ, ಭದ್ರ, ಶಾಂತ, ಕ್ಷೇಮ, ಅಮೃತ, ಅಭಯ ಎಂದು ಆ ಏಳು ಖಂಡಗಳಿಗೂ ಹೆಸರಿರುವುದು. ॥೭॥

ಆ ಪ್ಲಕ್ಷದ್ವೀಪದಲ್ಲಿ ಅರುಣಾ, ನೃಮ್ಣಾ, ಆಂಗಿರಸೀ, ಸಾವಿತ್ರೀ, ಸುಪ್ರಭಾತಾ, ಋತಂಭರಾ, ಸತ್ಯಂಭರಾ, ಎಂಬ ಏಳು ನದಿಗಳೂ ಮಣಿಕೂಟ, ವಜ್ರ

ಋತಂಭರಾ ಸತ್ಯಂಭರಾ ಇತಿ ನದ್ಯಃ ಪ್ರಕೀರ್ತಿತಾಃ ।
ಮಣಿಕೂಟೋ ವಜ್ರಕೂಟ ಇಂದ್ರಸೇನ ಸ್ತಥೈವ ಚ ॥೯॥

ಜ್ಯೋತಿಷ್ಮಾನ್ಸ್ಯೈ ಸುವರ್ಣಶ್ಚ ಹಿರಣ್ಯಷ್ಠೀವ ಏವ ಚ ।
ಮೇಘಮಾಲ ಇತಿ ಖ್ಯಾತಾಃ ಪ್ಲಕ್ಷದ್ವೀಪಸ್ಯ ಪರ್ವತಾಃ ॥೧೦॥

ನದೀನಾಂ ಜಲಮಾತ್ರೇಣ ದರ್ಶನಸ್ಪರ್ಶನಾದಿಭಿಃ ।
ನಿರ್ಧೂತಾಶೇಷರಜಸೋ ನಿಸ್ತಮಸ್ಕಾಃ ಪ್ರಜಾ ಸ್ತಥಾ ॥೧೧॥

ಹಂಸಶ್ಚೈವ ಪತಂಗಶ್ಚ ಊರ್ಧ್ವಾಯನ ಇತೀವ ಚ ।
ಸತ್ಯಾಂಗಸಂಜ್ಞಾ ಶ್ಚತ್ವಾರೋ ವರ್ಣಾಃ ಪ್ಲಕ್ಷಸ್ಯ ದ್ವೀಪಕೇ ॥೧೨॥

ಸಹಸ್ರಾಯುಃ ಪ್ರಮಾಣಾಶ್ಚ ವಿವಿಧೋಪಮದರ್ಶನಾಃ ।
ಸ್ವರ್ಗದ್ವಾರಂ ತ್ರಯೀವಿದ್ಯಾ ವಿಧಿನಾರ್ಕಂ ಯಜಂತಿ ತೇ ॥೧೩॥

ಪ್ರತ್ನಸ್ಯ ವಿಷ್ಣೋ ರೂಪಂ ಚ ಸತ್ಯರ್ತಸ್ಯ ಚ ಬ್ರಹ್ಮಣಃ ।
ಅಮೃತಸ್ಯ ಚ ಮೃತ್ಯೋಶ್ಚ ಸೂರ್ಯಮಾತ್ಮಾನ ಮೀಮಹಿ ॥೧೪॥

---

ಕೂಟ, ಇಂದ್ರಸೇನ, ಜ್ಯೋತಿಷ್ಮಾನ್, ಸುವರ್ಣ, ಹಿರಣ್ಯಷ್ಠೀವ, ಮೇಘಮಾಲ, ಎಂಬ ಏಳು ಪರ್ವತಗಳೂ ಇರುವುವು. ॥೮-೯-೧೦॥

ಆ ನದಿಗಳ ನೀರನ್ನು ನೋಡುವುದರಿಂದಲೂ, ಅದನ್ನು ಮುಟ್ಟುವುದರಿಂದಲೂ, ಅಲ್ಲಿನ ಪ್ರಜೆಗಳ ಸಮಸ್ತ ಪಾಪಗಳೂ ನಾಶವಾಗಿ ಅವರ ಅಜ್ಞಾನವು ತೊಲಗುವುದು. ॥೧೧॥

ಆ ಪ್ಲಕ್ಷದ್ವೀಪದಲ್ಲಿ ಹಂಸ, ಪತಂಗ, ಊರ್ಧ್ವಾಯನ, ಸತ್ಯಾಂಗ ಎಂಬ ನಾಲ್ಕು ವರ್ಣಗಳಿರುವುವು. ॥೧೨॥

ಅಲ್ಲಿನ ಜನರು ಅನೇಕ ಬಗೆಯ ಸುಂದರವಾದ ರೂಪಿನಿಂದ ಕೂಡಿ ಒಂದು ಸಾವಿರ ವರ್ಷ ಆಯುಸ್ಸುಳ್ಳವರಾಗಿರುವರು. ವೇದೋಕ್ತವಾದ ವಿಧಿಯಿಂದ ಸ್ವರ್ಗ ಫಲವನ್ನು ಕೊಡುವ ಸೂರ್ಯನನ್ನು ಪೂಜಿಸುವರು. ॥೧೩॥

ಪುರಾಣಪುರುಷನಾದ ವಿಷ್ಣುವೂ ಋತಸತ್ಯರೂಪನಾದ ಪರಬ್ರಹ್ಮನೂ ಶುಭಾ ಶುಭಫಲವನ್ನು ಕೊಡತಕ್ಕವನೂ ಆತ್ಮಸ್ವರೂಪನಾದ ಸೂರ್ಯನೇ ಎಂದು ಅವನನ್ನೇ ಶರಣುಹೊಂದುತ್ತೇವೆ. ॥೧೪॥

ಪ್ಲಕ್ಷಾದಿಷು ಚ ಸರ್ವೇಷು ಪಂಚದ್ವಿಪೇಷು ನಾರದ ।
ಆಯುರಿಂದ್ರಿಯಮೋಜಶ್ಚ ಬಲಂ ಬುದ್ಧಿಃ ಸಹೋಽಪಿ ಚ ॥೧೫॥

ವಿಕ್ರಮಃ ಸರ್ವಲೋಕಾನಾಂ ಸಿದ್ಧಿಃ ಔತ್ಪತ್ತಿಕೀ ಸದಾ ।
ಪ್ಲಕ್ಷದ್ವೀಪಾತ್ಪರಂ ಚೇಕ್ಷುರಸೋದಃ ಸರಿತಾಂ ಪತಿಃ ॥೧೬॥

ಪ್ಲಕ್ಷದ್ವೀಪಂ ಸಮಗ್ರಂ ಚ ಪರಿವಾರ್ಯಾವತಿಷ್ಠತೇ ।
ಶಾಲ್ಮಲಾಖ್ಯಃ ತತೋ ದ್ವೀಪ ಶ್ಚಾಸ್ಮಾದ್ದ್ವಿಗುಣವಿಸ್ತರಃ ॥೧೭॥

ಸಮಾನೇನ ಸುರೋದೇನ ಸಿಂಧುನಾ ಪರಿವೇಷ್ಟಿತಃ ।
ಯತ್ರ ವೈ ಶಾಲ್ಮಲೀ ವೃಕ್ಷಃ ಪ್ಲಕ್ಷಾಯಾಮಃ ಪ್ರಕೀರ್ತಿತಃ ॥೧೮॥

ಸ್ಥಾನಂ ತತ್ಪಕ್ಷಿರಾಜಸ್ಯ ಗರುಡಸ್ಯ ಮಹಾತ್ಮನಃ ।
ತಸ್ಯ ದ್ವೀಪಸ್ಯ ನಾಥೋ ಹಿ ಯಜ್ಞಬಾಹುಃ ಪ್ರಿಯವ್ರತಾತ್ ॥೧೯॥

ಜಾತಃ ಸ ಏವ ಸಪ್ತಭ್ಯಃ ಸ್ವ ಪುತ್ರೇಭ್ಯೋ ದದೌ ಧರಾಂ ।
ತದ್ವರ್ಷಾಣಾಂ ಚ ನಾಮಾನಿ ಕಥಿತಾನಿ ನಿಬೋಧತ ॥೨೦॥

---

ಎಲೈ ನಾರದನೇ, ಪ್ಲಕ್ಷವೇ ಮೊದಲಾದ ಐದು ದ್ವೀಪಗಳಲ್ಲಿರುವ ಜನರಿಗೆ ಆಯಸ್ಸು ಇಂದ್ರಿಯಪಾಟವ, ಶರೀರದಾರ್ಢ್ಯ, ಬಲ, ಬುದ್ಧಿ, ಕಷ್ಟಸಹಿಷ್ಣುತೆ, ಪರಾಕ್ರಮ ಇವುಗಳು ಹುಟ್ಟುತ್ತಿದ್ದ ಹಾಗೆಯೇ ಸ್ವಾಭಾವಿಕವಾಗಿ ಉಂಟಾಗುವುವು.॥೧೫॥

ಪ್ಲಕ್ಷದ್ವೀಪದ ಸುತ್ತಲೂ ಕಬ್ಬಿನ ಹಾಲಿನ ಸಮುದ್ರವು ಸುತ್ತಿಕೊಂಡಿರುವುದು. ಆ ಸಮುದ್ರದ ಆಚೆಗೆ ಅದರ ಎರಡರಷ್ಟು ವಿಸ್ತಾರವಾದ ಶಾಲ್ಮಲಿದ್ವೀಪವಿರುವುದು. ॥೧೬-೧೭॥

ಶಾಲ್ಮಲಿದ್ವೀಪದ ಸುತ್ತಲೂ ಮದ್ಯದ ಸಮುದ್ರವು ಸುತ್ತಿಕೊಂಡಿರುವುದು. ಪ್ಲಕ್ಷದ್ವೀಪದಲ್ಲಿ ಪ್ಲಕ್ಷವೃಕ್ಷವಿರುವಂತೆ ಶಾಲ್ಮಲಿದ್ವೀಪದಲ್ಲಿ ಶಾಲ್ಮಲಿ (ಬೂರಗ) ವೃಕ್ಷವಿರುವುದು. ಆ ಶಾಲ್ಮಲಿದ್ವೀಪವು ಪಕ್ಷಿರಾಜನಾದ ಗರುಡನ ವಾಸಸ್ಥಾನವಾಗಿರುವುದು. ॥೧೮॥

ಆ ದ್ವೀಪಕ್ಕೆ ಪ್ರಿಯವ್ರತ ರಾಜನ ಮಗನಾದ ಯಜ್ಞಬಾಹುವೆಂಬವನು ರಾಜನು. ಅವನು ತನ್ನ ಮಕ್ಕಳಾದ ಸುರೋಚನ, ಸೌಮನಸ್ಯ, ರಮಣ, ದೇವ

ಸುರೋಚನಂ ಸೌಮನಸ್ಯಂ ರಮಣಂ ದೇವವರ್ಷಕಂ ।
ಪಾರಿಭದ್ರಂ ತಥಾ ಚಾಽಪ್ಯಾಯನಂ ವಿಜ್ಞಾತನಾಮಕಂ ॥೨೦॥

ತೇಷು ವರ್ಷಾದ್ರಯಃ ಸಪ್ತ ಸಪ್ತೈವ ಸರಿತಃ ಸ್ಮೃತಾಃ ।
ಸರಸಃ ಶತಶೃಂಗಶ್ಚ ವಾಮದೇವಶ್ಚ ಕಂದಕಃ ॥೨೨॥

ಕುಮುದಃ ಪುಷ್ಪವರ್ಷಶ್ಚ ಸಹಸ್ರಶ್ರುತಿ ರೇವ ಚ ।
ಏತೇ ಚ ಪರ್ವತಾಃ ಸಪ್ತ ನದೀನಾಮಾನಿ ಚೋಚ್ಯತೇ ॥೨೩॥

ಅನುಮತಿಃ ಸಿನೀವಾಲೀ ಸರಸ್ವತೀ ಕುಹೂಸ್ತಥಾ ।
ರಜನೀ ಚೈವ ನಂದಾ ಚ ರಾಕೇತಿ ಪರಿಕೀರ್ತಿತಾಃ ॥೨೪॥

ತದ್ವರ್ಷಪುರುಷಾಃ ಸರ್ವೇ ಚಾತುರ್ವರ್ಣ್ಯಸಮಾಹ್ವಯಾಃ ।
ಶ್ರುತಧರೋ ವೀರ್ಯಧರೋ ವಸುಂಧರ ಇಷುಂಧರಃ ॥೨೫॥

ಭಗವಂತಂ ವೇದಮಯಂ ಯಜಂತೇ ಸೋಮಮಿಹಾತ್ಮರಂ ।
ಸ್ವ ಗೋಭಿಃ ಪಿತೃದೇವೇಭ್ಯೋ ವಿಭಜನ್ ಕೃಷ್ಣಶುಕ್ಲಯೋಃ ॥೨೬॥

---

ವರ್ಷಕ, ಪಾರಿಭದ್ರ, ಆಪ್ಯಾಯನ, ವಿಜ್ಞಾತ ಎಂಬ ಏಳು ಜನರಿಗೆ ಆ ದ್ವೀಪವನ್ನು ಏಳು ಖಂಡಗಳಾಗಿ ವಿಭಾಗಮಾಡಿಕೊಟ್ಟನು. ॥೧೯-೨೦-೨೧॥

ಆ ಏಳು ಖಂಡಗಳಲ್ಲಿ ಕ್ರಮವಾಗಿ ಸರಸ, ಶತಶೃಂಗ, ವಾಮದೇವ, ಕಂದಕ, ಕುಮುದ, ಪುಷ್ಪವರ್ಷ, ಸಹಸ್ರಶ್ರುತಿ ಎಂಬ ಏಳು ಪರ್ವತಗಳೂ, ಅನುಮತಿ, ಸಿನೀವಾಲೀ, ಸರಸ್ವತೀ, ಕುಹೂ, ರಜನೀ, ನಂದಾ, ರಾಕಾ ಎಂಬ ಏಳು ನದಿಗಳೂ ಇರುವುವು. ॥೨೨-೨೩-೨೪॥

ಆ ಖಂಡಗಳಲ್ಲಿರುವ ಜನರೆಲ್ಲರೂ ಶ್ರುತಧರ, ವೀರ್ಯಧರ, ವಸುಂಧರ, ಇಷುಧರ ಎಂಬ ನಾಲ್ಕು ವರ್ಣ ವಿಭಾಗದಿಂದ ಕೂಡಿರುವರು. ॥೨೫॥

ಆ ಜನರು ವೇದಸ್ವರೂಪನೂ ಉತ್ಪತ್ತಿನಿಧನಾದಿ ಆರು ಅಂಶಗಳನ್ನು ತಿಳಿದಿರುವುದರಿಂದ ಭಗವಾನ್ ಎಂದು ಪ್ರಸಿದ್ಧನೂ ಆದ ಚಂದ್ರನನ್ನು ದೇವರೆಂದು ಪೂಜೆ ಮಾಡುವರು. ಆ ಚಂದ್ರನ ಕಿರಣಗಳಿಂದ ಕೃಷ್ಣಪಕ್ಷದಲ್ಲಿ ಪಿತೃಗಳಿಗೂ ಶುಕ್ಲಪಕ್ಷದಲ್ಲಿ ದೇವತೆಗಳಿಗೂ ಅನ್ನವನ್ನು ವಿಭಾಗಮಾಡಿ ಕೊಡುವರು. ॥೨೬॥

**ಸರ್ವಾಸಾಂ ಚ ಪ್ರಜಾನಾಂ ಚ ರಾಜಾ ಸೋಮಃ ಪ್ರಸೀದತು ।**
**ಏವಂ ಸುರೋದಾದ್ದ್ವಿಗುಣಃ ಸ್ವಮಾನೇನ ಪ್ರಕೀರ್ತಿತಃ ॥೨೭॥**

**ಘೃತೋದೇನಾವೃತಃ ಸೋಽಯಂ ಕುಶದ್ವೀಪಃ ಪ್ರಕಾಶತೇ ।**
**ಯಸ್ಮಿನ್ನಾಸ್ತೇ ಕುಶಸ್ತಂಬೋ ದ್ವೀಪಾಖ್ಯಾಕಾರಣೋ ಜ್ವಲನ್॥೨೮॥**

**ಸ್ವಶಷ್ಪರೋಚಿಷಾ ಕಾಷ್ಠಾ ಭಾಸಯನ್ ಪರಿತಿಷ್ಠತೇ ।**
**ಹಿರಣ್ಯರೇತಾಃ ತದ್ದ್ವೀಪಪತಿಃ ಪ್ರೈಯ್ಯವ್ರತಃ ಸ್ವರಾಟ್ ॥೨೯॥**

**ಸ್ವಪುತ್ರೇಭ್ಯಶ್ಚ ಸಪ್ತಭ್ಯ ಸ್ತಂ ದ್ವೀಪಂ ಸಪ್ತಧಾಽಭಜತ್ ।**
**ವಸುಶ್ಚ ವಸುದಾನಶ್ಚ ತಥಾ ದೃಢರುಚಿಃ ಪರಃ ॥೩೦॥**

**ನಾಭಿಗುಪ್ತಸ್ಸ್ತುತ್ಯವ್ರತೌ ವಿವಿಕ್ತಭಾಮುದೇವಕೌ ।**
**ತೇಷಾಂ ವರ್ಷೇಷು ಸಪ್ತೈವ ಸೀಮಾ ಗಿರಿವರಾಃ ಸ್ಮೃತಾಃ ॥೩೧॥**

**ನದ್ಯಃ ಸಪ್ತೈವ ಸಂತೀಹ ತನ್ನಾಮಾನಿ ನಿಬೋಧತ ।**
**ಚಕ್ರ ಸ್ತಥಾ ಚತುಶ್ಶೃಂಗಃ ಕಪಿಲ ಶ್ಚಿತ್ರಕೂಟಕಃ ॥೩೨॥**

**ದೇವಾನೀಕಶ್ಚೋರ್ಧ್ವರೋಮಾ ದ್ರವಿಣಃ ಸಪ್ತಪರ್ವತಾಃ ।**
**ರಸಕುಲ್ಯಾ ಮಧುಕುಲ್ಯಾ ಮಿತ್ರವಿಂದಾ ತಥೈವ ಚ ॥೩೩॥**

---

ಸಮಸ್ತ ಪ್ರಜೆಗಳಿಗೂ ರಾಜನಾದ ಚಂದ್ರನು ಪ್ರಸನ್ನನಾಗಲಿ.

ಮದ್ಯದ ಸಮುದ್ರದ ಎರಡರಷ್ಟು ವಿಸ್ತಾರವಾದ ಕುಶದ್ವೀಪವು ತುಪ್ಪದ ಸಮುದ್ರದಿಂದ ಸುತ್ತಲ್ಪಟ್ಟಿರುವುದು. ಆ ದ್ವಿಪದಲ್ಲಿ ಆ ದ್ವೀಪದ ಹೆಸರಿಗೆ ಕಾರಣವಾದ ಕುಶಸ್ತಂಬವು ಎಂದರೆ ದರ್ಭೆಯ ಹುಲ್ಲುಗಳು ತಮ್ಮ ಕೋಮಲವಾದ ತುದಿಗಳ ಕಾಂತಿಯಿಂದ ದಿಕ್ಕುಗಳನ್ನು ಪ್ರಕಾಶಪಡಿಸುತ್ತಿರುವುವು. ||೨೭-೨೮||

ಆ ಕುಶದ್ವೀಪಕ್ಕೆ ಪ್ರಿಯವ್ರತನ ಮಗನಾದ ಹಿರಣ್ಯರೇತನೆಂಬವನು ರಾಜನಾಗಿರುವನು. ಆ ರಾಜನು ವಸು, ವಸುದಾನ, ದೃಢರುಚಿ, ನಾಭಿಗುಪ್ತ, ಸ್ತುತ್ಯವ್ರತ, ವಿವಿಕ್ತ, ಭಾಮದೇವ ಎಂಬ ತನ್ನ ಏಳು ಜನ ಮಕ್ಕಳಿಗೆ ಆದ್ವೀಪವನ್ನು ವಿಭಾಗ ಮಾಡಿಕೊಟ್ಟನು. ||೨೯-೩೦||

ಆ ಖಂಡಗಳಲ್ಲಿ ಚಕ್ರ, ಚತುಶ್ಶೃಂಗ, ಕಪಿಲ, ಚಿತ್ರಕೂಟ, ದೇವಾನೀಕ, ಊರ್ಧ್ವರೋಮಾ, ದ್ರವಿಣ ಎಂಬ ಏಳು ಪರ್ವತಗಳೂ, ರಸಕುಲ್ಯಾ, ಮಧುಕುಲ್ಯಾ,

ಶ್ರುತವಿಂದಾ ದೇವಗರ್ಭಾ ಘೃತಚ್ಯುತ್ ಮಂದಮಾಲಿಕೇ ।
ಯತ್ಪಯೋಭಿಃ ಕುಶದ್ವೀಪವಾಸಿನಃ ಸರ್ವ ಏವ ತೇ ॥೩೪॥

ಕುಶಲಃ ಕೋವಿದಶ್ಚೈವಾಽಪ್ಯಭಿಯುಕ್ತ ಸ್ತಥೈವ ಚ ।
ಕುಲಕಶ್ಚೇತಿ ಸಂಜ್ಞಾಭಿಶ್ಚತುರ್ವರ್ಣಾಃ ಪ್ರಕೀರ್ತಿತಾಃ ॥೩೫॥

ಜಾತವೇದಸರೂಪಂ ತಂ ದೇವಂ ಕರ್ಮಜಕೌಶಲೈಃ ।
ಯಜಂತೇ ದೇವವರ್ಯಾಭಾಃ ಸರ್ವೇ ಸರ್ವವಿದೋ ಜನಾಃ ॥೩೬॥

ಪರಸ್ಯ ಬ್ರಹ್ಮಣಃ ಸಾಕ್ಷಾಜ್ಜಾತವೇದೋಽಸಿ ಹವ್ಯವಾಟ್ ।
ದೇವಾನಾಂ ಪುರುಷಾಂಗಾನಾಂ ಯಜ್ಞೇನ ಪುರುಷಂ ಯಜ ॥೩೭॥
ಏವಂ ಯಜಂತೇ ಜ್ವಲನಂ ಸರ್ವೇ ದ್ವೀಪಾಧಿವಾಸಿನಃ ।

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಅಷ್ಟಮಸ್ಕಂಧೇ
ದ್ವಾದಶೋಽಧ್ಯಾಯಃ

---

ಮಿತ್ರವಿಂದಾ, ಶ್ರುತವಿಂದಾ, ದೇವಗರ್ಭಾ, ಘೃತಚ್ಯುತಾ,, ಮಂದಮಾಲಿಕಾ, ಎಂಬ ಏಳು ನದಿಗಳೂ ಇರುವುವು. ಆ ನದಿಗಳ ನೀರಿನಿಂದ ಆ ದ್ವೀಪವಾಸಿಗಳೆಲ್ಲರೂ ಬುದ್ಧಿವಂತರಾಗಿರುವರು. ||೩೧-೩೨-೩೩-೩೪||

ಆ ದ್ವೀಪದಲ್ಲಿ ಕುಶಲ, ಕೋವಿದ, ಅಭಿಯುಕ್ತ, ಕುಲಕ, ಎಂಬ ನಾಲ್ಕು ವರ್ಣಗಳಿರುವುವು. ಎಲ್ಲವನ್ನೂ ಬಲ್ಲ ದೇವತೆಗಳ ಸಮಾನರಾದ ಆ ಜನರು ಶ್ರೇಷ್ಠವಾದ ಯಜ್ಞಾದಿಕರ್ಮಗಳಿಂದ ಅಗ್ನಿರೂಪನಾದ ಪರಮಾತ್ಮನನ್ನು ಪೂಜಿಸುವರು. ||೩೫-೩೬||

ಆ ದ್ವೀಪದಲ್ಲಿರುವವರೆಲ್ಲರೂ ಓ, ಅಗ್ನಿಯೇ ನೀನು ಪರಬ್ರಹ್ಮನಿಗೆ ನಾವು ಕೊಟ್ಟ ಹವಿಸ್ಸನ್ನು ತೆಗೆದುಕೊಂಡು ಹೋಗಿ ಕೊಡತಕ್ಕವನು. ಬೇರೆ ಬೇರೆ ಹೆಸರುಗಳಿಂದ ಕೊಟ್ಟ ಹವಿಸ್ಸನ್ನು ಸಮಸ್ತ ದೇವತೆಗಳಿಗೂ ಕಾರಣನಾದ ಯಜ್ಞಪುರುಷನಾದ ಪರಮಾತ್ಮನಿಗೆ ಕೊಡು. ಎಂದು ಹೇಳಿ ಅಗ್ನಿದೇವನನ್ನು ಪೂಜಿಸುವರು. ||೩೭||

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಎಂಟನೆಯ ಸ್ಕಂಧದಲ್ಲಿ
ಹನ್ನೆರಡನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಅಷ್ಟಮಸ್ಕಂಧೇ

### ॥ ತ್ರಯೋದಶೋಽಧ್ಯಾಯಃ ॥

### ಹದಿಮೂರನೆಯ ಅಧ್ಯಾಯವು

॥ ನಾರದ ಉವಾಚ ॥

ಶಿಷ್ಟದ್ವೀಪಪ್ರಮಾಣಂ ಚ ವದ ಸರ್ವಾರ್ಥದರ್ಶನ ।
ಯೇನ ವಿಜ್ಞಾನಮಾತ್ರೇಣ ಪರಾನಂದಮಯೋಽಭವೇತ್ ॥೧॥

॥ ಶ್ರೀನಾರಾಯಣ ಉವಾಚ ॥

ಕುಶದ್ವೀಪಸ್ಯ ಪರಿತೋ ಘೃತೋದಾವರಣಂ ಮಹತ್ ।
ತತೋ ಬಹಿಃ ಕ್ರೌಂಚದ್ವೀಪೋ ದ್ವಿಗುಣಃ ಸ್ಯಾತ್ಸ್ವಮಾನತಃ ॥೨॥

ಕ್ಷೀರೋದೇನಾವೃತೋ ಭಾತಿ ಯಸ್ಮಿನ್ ಕ್ರೌಂಚಾದ್ರಿರಸ್ತಿ ಚ ।
ನಾಮನಿರ್ವರ್ತಕಃ ಸೋಽಯಂ ದ್ವೀಪಸ್ಯ ಪರಿವರ್ತತೇ ॥೩॥

---

ನಾರದನು ಹೇಳಿದನು—ಓ, ಸರ್ವಜ್ಞನಾದ ನಾರಾಯಣಮುನಿಯೇ ಮಿಕ್ಕ ದ್ವೀಪಗಳ ಅಳತೆ ಮುಂತಾದುವುಗಳನ್ನು ಹೇಳು. ಅವುಗಳನ್ನು ತಿಳಿದಮಾತ್ರಕ್ಕೆ ಪರಮಾನಂದವುಂಟಾಗುವುದು. ॥೧॥

ನಾರಾಯಣನು ಹೇಳಿದನು—ಕುಶದ್ವೀಪದ ಸುತ್ತಲೂ ಇರುವ ತುಪ್ಪದ ಸಮುದ್ರದ ಸುತ್ತಲೂ ಆ ಸಮುದ್ರದ ಎರಡರಷ್ಟು ವಿಸ್ತಾರವಾದ ಕ್ಷೀರಸಮುದ್ರದಿಂದ

ಸುತ್ತುವರಿದ ಕ್ರೌಂಚದ್ವೀಪವಿರುವುದು. ಅಲ್ಲಿ ಆ ದ್ವೀಪಕ್ಕೆ ಹೆಸರನ್ನು ಕೊಡುವುದಕ್ಕೆ ಕಾರಣವಾದ ಕ್ರೌಂಚಪರ್ವತವಿರುವುದು. ॥೨-೩॥

ಯೋಽಸೌ ಗುಹಸ್ಯ ಶಕ್ತ್ಯಾ ಚ ಭಿನ್ನಕುಕ್ಷಿಃ ಪುರಾಽಭವತ್ ।
ಕ್ಷೀರೋದೇನಾಸಿಚ್ಯಮಾನೋ ವರುಣೇನ ಚ ರಕ್ಷಿತಃ ॥೪॥

ಘೃತಪೃಷ್ಠೋ ನಾಮ ಯಸ್ಯ ವಿಭಾತಿ ಕಿಲ ನಾಯಕಃ ।
ಪ್ರಿಯವ್ರತಾತ್ಮಜಃ ಶ್ರೀಮಾನ್ ಸರ್ವಲೋಕನಮಸ್ಕೃತಃ ॥೫॥

ಸ್ವದ್ವೀಪಂ ತು ವಿಭಜ್ಯೈವ ಸಪ್ತಧಾ ಸ್ವಾತ್ಮಜಾನ್ದದೌ ।
ಪುತ್ರನಾಮಸು ವರ್ಷೇಷು ವರ್ಷಪಾನ್ ಸನ್ನಿವೇಶಯನ್ ॥೬॥

ಸ್ವಯಂ ಭಗವತಃ ತಸ್ಯ ಶರಣಂ ಸಂಜಗಾಮ ಹ ।
ಆಮೋ ಮಧುರುಹಶ್ಚೈವ ಮೇಘಪೃಷ್ಠಃ ಸುಧಾಮಕಃ ॥೭॥

ಭ್ರಾಜಿಷ್ಠೋ ಲೋಹಿತಾರ್ಣಶ್ಚ ವನಸ್ಪತಿರಿತೀವ ಚ ।
ನಗಾ ನದ್ಯಶ್ಚ ಸಪ್ತೈವ ವಿಖ್ಯಾತಾ ಭುವಿ ಸರ್ವತಃ ॥೮॥

ಶುಕ್ಲೋ ವೈವರ್ಧಮಾನಶ್ಚ ಭೋಜನಶ್ಚೋಪಬರ್ಹಣಃ ।
ನಂದಶ್ಚ ನಂದನಃ ಸರ್ವತೋಭದ್ರ ಇತಿ ಕೀರ್ತಿತಾಃ ॥೯॥

ಅಭಯಾ ಅಮೃತೌಘಾ ಚ ಆರ್ಯಕಾ ತೀರ್ಥವತೀತಿ ಚ ।
ವೃತ್ತಿರೂಪವತೀ ಶುಕ್ಲಾ ಪವಿತ್ರವತಿಕಾ ತಥಾ ॥೧೦॥

---

ಹಿಂದೆ ಆ ಕ್ರೌಂಚಪರ್ವತವನ್ನು ಷಣ್ಮುಖಸ್ವಾಮಿಯು ತನ್ನ ಶಕ್ತ್ಯಾಯುಧದಿಂದ ಸೀಳಿದನು. ಕ್ಷೀರಸಮುದ್ರದ ನೀರು ಆ ಪರ್ವತದ ಮೇಲೆ ಹಾರುತ್ತಿರುವುದು. ಆ ಬೆಟ್ಟವನ್ನು ವರುಣನು ಕಾಪಾಡುತ್ತಿರುವನು. ಆ ಕ್ರೌಂಚದ್ವೀಪಕ್ಕೆ ಪ್ರಿಯವ್ರತ ರಾಜನ ಮಗನಾದ ಘೃತಪೃಷ್ಠನೆಂಬವನು ರಾಜನಾಗಿರುವನು. ॥೪-೫॥

ಆ ರಾಜನು ತನ್ನ ಏಳುಜನ ಮಕ್ಕಳಿಗೆ ಆ ದ್ವೀಪವನ್ನು ಏಳು ಭಾಗವಾಗಿ ಮಾಡಿಕೊಟ್ಟು ಆ ಭಾಗಗಳಿಗೆ ತನ್ನ ಮಕ್ಕಳ ಹೆಸರನ್ನೇ ಇಟ್ಟನು. ತಾನು ಪರಮಾತ್ಮನ ಶರಣು ಹೊಂದಿ ಮುಕ್ತಿಯನ್ನು ಪಡೆದನು. ॥೬॥

ಆಮ, ಮಧುರುಹ, ಮೇಘಪೃಷ್ಠ, ಸುಧಾಮ, ಭ್ರಾಜಿಷ್ಠ, ಲೋಹಿತಾರ್ಣ, ವನಸ್ಪತಿ ಎಂಬ ಏಳು ಖಂಡಗಳ ಮತ್ತು ಆ ಖಂಡಾಧಿಪತಿಗಳ ಹೆಸರುಗಳು--ಶುಕ್ಲ, ವರ್ಧಮಾನ, ಭೋಜನ, ಉಪಬರ್ಹಣ, ನಂದ, ನಂದನ, ಸರ್ವತೋಭದ್ರ ಎಂಬ ಏಳು ಪರ್ವತಗಳು ಅಭಯಾ, ಅಮೃತೌಘಾ, ಆರ್ಯಕಾ, ತೀರ್ಥವತೀ, ವೃತ್ತಿರೂಪ

ಏತಾಸಾಮುದಕಂ ಪುಣ್ಯಂ ಚಾತುರ್ವರ್ಣ್ಯೇನ ಪೀಯತೇ ।
ಪುರುಷಋಷಭೌ ತದ್ವದ್ದ್ರವಿಣಾಖ್ಯಶ್ಚ ದೇವಕಃ ॥೧೧॥

ಏತೇ ಚತುರ್ವರ್ಣಜಾತಾಃ ಪುರುಷಾ ನಿವಸಂತಿ ಹಿ ।
ತತ್ರತ್ಯಾಃ ಪುರುಷಾ ಆಪೋಮಯಂ ದೇವ ಮಪಾಂಪತಿಂ ॥೧೨॥

ಪೂರ್ಣೇನಾಂಜಲಿನಾ ಭಕ್ತ್ಯಾ ಯಜಂತೇ ವಿವಿಧಕ್ರಿಯಾಃ ।
ಆಪಃ ಪುರುಷವೀರ್ಯಾಃ ಸ್ಥ ಪುನಂತೀ ಭೂರ್ಭುವಸ್ಸ್ವರಃ ॥೧೩॥

ತಾ ನಃ ಪುನೀತಾಮೀವಘ್ನೀಃ ಸ್ಪೃಶತಾಮಾತ್ಮನಾ ಭುವಃ ।
ಇತಿ ಮಂತ್ರಜಪಾಂತೇ ಚ ಸ್ತುವಂತಿ ವಿವಿಧೈ ಸ್ತವೈಃ ॥೧೪॥

ಏವಂ ಪರಸ್ತಾತ್ಕ್ಷೀರೋದಾತ್ಪರಿತ ಶ್ಚೋಪವೇಶಿತಃ ।
ದ್ವಾತ್ರಿಂಶಲ್ಲಕ್ಷಸಂಖ್ಯಾತಯೋಜನಾಯಾ ಮಮಾಶ್ರಿತಃ ॥೧೫॥

---

ವತೀ, ಶುಕ್ಲಾ, ಪವಿತ್ರವತೀ ಎಂಬ ಏಳು ನದಿಗಳು. ಈ ನದಿಗಳಲ್ಲಿರುವ ಪುಣ್ಯಕರವಾದ ನೀರನ್ನು ಆ ದ್ವೀಪದಲ್ಲಿರುವ ನಾಲ್ಕು ವರ್ಣದವರೂ ಕುಡಿಯುವರು. ||೭-೮-೯-೧೦||

ಆ ಕ್ರೌಂಚದ್ವೀಪದಲ್ಲಿ ಪುರುಷ, ಋಷಭ, ದ್ರವಿಣ, ದೇವಕ ಎಂಬ ನಾಲ್ಕು ವರ್ಣದ ಜನರು ವಾಸವಾಗಿರುವರು. ||೧೧||

ಅಲ್ಲಿರುವ ಜನರು ನೀರಿನ ರೂಪನಾದ ವರುಣದೇವನನ್ನು ಸಂಪೂರ್ಣವಾದ ಭಕ್ತಿಯಿಂದ ಕೈಮುಗಿದುಕೊಂಡು ಅನೇಕ ಬಗೆಯಲ್ಲಿ ಪೂಜಿಸುವರು. ||೧೨||

" ನೀರಿನ ದೇವತೆಯಾದ ವರುಣನೇ ನೀನು ಈಶ್ವರನಿಂದ ಪಡೆದ ಶಕ್ತಿಯುಳ್ಳವನಾಗಿರುವೆ. ಆದುದರಿಂದ ಮೂರು ಲೋಕಗಳನ್ನೂ ಪರಿಶುದ್ಧಮಾಡುವೆ. ಅಂತಹ ನೀನು ಆತ್ಮ ಸ್ವರೂಪದಿಂದಲೇ ಪಾಪವನ್ನು ನಾಶಮಾಡತಕ್ಕವನಾಗಿ ನಿನ್ನನ್ನು ಮುಟ್ಟತಕ್ಕ ನಮ್ಮ ಶರೀರಗಳನ್ನು ಪರಿಶುದ್ಧಮಾಡು " ಎಂಬ ಅರ್ಥದಿಂದ ಕೂಡಿದ ಮಂತ್ರವನ್ನು ಜಪಮಾಡಿದಮೇಲೆ ಅನೇಕ ಸ್ತೋತ್ರಗಳಿಂದ ಆ ದೇವನನ್ನು ಹೊಗಳುವರು. ||೧೩-೧೪||

ಓ ನಾರದನೇ, ಹೀಗೆಯೇ ಕ್ಷೀರಸಮುದ್ರದಿಂದಾಚೆಗೆ ಮೂವತ್ತೆರಡುಲಕ್ಷಯೋಜನ ವಿಸ್ತಾರವಾದ ಸುತ್ತಲೂ ಮೊಸರನ್ನು ಕಡೆದ ಮಜ್ಜಿಗೆಯಂತಿರುವ ನೀರಿನಿಂದ

ಸ್ವಮಾನೇನ ಚ ದ್ವೀಪೋಽಯಂ ದಧಿಮಂಡೋದಕೇನ ಚ ।
ಶಾಕದ್ವೀಪೋ ವಿಶಿಷ್ಟೋಽಯಂ ಯಸ್ಮಿನ್ ಶಾಕೋ ಮಹೀರುಹಃ ॥೧೬॥

ಸ್ವಕ್ಷೇತ್ರ ವ್ಯಪದೇಶಸ್ಯ ಕಾರಣಂ ಸ ಹಿ ನಾರದ ।
ಪ್ರೈಯ್ಯವ್ರತೋಽಧಿಪಃ ತಸ್ಯ ಮೇಧಾತಿಥಿರಿತಿ ಸ್ಮೃತಃ ॥೧೭॥

ವಿಭಜ್ಯ ಸಪ್ತ ವರ್ಷಾಣಿ ಪುತ್ರನಾಮಾನಿ ತೇಷು ಚ ।
ಸಪ್ತಪುತ್ರಾನ್ನಿಜಾನ್ ಸ್ಥಾಪ್ಯ ಸ್ವಯಂ ಯೋಗಗತಿಂ ಗತಃ ॥೧೮॥

ಪುರೋಜವೋ ಮನಃಪೂರ್ವಜವೋಽಥ ಪವಮಾನಕಃ ।
ಧೂಮ್ರಾನೀ(ನ)ಕಃ ಚಿತ್ರರೇಫೋ ಬಹುರೂಪೋಽಥ ವಿಶ್ವಧೃಕ್ ॥೧೯॥

ಮರ್ಯಾದಾ ಗಿರಯಃ ಸಪ್ತ ನದ್ಯಃ ಸಪ್ತೈವ ಕೀರ್ತಿತಾಃ ।
ಈಶಾನ ಉರುಶೃಂಗೋಽಥ ಬಲಭದ್ರಃ ಶತಕೇಸರಃ ॥೨೦॥

ಸಹಸ್ರಸ್ರೋತಕೋ ದೇವಪಾಲೋಽಪ್ಯಂತೇ ಮಹಾಶನಃ ।
ಏತೇಽದ್ರಯಃ ಸಪ್ತ ಚೋಕ್ತಾಃ ಸರಿನ್ನಾಮಾನಿ ಸಪ್ತ ಚ ॥೨೧॥

ಅನಘಾ ಪ್ರಥಮಾಯುರ್ದಾ ಉಭಯಸ್ಪೃಷ್ಟಿರೇವ ಚ ।
ಅಪರಾಜಿತಾ ಪಂಚಪದೀ ಸಹಸ್ರಸ್ರುತಿರೇವ ಚ ॥೨೨॥

---

ತುಂಬಿದ ಸಮುದ್ರವು ಸುತ್ತಿಕೊಂಡಿರುವ ಶಾಕದ್ವೀಪವೆಂಬ ಹೆಸರು ಬರಲು ಕಾರಣವಾದ ಶಾಕವೆಂಬ ಮರದಿಂದ ಕೂಡಿದ ದ್ವೀಪವಿರುವುದು. ॥೧೫-೧೬॥

ಆ ಶಾಕದ್ವೀಪಕ್ಕೆ ಪ್ರಿಯವ್ರತನ ಮಗನಾದ ಮೇಧಾತಿಥಿಯು ರಾಜನಾಗಿದಾನೆ. ಅವನು ತನ್ನ ಮಕ್ಕಳಾದ ಪುರೋಜವ, ಮನೋಜವ, ಪವಮಾನ, ಧೂಮ್ರಾನೀಕ, ಚಿತ್ರರೇಫ, ಬಹುರೂಪ, ವಿಶ್ವಧೃಕ್, ಎಂಬ ಏಳು ಜನರಿಗೆ ಅವರ ಹೆಸರಿನಿಂದ ಕೂಡಿದ ಖಂಡಗಳನ್ನು ವಿಭಾಗಮಾಡಿಕೊಟ್ಟು ತಾನು ಯೋಗಮಾರ್ಗದಿಂದ ಆತ್ಮಸ್ವರೂಪವನ್ನು ಪಡೆದನು. ॥೧೭-೧೮-೧೯॥

ಆ ದ್ವೀಪದಲ್ಲಿ ಈಶಾನ, ಉರುಶೃಂಗ, ಬಲಭದ್ರ, ಶತಕೇಸರ, ಸಹಸ್ರಸ್ರೋತ, ದೇವಪಾಲ, ಮಹಾನಸ ಎಂಬ ಏಳು ಪರ್ವತಗಳೂ, ಅನಘಾ, ಆಯುರ್ದಾ, ಉಭಯಸ್ಪೃಷ್ಟಿ, ಅಪರಾಜಿತಾ, ಪಂಚನದೀ, ಸಹಸ್ರಸ್ರುತಿ, ನಿಜಧೃತಿ, ಎಂಬ ಏಳು ಪ್ರಕಾಶವಾದ ನದಿಗಳೂ ಇರುವುವು. ॥೨೦-೨೧-೨೨॥

ತತೋ ನಿಜಧೃತಿಶ್ಲೋಕ್ತಾಃ ಸಪ್ತನದ್ಯೋ ಮಹೋಜ್ವಲಾಃ ।
ತದ್ವರ್ಷಪುರುಷಾಃ ಸರ್ವೇ ಸತ್ಯವ್ರತಕ್ರತುವ್ರತೌ ॥೨೩॥

ದಾನವ್ರತಾನುವ್ರತೌ ಚ ಚತುರ್ವರ್ಣಾ ಉದೀರಿತಾಃ ।
ಭಗವಂತಂ ಪ್ರಾಣವಾಯುಂ ಪ್ರಾಣಾಯಾಮೇನ ಸಂಯುತಾಃ॥೨೪॥

ಯಜಂತಿ ನಿರ್ಧೂತರಜಸ್ತಮಸಃ ಪರಮಂ ಹರಿಂ ।
ಅಂತಃ ಪ್ರವಿಶ್ಯ ಭೂತಾನಿ ಯೋ ಬಿಭರ್ತ್ಯಾತ್ಮಕೇತುಭಿಃ ॥೨೫॥

ಅಂತರ್ಯಾಮೀಶ್ವರಃ ಸಾಕ್ಷಾತ್ಪಾತು ನೋ ಯದ್ವಶೇ ಇದಂ ।
ಪರಸ್ತಾದ್ದಧಿಮಂಡೋದಾತ್ತತಸ್ತು ಬಹುವಿಸ್ತರಃ ॥೨೬॥

ಪುಷ್ಕರದ್ವೀಪನಾಮಾಽಯಂ ಶಾಕದ್ವೀಪದ್ವಿಸಂಗುಣಃ ।
ಸ್ವಸಮಾನೇನ ಸ್ವಾದೂದಕೇನಾಯಂ ಪರಿವೇಷ್ಟಿತಃ ॥೨೭॥

ಯತ್ರಾಸ್ತೇ ಪುಷ್ಕರಂ ಭ್ರಾಜತ್ ಅಗ್ನಿಚೂಡಾನಿ ಭಾನಿ ಚ ।
ಪತ್ರಾಣಿ ವಿಶದಾನೀಹ ಸ್ವರ್ಣಪತ್ರಾಯುತಾಯುತಂ ||೨೮॥

---

ಆ ಖಂಡಗಳಲ್ಲಿರುವ ಜನರು ಸತ್ಯವ್ರತ, ಕ್ರತುವ್ರತ, ದಾನವ್ರತ, ಅನುವ್ರತ, ಎಂಬ ನಾಲ್ಕು ವರ್ಣವಿಭಾಗದಿಂದಿರುವರು. ಅವರೆಲ್ಲರೂ ಪ್ರಾಣಾಯಾಮಮಾಡಿ, ರಜಸ್ತಮೋಗುಣಗಳನ್ನು ಕಳೆದುಕೊಂಡು ಪರಮಾತ್ಮಸ್ವರೂಪನಾದ ಪ್ರಾಣವಾಯುವನ್ನು ಪೂಜಿಸುವರು. ಆ ಪ್ರಾಣವಾಯುವು ಪ್ರಾಣಿಗಳ ಶರೀರದೊಳಗೆ ಪ್ರವೇಶಮಾಡಿ ತನ್ನ ಪ್ರಾಣಾದಿವೃತ್ತಿಗಳಿಂದ ಪ್ರಾಣಿಗಳನ್ನು ಬದುಕಿರುವಂತೆ ಮಾಡಿರುವುದರಿಂದ ಅವನೇ ಅಂತರ್ಯಾಮಿಯಾದ ಸಾಕ್ಷಾತ್ ಈಶ್ವರನು. ಅವನ ವಶದಲ್ಲಿಯೇ ಈ ಶರೀರಾದಿಗಳಿರುವುದರಿಂದ ಅವನೇ ನಮ್ಮನ್ನು ಕಾಪಾಡಲಿ ಎಂದು ಸ್ತೋತ್ರಮಾಡುವರು. ||೨೩-೨೪-೨೫||

ಮಜ್ಜಿಗೆಯ ಸಮುದ್ರದಿಂದಾಚೆಗೆ ಶಾಕದ್ವೀಪದ ಎರಡರಷ್ಟು ವಿಶಾಲವಾದ ಪುಷ್ಕರದ್ವೀಪವೆಂಬುದು ಶಧ್ಧವಾದ ಸಿಹಿನೀರಿನ ಸಮುದ್ರದಿಂದ ಸುತ್ತಿಕೊಳ್ಳಲ್ಪಟ್ಟಿರುವುದು. ಆ ದ್ವೀಪದಲ್ಲಿ ಬೆಂಕಿಯಉರಿಯ ಬಣ್ಣದಂತೆ ಇರುವ ಚಿನ್ನದ ಕಮಲವು ವಿಸ್ತಾರವಾದ ಹತ್ತು ಹತ್ತುಸಾವಿರದಳಗಳಿಂದ ಕೂಡಿರುವುದು. ||೨೬-೨೭-೨೮||

ಶ್ರೀಮದ್ಭಗವತಶ್ಚೇದಂ ಆಸನಂ ಪರಮೇಷ್ಠಿನಃ ।
ಕಲ್ಪಿತಂ ಲೋಕಗುರುಣಾ ಸರ್ವಲೋಕಸಿಸೃಕ್ಷಯಾ ॥೨೯॥

ತದ್ದ್ವೀಪ ಏಕ ಏವಾಽಯಂ ಮಾನಸೋತ್ತರನಾಮಕಃ ।
ಅರ್ವಾಚೀನಪರಾಚೀನವರ್ಷಯೋ ರವಧಿಃ ಗಿರಿಃ ॥೩೦॥

ಉಚ್ಛ್ರಾಯಾಯಾಮಯೋಃ ಸಂಖ್ಯಾಯುತಯೋಜನಸಂಮಿತಾ ।
ಯತ್ರ ದಿಕ್ಷು ಚ ಚತ್ವಾರಿ ಚತಸೃಷು ಪುರಾಣಿ ಹ ॥೩೧॥

ಇಂದ್ರಾದಿಲೋಕಪಾಲಾನಾಂ ಯದುಪರ್ಯರ್ಕನಿರ್ಗಮಃ ।
ಮೇರುಂ ಪ್ರದಕ್ಷಿಣೀಕುರ್ವನ್ಭಾನುಃ ಪರ್ಯೇತಿ ಯತ್ರ ಹಿ ॥೩೨॥

ಸಂವತ್ಸರಾತ್ಮಕಂ ಚಕ್ರಂ ದೇವಾಹೋರಾತ್ರತೋ ಭ್ರಮನ್ ।
ಪ್ರೈಯ್ಯವ್ರತೋಽಧಿಪೋ ವೀತಿಹೋತ್ರಃ ಸ್ವಾತ್ಮಜಕೆದ್ವಯಂ ॥೩೩॥

ವರ್ಷದ್ವಯೇ ಪರಿಸ್ಥಾಪ್ಯ ವರ್ಷನಾಮುಧರಂ ಕ್ರಮಾತ್ ।
ರಮಣೋ ಧಾತಕಿಶ್ಚೈವ ತತ್ತದ್ವರ್ಷಪತೀ ಉಭೌ ॥೩೪॥

---

ಆ ಚಿನ್ನದ ಕಮಲವು ಭಗವಂತನಾದ ಬ್ರಹ್ಮನಿಗೆ ಪೀಠವಾಗಿರುವುದು. ಸಮಸ್ತಲೋಕವನ್ನೂ ಸೃಷ್ಟಿಮಾಡಬೇಕೆಂಬ ಅಪೇಕ್ಷೆಯಿಂದ ಲೋಕಕ್ಕೆ ದೊಡ್ಡವನಾದ ಆ ಬ್ರಹ್ಮನು ಇದನ್ನು ಕಲ್ಪಿಸಿದನು (ಸೃಷ್ಟಿಸಿದನು) ॥೨೯॥

ಆ ಪುಷ್ಕರದ್ವೀಪದಲ್ಲಿ ಪೂರ್ವಪಶ್ಚಿಮ ವರ್ಷಗಳಿಗೆ ಮೇರೆಯಾಗಿ ಮಾನಸೋತ್ತರವೆಂಬ ಒಂದೇಒಂದು ಪರ್ವತವಿರುವುದು. ಅದರ ಎತ್ತರ ಮತ್ತು ವಿಸ್ತಾರವು ಹತ್ತುಸಾವಿರಯೋಜನವಿರುವುದು. ಆ ಪರ್ವತದ ನಾಲ್ಕು ದಿಕ್ಕುಗಳಲ್ಲಿ ಇಂದ್ರಾದಿ ನಾಲ್ಕು ಲೋಕಪಾಲಕರ ಪಟ್ಟಣಗಳಿರುವುವು. ಆ ಪರ್ವತದ ಮೇಲಿನ ಭಾಗದಿಂದ ಸೂರ್ಯನು ಸಂಚಾರಮಾಡುವನು. ॥೩೦-೩೧॥

ಅಲ್ಲಿ ದೇವತೆಗಳಿಗೆ ಹಗಲು ರಾತ್ರಿಗಳರೂಪವಾದ ಉತ್ತರಾಯಣ ದಕ್ಷಿಣಾಯನಗಳನ್ನುಂಟುಮಾಡುತ್ತ ವರ್ಷವೆಂಬ ಚಕ್ರವನ್ನು ಸುತ್ತಿಸುತ್ತ ಮೇರುಪರ್ವತವನ್ನು ಪ್ರದಕ್ಷಿಣೆಮಾಡುತ್ತ ಸೂರ್ಯನು ಸುತ್ತುತ್ತಿರುವನು. ॥೩೨॥

ಆ ಪುಷ್ಕರದ್ವೀಪಕ್ಕೆ ಪ್ರಿಯವ್ರತನ ಮಗನಾದ ವೀತಿಹೋತ್ರನು ದೊರೆಯಾ

ಕೃತಾಃ ಸ್ವಯಂ ಪೂರ್ವಜವತ್ ಭಗವದ್ಭಕ್ತಿತತ್ಪರಾಃ ।
ತದ್ವರ್ಷಪುರುಷಾ ಬ್ರಹ್ಮರೂಪಿಣಂ ಪರಮೇಶ್ವರಂ ॥೩೫॥

ಸಕರ್ಮಕೇನ ಯೋಗೇನ ಯಜಂತಿ ಪರಿಶೀಲಿತಾಃ ।
ಯತ್ತತ್ಕರ್ಮಮಯಂ ಲಿಂಗಂ ಬ್ರಹ್ಮಲಿಂಗಂ ಜನೋಽರ್ಚಯೇತ್ ॥೩೬॥
ಏಕಾಂತಮದ್ವಯಂ ಶಾಂತಂ ತಸ್ಮೈ ಭಗವತೇ ನಮಃ ।

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಅಷ್ಟಮಸ್ಕಂಧೇ
ತ್ರಯೋದಶೋಽಧ್ಯಾಯಃ

---

ಗಿದ್ದು ತನ್ನ ಇಬ್ಬರು ಮಕ್ಕಳಾದ ರಮಣ, ಧಾತಕಿ ಎಂಬವರಿಗೆ ಎರಡುಖಂಡಗಳನ್ನೂ ವಿಭಾಗಮಾಡಿಕೊಟ್ಟು ಆ ಖಂಡಗಳಿಗೂ ಅದೇ ಹೆಸರನ್ನಿಟ್ಟನು. ॥೩೩-೩೪॥

ಆ ಖಂಡಗಳಲ್ಲಿರುವ ಜನರು ಪರಮಾತ್ಮನಲ್ಲಿ ಭಕ್ತಿಯಿಂದ ಕೂಡಿದವರಾಗಿ ಬ್ರಹ್ಮರೂಪನಾದ ಪರಮೇಶ್ವರನನ್ನು ಬ್ರಹ್ಮಸಾಲೋಕ್ಯಾದಿ ಕರ್ಮಫಲವನ್ನು ಕೊಡುವ ಕರ್ಮಯೋಗದಿಂದ ಕರ್ಮಸ್ವರೂಪನಾದ ಬ್ರಹ್ಮಲಿಂಗವನ್ನು ಪೂಜಿಸುವರು. ಆ ಬ್ರಹ್ಮಲಿಂಗವು ದ್ವಿತೀಯವಸ್ತುವಿಲ್ಲದ ಒಂದೇಆದ ಶಾಂತವಾದ ಪರಬ್ರಹ್ಮಸ್ವರೂಪವು. ಅಂತಹ ಬ್ರಹ್ಮತತ್ವಕ್ಕೆ ನಮಸ್ಕಾರವು. ॥೩೫-೩೬॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಎಂಟನೆಯ ಸ್ಕಂಧದಲ್ಲಿ
ಹದಿಮೂರನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಅಷ್ಟಮಸ್ಕಂಧೇ

|| ಚತುರ್ದಶೋಽಧ್ಯಾಯಃ ||

### ಹದಿನಾಲ್ಕನೆಯ ಅಧ್ಯಾಯವು

|| ಶ್ರೀ ನಾರಾಯಣ ಉವಾಚ ||

**ತತಃ ಪರಸ್ತಾದಚಲೋ ಲೋಕಾಲೋಕೇತಿ ನಾಮಕಃ ।**
**ಅಂತರಾಳೇ ಚ ಲೋಕಾಲೋಕಯೋರ್ಯಃ ಪರಿಕಲ್ಪಿತಃ ॥೧॥**

**ಯಾವದಸ್ತಿ ಚ ದೇವರ್ಷೇ ಹ್ಯಂತರಂ ಮಾನಸೋತ್ತರಾತ್ ।**
**ಸುಮೇರೋಃ ಸ್ತಾವತೀ ಶುದ್ಧಾ ಕಾಂಚನೀ ಭೂಮಿರಸ್ತಿ ಹಿ ॥೨॥**

---

ನಾರಾಯಣನು ಹೇಳಿದನು—ಶುದ್ಧೋದಕಸಮುದ್ರದಿಂದಾಚೆಗೆ ಸೂರ್ಯಾದಿಗಳ ಪ್ರಕಾಶವುಳ್ಳ ಪ್ರದೇಶಕ್ಕೂ ಆ ಪ್ರಕಾಶವಿಲ್ಲದ ಪ್ರದೇಶಕ್ಕೂ ಮಧ್ಯದಲ್ಲಿ ಲೋಕಾಲೋಕವೆಂಬ ಪರ್ವತವಿರುವುದು. ಪ್ರಕಾಶವುಳ್ಳ ಮತ್ತು ಪ್ರಕಾಶವಿಲ್ಲದ ಪ್ರದೇಶಗಳ ವಿಭಾಗಕ್ಕೋಸ್ಕರವಾಗಿ ಈ ಪರ್ವತವು ಕಲ್ಪಿಸಲ್ಪಟ್ಟಿರುವುದು. ||೧||

ಉತ್ತರಮಾನಸಕ್ಕೂ ಸುಮೇರುವಿಗೂ ನಡುವೆ ಶುದ್ಧೋದಕಸಮುದ್ರದಿಂದಾಚೆಗೆ ಇರುವ ಒಂದೂವರೆಕೋಟಿಯೂ ಏಳೂವರೆ ಲಕ್ಷ ಯೋಜನದಳತೆಯ ಭೂಮಿಯು ಸುವರ್ಣಭೂಮಿಯಾಗಿರುವುದು. ಅಲ್ಲಿ ಪ್ರಾಣಿಗಳೂ ವಾಸವಾಗಿರುವುವು. ಇದಕ್ಕಿಂತ ಬೇರೆಯಾದ ಸುವರ್ಣಭೂಮಿಯು ಎಂಟುಕೋಟಿ ಮೂವತ್ತೊಂಭತ್ತು ಲಕ್ಷ ಯೋಜನದಳತೆಯಿಂದಿರುವುದು. ಅರ್ಧ ಪುಷ್ಕರದ್ವೀಪದೊಡನೆ ಕೂಡಿದ ಶುದ್ಧೋದಕ ಸಮುದ್ರವು ತೊಂಬತ್ತಾರು ಲಕ್ಷ ಯೋಜನದ ಅಳತೆಯುಳ್ಳದು. ಹೀಗಾದರೆ ಮೇರು ಮತ್ತು ಲೋಕಾಲೋಕ ಪರ್ವತಗಳ ಅಂತರವು ಹನ್ನೆರಡೂವರೆ

**ದರ್ಪಣೋದರತುಲ್ಯಾ ಸಾ ಸರ್ವಪ್ರಾಣಿವಿವರ್ಜಿತಾ ।**
**ಯಸ್ಯಾಂ ಪದಾರ್ಥಃ ಪ್ರಹಿತೋ ನ ಕಿಂಚಿತ್ ಪ್ರತ್ಯುದೀಯತೇ ॥೩॥**

**ಅತಃ ಸರ್ವಪ್ರಾಣಿಸಂಘರಹಿತಾ ಸಾ ಚ ನಾರದ ।**
**ಲೋಕಾಲೋಕ ಇತಿ ವ್ಯಾಖ್ಯಾ ಯದತ್ರ ಪರಿಕಲ್ಪಿತಾ ॥೪॥**

**ಲೋಕಾಲೋಕಾಂತರೇ ಚಾಸ್ಯ ವರ್ತತೇ ಸರ್ವದಾ ಸ್ಥಿತಿಃ ।**
**ಈಶ್ವರೇಣ ಸಲೋಕಾನಾಂ ತ್ರಯಾಣಾ ಮಂತಗಃ ಕೃತಃ ॥೫॥**

**ಸೂರ್ಯಾದೀನಾಂ ಧ್ರುವಾಂತಾನಾಂ ರಶ್ಮಯೋ ಯದ್ವಶಾದಿಹ ।**
**ಅರ್ವಾಚೀನಾಶ್ಚ ತ್ರೀನ್ಲೋಕಾನಾತನ್ವಾನಾಃ ಕದಾಪಿ ಹಿ ॥೬॥**

---

ಕೋಟಿ ಯೋಜನದಳತೆಯು ಮುಂದೆ ಹೇಳುವಂತೆ ಸರಿಯಾಗುವುದು. ಇದನ್ನೇ ಶೈವತಂತ್ರದಲ್ಲಿ ಈ ಮುಂದಿನ ಶ್ಲೋಕಗಳಿಂದ ಹೇಳಿರುವುದು.

ಕೋಟಿದ್ವಯಂ ತ್ರಿಪಂಚಾಶಲ್ಲಕ್ಷಾಣಿ ಚ ತತಃ ಪರಂ ।
ಪಂಚಾಶಚ್ಚ ಸಹಸ್ರಾಣಿ ಸಪ್ತದ್ವೀಪಾಃ ಸಮಾಗತಾಃ
ತತೋ ಹೇಮಮಯೀ ಭೂಮಿರ್ದಶಕೋಟಿರ್ವರಾನನೇ ।
ದೇವಾನಾಂ ಕ್ರೀಡನಾರ್ಥಾಯ ಲೋಕಾಲೋಕಃ ತತಃ ಪರಂ ॥

ಇಲ್ಲಿ ಹೇಳಿದ ಹತ್ತುಕೋಟಿ ಎಂಬುದು ಹಿಂದೆ ಹೇಳಿದ ಸುವರ್ಣಭೂಮಿಯೂ ಸೇರಿಕೊಂಡೆಂದು ತಿಳಿಯಬೇಕು. ॥೨॥

ಆ ಲೋಕಾಲೋಕ ಪ್ರದೇಶವು ಕನ್ನಡಿಯೊಳಗೆ ಕಾಣುವ ಪ್ರದೇಶದಂತಿರುವುದು. ಆ ಪ್ರದೇಶದಲ್ಲಿ ಸುವರ್ಣ ಹೊರತಾಗಿ ಮತ್ತೊಂದು ಪದಾರ್ಥವೂ ದೊರೆಯುವುದಿಲ್ಲ. ಆದುದರಿಂದ ಅಲ್ಲಿ ದೇವತೆಗಳು ಹೊರತು ಮತ್ತಾವ ಪ್ರಾಣಿಯೂ ಇರುವುದಿಲ್ಲ. ॥೩॥

ಪ್ರಕಾಶಕ್ಕೂ ಪ್ರಕಾಶರಹಿತ ದೇಶಕ್ಕೂ ನಡುವೆ ಇರುವ ಕಾರಣದಿಂದ ಲೋಕಾಲೋಕವೆಂಬ ಹೆಸರನ್ನು ಪಡೆದ ಈ ಪ್ರದೇಶವನ್ನು ಈಶ್ವರನು ಮೂರು ಲೋಕದ ಕೊನೆಯ ಎಲ್ಲೆಕಟ್ಟಾಗಿ ಮಾಡಿರುವನು. ॥೪-೫॥

ಎಲೈ ನಾರದನೇ, ಸೂರ್ಯನು ಮೊದಲಾಗಿ ಧ್ರುವಮಂಡಲದ ಪರ್ಯಂತವಾಗಿರುವ ಸಮಸ್ತ ಗ್ರಹನಕ್ಷತ್ರಗಳ ಕಾಂತಿಗಳು ಈ ಲೋಕಾಲೋಕ ಪರ್ವತದ ಒಂದು

**ಪರಾಚೀನತ್ವಭಾಜೋ ಹಿ ನ ಭವಂತಿ ಚ ನಾರದ ।**
**ತಾವದುನ್ನಹನಾಯಾಮಃ ಪರ್ವತೇಂದ್ರೋ ಮಹೋದಯಃ ॥೭॥**

**ಏತಾವಾನ್ಲೋಕವಿನ್ಯಾಸೋ ಯಂ ಸಂಸ್ಥಾ ಮಾನಲಕ್ಷಣೈಃ ।**
**ಕವಿಭಿಃ ಸ ತು ಪಂಚಾಶತ್ಕೋಟಿಭಿಃ ಗಣಿತಸ್ಯ ಚ ॥೮॥**

**ಭೂಗೋಲಸ್ಯ ಚತುರ್ಥಾಂಶೋ ಲೋಕಾಲೋಕಾಚಲೋ ಮುನೇ ।**
**ತಸ್ಯೋಪರಿ ಚತುರ್ದಿಕ್ಷು ಬ್ರಹ್ಮಣಾ ಚಾತ್ಮಯೋನಿನಾ ॥೯॥**

**ನಿವೇಶಿತಾ ದಿಗ್ಗಜಾ ಯೇ ತನ್ನಾಮಾನಿ ನಿಬೋಧತ ।**
**ಋಷಭಃ ಪುಷ್ಪಚೂಡೋಽಥ ವಾಮನೋಽಥಾಪರಾಜಿತಃ ॥೧೦॥**

**ಏತೇ ಸಮಸ್ತಲೋಕಸ್ಯ ಸ್ಥಿತಿಹೇತವ ಈರಿತಾಃ ।**
**ತೇಷಾಂ ಚ ಸ್ವವಿಭೂತೀನಾಂ ಬಹು ವೀರ್ಯೋಪಬೃಂಹಣಂ ॥೧೧॥**

---

ಭಾಗದಲ್ಲಿರುವ ಮೂರು ಲೋಕಗಳನ್ನೂ ಪ್ರಕಾಶಗೊಳಿಸುವುವು. ಮತ್ತೊಂದು ಭಾಗವನ್ನು ಪ್ರಕಾಶಗೊಳಿಸಲಾರವು. ಹೀಗಾಗುವುದಕ್ಕೆ ಆ ಪರ್ವತವು ಅಷ್ಟು ಎತ್ತರವೂ ವಿಸ್ತಾರವೂ ಉಳ್ಳದ್ದಾಗಿ ಇರುವುದೇ ಕಾರಣವು. ||೬-೭||

ಕವಿಗಳು ಆ ಪರ್ವತವಿರುವ ಸ್ಥಿತಿಯನ್ನು ನೋಡಿ ಅದು ಐವತ್ತುಕೋಟಿ ಯೋಜನ ವಿಸ್ತಾರವಾದುದೆಂದೂ ಇದರ ನಾಲ್ಕನೆಯ ಒಂದುಭಾಗವು ಅಂದರೆ ಹನ್ನೆರಡುವರೆಲಕ್ಷ ಯೋಜನವು ಭೂಗೋಲದ ವಿಸ್ತಾರವೆಂದೂ ಹೇಳಿರುವರು. ಆ ಲೋಕಾಲೋಕ ಪರ್ವತದ ಮೇಲೆ ನಾಲ್ಕು ದಿಕ್ಕುಗಳಲ್ಲಿಯೂ ತಾನಾಗಿಯೇ ಹುಟ್ಟಿದ ಬ್ರಹ್ಮನು ದಿಗ್ಗಜಗಳನ್ನಿಟ್ಟಿರುವನು. ಆ ದಿಗ್ಗಜಗಳ ಹೆಸರನ್ನು ಹೇಳುವೆನು. ಕೇಳು. ||೮-೯||

ಋಷಭ, ಪುಷ್ಪಚೂಡ, ವಾಮನ, ಅಪರಾಜಿತ ಎಂಬ ನಾಲ್ಕು ದಿಗ್ಗಜಗಳು ಸಮಸ್ತ ಲೋಕಗಳ ಸ್ಥಿತಿಗೂ ಕಾರಣಗಳು. ||೧೦||

ಪುರಾತನನಾದ ವಿಷ್ಣುವು ತನ್ನ ಶುದ್ಧವಾದ ಸತ್ವಗುಣವನ್ನು ಹೆಚ್ಚಿಸುತ್ತ ತನ್ನ ಅಂಶವಾದ ದಿಗ್ಗಜಗಳಿಗೂ ಇಂದ್ರಾದಿ ದೇವತೆಗಳಿಗೂ ಶಕ್ತಿಯನ್ನು ಹೆಚ್ಚು

ವಿಶುದ್ಧಸತ್ವಂ ಚೈಶ್ವರ್ಯಂ ವರ್ಧಯನ್ ಭಗವಾನ್ಹರಿಃ ।
ಆಸ್ತೇ ಸಿದ್ಧ್ಯಷ್ಟಕೋಪೇತೋ ವಿಷ್ವಕ್ಸೇನಾದಿ ಸಂವೃತಃ ॥೧೨॥

ನಿಜಾಯುಧೈಃ ಪರಿವೃತೋ ಭುಜದಂಡೈಃ ಸಮಂತತಃ ।
ಆಸ್ತೇ ಸಕಲಲೋಕಸ್ಯ ಸ್ವಸ್ತಯೇ ಪರಮೇಶ್ವರಃ ॥೧೩॥

ಆಕಲ್ಪಮೇವಂ ವೇಷಂ ಸ ಗತೋ ವಿಷ್ಣುಃ ಸನಾತನಃ ।
ಸ್ವಮಾಯಾರಚಿತಸ್ಯಾಸ್ಯ ಗೋಪೀಥಾಯಾತ್ಮಸಾಧನಃ ॥೧೪॥

ಯೋಽಂತರ್ವಿಸ್ತಾರ ಏತೇನಹ್ಯಲೋಕ ಪರಿಮಾಣಕಂ ।
ವ್ಯಾಖ್ಯಾತಂ ಯದ್ಬಹಿರ್ಲೋಕಾಲೋಕಾಚಲ ಇತೀರಣಾತ್ ॥೧೫॥

ತತಃ ಪರಸ್ತಾದ್ಯೋಗೇಶ ಗತಿಂ ಶುದ್ಧಾಂ ವದಂತಿ ಹಿ ।
ಅಂಡಮಧ್ಯಗತಃ ಸೂರ್ಯೋದ್ಯಾವಾಭೂಮ್ಯೋರ್ಯದಂತರಂ ॥೧೬॥

ಸೂರ್ಯಾಂಡಗೋಳಯೋರ್ಮಧ್ಯೇ ಕೋಟ್ಯಃ ಸ್ಯುಃ ಪಂಚವಿಂಶತಿಃ ।
ಮೃತೇಽಂಡಏಷ ಏತಸ್ಮಿನ್ ಜಾತೋ ಮಾರ್ತಾಂಡ ಶಬ್ದಭಾಕ್ ॥೧೭॥

---

ಮಾಡುತ್ತ ಅಣಿಮಾದ್ಯಷ್ಟಸಿದ್ಧಿಗಳಿಂದ ಕೂಡಿ ತನ್ನ ಸುತ್ತಲೂ ಸೇನೆಗಳಿಂದಲೂ ತನ್ನ ತೋಳುಗಳಲ್ಲಿ ಶಂಖಚಕ್ರಾದ್ಯಾಯುಧಗಳಿಂದಲೂ ಶೋಭಿಸುತ್ತ ತನ್ನ ಮಾಯೆಯಿಂದ ಕಲ್ಪಿತವಾದ ಈ ಲೋಕದ ರಕ್ಷಣಾರ್ಥವಾಗಿಯೂ ಮತ್ತು ಮಂಗಳಕ್ಕಾಗಿಯೂ ತಾನೇ ಕಾರಣನಾಗಿ ಆ ಲೋಕಾಲೋಕಪರ್ವತದಲ್ಲಿರುವನು. ಇಲ್ಲಿ ಮೂಲ ವ್ಯಾಖ್ಯಾನಗಳಲ್ಲಿ ಸ್ವಲ್ಪ ಭೇದವಿದೆ. ॥೧೧-೧೨-೧೩-೧೪॥

ಮೇರುವಿನ ಒಂದು ಒಳಭಾಗದಲ್ಲಿ ಸೂರ್ಯಾದಿಗಳ ಕಾಂತಿಯು ಬೀಳುವ ಪ್ರದೇಶವು ಹನ್ನೆರಡೂವರೆಕೋಟಿ ಯೋಜನ ವಿಸ್ತಾರವೆಂದು ಹಿಂದೆ ಹೇಳಿದೆ. ಹೀಗೆ ಹೇಳುವುದಕ್ಕೆ ಹೊರಭಾಗದಲ್ಲಿ ಲೋಕಾಲೋಕಪರ್ವತವಿರುವುದೆಂದು ಹೇಳಿದುದೇ ಕಾರಣವಾಗಿದೆ. ॥೧೫॥

ಎಲೈ ನಾರದನೇ, ಆ ಲೋಕಾಲೋಕಪರ್ವತದ ಆಚೆಗೆ ಹೋಗುವುದನ್ನೇ ಪರಿಶುದ್ಧಸ್ಥಾನಗಮನವೆಂದು ಹೇಳುವರು. ಆ ಪ್ರದೇಶವನ್ನು ಶ್ರೀಕೃಷ್ಣನು ತನ್ನ ಗುರುವಾದ ಸಾಂದೀಪನ ಪುತ್ರನನ್ನು ತಂದುಕೊಡುವ ಸಂದರ್ಭದಲ್ಲಿ ಅರ್ಜುನನಿಗೆ ತೋರಿಸಿದನು. ಭೂಮಿಗೂ ಸ್ವರ್ಗಲೋಕಕ್ಕೂ ನಡುವೆ ಸೂರ್ಯಮಂಡಲವಿರುವುದು.

ಹಿರಣ್ಯಗರ್ಭ ಇತಿ ಯದ್ಧಿರಣ್ಯಾಂಡಸಮುದ್ಭವಃ ।
ಸೂರ್ಯೇಣ ಹಿ ವಿಭಜ್ಯಂತೇ ದಿಶಃ ಖಂ ದ್ಯೌಃ ಮಹೀ ಭಿದಾ ॥೧೮॥

ಸ್ವರ್ಗಾಪವರ್ಗೌ ನರಕೌ ರಸೌಕಾಂಸಿ ಚ ಸರ್ವಶಃ ।
ದೇವತಿರ್ಯಙ್ಮನುಷ್ಯಾಣಾಂ ಸರೀಸೃಪಸವೀರುಧಾಂ ॥೧೯॥

ಸರ್ವಜೀವನಿಕಾಯಾನಾಂ ಸೂರ್ಯ ಆತ್ಮಾ ದೃಗೀಶ್ವರಃ ।
ಏತಾವಾನ್ ಭೂಮಂಡಲಸ್ಯ ಸನ್ನಿವೇಶ ಉದಾಹೃತಃ ॥೨೦॥

ಏತೇನ ಹಿ ದಿವೋ ಮಾನಂ ವರ್ಣಯಂತಿ ಚ ತದ್ವಿದಃ ।
ದ್ವಿದಲಾನಾಂ ಚ ನಿಷ್ಪಾವಾದೀನಾಂ ಚ ದಲಯೋರ್ಯಥಾ ॥೨೧॥

ಅಂತರೇಣ ತಯೋರಂತರಿಕ್ಷಂ ತದುಭಯಸಂಧಿತಂ ।
ಯನ್ಮಧ್ಯಗಶ್ಚ ಭಗವಾನ್ ಭಾನುರ್ನ್ವೈ ತಪತಾಂ ವರಃ ॥೨೨॥
ಆತಪೇನ ತ್ರಿಲೋಕಂ ಚ ಪ್ರತಪತ್ಯೇವ ಭಾಸಯನ್ ।

---

ಈ ಸೂರ್ಯಮಂಡಲಕ್ಕೂ ಭೂಗೋಳಕ್ಕೂ ನಡುವೆ ಇಪ್ಪತ್ತೈದುಕೋಟಿ ಯೋಜನ ದೂರವಿರುವುದು. ಅಚೇತನವಾದ ಅಂಡದಲ್ಲಿ ಸೂರ್ಯರೂಪನೂ ಆದ ಆತ್ಮನು ವಿರಾಟ್‌ರೂಪದಿಂದ ಪ್ರವೇಶಮಾಡಿರುವುದರಿಂದ ಸೂರ್ಯನಿಗೆ ಮಾರ್ತಂಡನೆಂಬ ಹೆಸರು ಬಂದಿರುವುದು. ||೧೭-೧೮||

ಹಿರಣ್ಯ (ಚಿನ್ನ) ಮಯವಾದ ಅಂಡದಲ್ಲಿ ವ್ಯಕ್ತನಾದುದರಿಂದ ಹಿರಣ್ಯಗರ್ಭನೆಂದೂ ಇವನಿಗೆ ಹೆಸರಿರುವುದು. ದಿಕ್ಕುಗಳೂ, ಆಕಾಶವೂ, ಭೂಭಾಗಗಳೂ, ಸ್ವರ್ಗಮೋಕ್ಷಗಳೂ ನರಕ ಮತ್ತು ಪಾತಾಲಾದಿ ಲೋಕಗಳೂ ಸೂರ್ಯನಿಂದಲೇ ವಿಭಾಗಿಸಲ್ಪಟ್ಟಿರುವುವು. ||೧೮||

ದೇವತೆಗಳು ಮೃಗಪಕ್ಷಿರೂಪಪ್ರಾಣಿಗಳು ಮನುಷ್ಯರು ಹಾವು ಮುಂತಾದ ಜಂತುಗಳು ಬಳ್ಳಿ ಮುಂತಾದ ಸಸ್ಯಗಳು ಇವೇ ಮೊದಲಾದ ಸಮಸ್ತ ಸಜೀವಪ್ರಾಣಿಗಳಿಗೂ ಸೂರ್ಯನು ಆತ್ಮಸ್ವರೂಪನೂ ಕಣ್ಣಿಗೆ ಆಶ್ರಯನೂ ಆಗಿರುವನು. ಇವಿಷ್ಟೂ ಭೂಮಂಡಲದ ಸ್ಥಿತಿಯು. ||೧೯-೨೦||

ಭೂಮಂಡಲದ ಪರಿಮಾಣವನ್ನು ಹೇಳಿದುದರಿಂದ ದ್ಯುಲೋಕದ ಅಳತೆಯನ್ನೂ ಹೇಳಿದಂತೆಯೇ ಆಯಿತು. ಹೇಗೆಂದರೆ ಅವರೆ ಮುಂತಾದ ದ್ವಿದಳಧಾನ್ಯ

ಉತ್ತರಾಯಣಂ ಆಸಾದ್ಯ ಗತಿಮಾಂದ್ಯಂ ವಿತನ್ವತೇ ॥೨೩॥

ಆರೋಹಣಸ್ಥಾನಮಸೌ ಗತ್ವಾಽಹೋದೈರ್ಘ್ಯಂ ಆಚರೇತ್ ।
ದಕ್ಷಿಣಾಯನ ಮಾಸಾದ್ಯ ಗತಿಶೈಘ್ರ್ಯಂ ವಿತನ್ವತೇ ॥೨೪॥

ಅವರೋಹಸ್ಥಾನ ಮಸೌ ಗಚ್ಛನ್ ಹ್ರಸ್ವದಿನಂ ಚರೇತ್ ।
ವಿಷುವತ್ಸಂಜ್ಞಮಾಸಾದ್ಯ ಗತಿಸಾಮ್ಯಂ ವಿತನ್ವತೇ ॥೨೫॥

ಸಮಸ್ಥಾನಂ ಅಥಾಸಾದ್ಯ ದಿನಸಾಮ್ಯಂ ಕರೋತಿ ಚ ।
ಯದಾ ಚ ಮೇಷತುಲಯೋಃ ಸಂಚರೇದ್ಧಿ ದಿವಾಕರಃ ॥೨೬॥

ಸಮಾನಾನಿ ತ್ವಹೋರಾತ್ರಾಣ್ಯಾತನೋತಿ ತ್ರಯೀಮಯಃ ।
ವೃಷಾದಿ ಪಂಚಸು ಯದಾ ರಾಶಿಷ್ವರ್ಕೋಽವಿರೋಚತೇ ॥೨೭॥

---

ಗಳಲ್ಲಿ ಒಂದು ಬೇಳೆಯ ಅಳತೆಯು ಎಷ್ಟೋ ಮತ್ತೊಂದರ ಅಳತೆಯೂ ಅಷ್ಟೇ ಇರುವುದು. ಆ ದ್ಯುಲೋಕ ಮತ್ತು ಭೂಲೋಕಗಳ ನಡುವೆ ಸಂಧಿಸ್ಥಾನದಲ್ಲಿರುವ ಆಕಾಶದಲ್ಲಿ ಸೂರ್ಯನು ಮೂರು ಲೋಕಗಳನ್ನೂ ತನ್ನ ಬಿಸಿಲಿನಿಂದ ಪ್ರಕಾಶಪಡಿಸುತ್ತಲೂ ಬಿಸಿಮಾಡುತ್ತಲೂ ಇರುವನು. ॥೨೧-೨೨॥

ಸೂರ್ಯನು ಉತ್ತರಾಯಣಕ್ಕೆ ಬಂದಾಗ ಮೇಲಕ್ಕೇರುವ ಸ್ಥಾನವಾದುದರಿಂದ ಮೆಲ್ಲನೆ ಹೋಗುತ್ತ ಹಗಲು ಹೆಚ್ಚಾಗುವಂತೆ ಮಾಡುತ್ತಾನೆ. ದಕ್ಷಿಣಾಯನಕ್ಕೆ ಬಂದಾಗ ಕೆಳಕ್ಕಿಳಿಯುವಸ್ಥಾನವಾದುದರಿಂದ ಬೇಗನೆ ಹೋಗುತ್ತ ಹಗಲು ಕಡಿಮೆಯಾಗುವಂತೆ ಮಾಡುತ್ತಾನೆ. ॥೨೩-೨೪॥

ಸೂರ್ಯನು ವಿಷುವತ್ ಎಂಬ ಹೆಸರಿನ ಸಮಸ್ಥಾನವನ್ನು ಹೊಂದಿದಾಗ ಅಂದರೆ ಮೇಷ ತುಲಾ ರಾಶಿಗಳಲ್ಲಿ ಸಂಚರಿಸುವಾಗ ಸಮಾನವಾದ ಗಮನದಿಂದ ಹಗಲುರಾತ್ರಿಗಳು ಸಮಾನ ಪ್ರಮಾಣದಲ್ಲಿರುವಂತೆ ಮಾಡುವನು. ॥೨೫-೨೬॥

ವೃಷಭಾದಿ ಐದು ರಾಶಿಗಳಲ್ಲಿ ಸೂರ್ಯನು ಪ್ರಕಾಶಿಸುವಾಗ ಆಹಸ್ಸು ಹೆಚ್ಚಾಗಿಯೂ ರಾತ್ರಿಯ ಪ್ರಮಾಣವು ಕಡಿಮೆಯಾಗಿಯೂ ಇರುವುದು. ವೃಶ್ಚಿಕಾದಿ ಐದು ರಾಶಿಗಳಲ್ಲಿ ಸಂಚರಿಸುವಾಗ ಹಗಲು ರಾತ್ರಿಗಳು ವ್ಯತ್ಯಸ್ತವಾಗಿ ಎಂದರೆ

ತದಾಽಹಾನಿ ಚ ವರ್ಧಂತೇ ರಾತ್ರಯೋಽಪಿ ಹ್ರಸಂತಿ ಚ ।
ವೃಶ್ಚಿಕಾದಿಷು ಸೂರ್ಯೋ ಹಿ ಯದಾ ಸಂಚರತೇ ರವಿಃ ॥೨೮॥
ತದಾಪೀಮಾನ್ಯಹೋರಾತ್ರಾಣಿ ಭವಂತಿ ವಿಪರ್ಯಯಾತ್ ।

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಅಷ್ಟಮಸ್ಕಂಧೇ
ಚತುರ್ದಶೋಽಧ್ಯಾಯಃ

---

ಹಗಲಿನ ಪ್ರಮಾಣವು ಕಡಿಮೆಯಾಗಿಯೂ ರಾತ್ರಿಯ ಪ್ರಮಾಣವು ಹೆಚ್ಚಾಗಿಯೂ ಇರುವುದು. ॥೨೭-೨೮॥

ಈ ಭೂಗೋಳ ಖಗೋಳಗಳ ಸ್ವರೂಪ, ಸ್ಥಾನ, ಗತಿ, ಕ್ರಮ, ಇವೇ ಮುಂತಾದ ವಿವರಗಳಲ್ಲಿ ಒಂದು ಪುರಾಣಕ್ಕಿಂತ ಇನ್ನೊಂದು ಸ್ವಲ್ಪ ಭಿನ್ನವಾಗಿರುವುದು ಕಂಡುಬರುತ್ತದೆ. ಆ ಭೇದವು ಕಲ್ಪಭೇದದಿಂದ ಉಂಟಾದುದೆಂದು ತಿಳಿಯಬೇಕು. ಅಲ್ಲದೆ ಭೂಮಿಯೇ ಎಲ್ಲಕ್ಕೂ ಕೇಂದ್ರವೆಂದೂ, ಅದು ಚಪ್ಪಟೆಯಾಗಿದೆ ಎಂದೂ ಕೆಲವೆಡೆ ಹೇಳಿದ್ದರೆ, ಮತ್ತೆ ಕೆಲವೆಡೆ ಅದು ಗೋಳವೆಂದೂ, ಸೂರ್ಯನೇ ಕೇಂದ್ರವೆಂದೂ ಹೇಳಿರುವುದೂ ಉಂಟು. ಈ ನಕ್ಷತ್ರ, ತಾರಾ, ಗ್ರಹಗಳಲ್ಲಿರುವ ಅನೇಕ ಸೂರ್ಯಸಂಸ್ಥಾನಗಳನ್ನು ಒಂದೊಂದು ಬ್ರಹ್ಮಾಂಡವೆಂದು ತಿಳಿಯಲು ಮೊದಲಾಗಿತ್ತೆಂಬುದನ್ನೂ, ಈ ಅನೇಕ ಕೋಟಿ ಬ್ರಹ್ಮಾಂಡಗಳು ಮಹಾಜಲ ಸಮೂಹದಲ್ಲಿ ತೇಲಾಡುತ್ತಿವೆ, ಎಂದು ವರ್ಣಿಸಿರುವುದನ್ನೂ, ಗ್ರಹಗಳನ್ನು ಪರಸ್ಪರವಾಗಿ ಆಕರ್ಷಿಸುತ್ತವೆಂಬುದನ್ನೂ, ಅದರಿಂದ ಗ್ರಹಗಳ ಸ್ಥಾನ, ಗತಿಗಳು ಬದಲಾಯಿಸುವುದುಂಟೆಂಬುದನ್ನೂ ನಮ್ಮ ಪೂರ್ವಿಕರಾದ ಆರ್ಯರು ತಿಳಿಯುತ್ತಿದ್ದರೆಂಬುದನ್ನೂ ಗಮನಿಸಬಹುದು.

ಇಲ್ಲಿಗೆ ಶ್ರೀ ದೇವೀಭಾಗವತಮಹಾಪುರಾಣದ ಎಂಟನೆಯ ಸ್ಕಂಧದಲ್ಲಿ
ಹದಿನಾಲ್ಕನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಅಷ್ಟಮಸ್ಕಂಧೇ

### || ಪಂಚದಶೋಽಧ್ಯಾಯಃ ||

### ಹದಿನೈದನೆಯ ಅಧ್ಯಾಯವು

|| ಶ್ರೀನಾರಾಯಣ ಉವಾಚ ||

**ಅತಃಪರಂ ಪ್ರವಕ್ಷ್ಯಾಮಿ ಭಾನೋರ್ಗಮನಮುತ್ತಮಂ ।**
**ಶೀಘ್ರಮಂದಾದಿಗತಿಭಿಃ ತ್ರಿವಿಧಂ ಗಮನಂ ರವೇಃ ||೧||**

**ಸರ್ವಗ್ರಹಾಣಾಂ ತ್ರೀಣ್ಯೇವ ಸ್ಥಾನಾನಿ ಸುರಸತ್ತಮ ।**
**ಸ್ಥಾನಂ ಜಾರದ್ಗವಂ ಮಧ್ಯಂ ತಥೈರಾವತಮುತ್ತರಂ ||೨||**

**ವೈಶ್ವಾನರಂ ದಕ್ಷಿಣತೋ ನಿರ್ದಿಷ್ಟಮಿತಿ ತತ್ತ್ವತಃ ।**
**ಅಶ್ವಿನೀ ಕೃತ್ತಿಕಾ ಯಾಮ್ಯಾ ನಾಗವೀಥೀತಿ ಶಬ್ದಿತಾ ||೩||**

**ರೋಹಿಣ್ಯಾರ್ದ್ರಾ ಮೃಗಶಿರೋ ಗಜವೀಥ್ಯಭಿಧೀಯತೇ ।**
**ಪುಷ್ಯಾಶ್ಲೇಷಾ ತಥಾದಿತ್ಯಾ ವೀಥೀ ಚೈರಾವತೀ ಸ್ಮೃತಾ ||೪||**

---

ನಾರಾಯಣನು ಹೇಳಿದನು--ಇಲ್ಲಿಂದ ಮುಂದೆ ಸೂರ್ಯನಿಗೆ ಶೀಘ್ರ ಮಂದ ಮುಂತಾದ ಮೂರು ಗಮನಗಳಿರುವ ವಿಚಾರವನ್ನು ಹೇಳುವೆನು. ||೧||

ಸಮಸ್ತ ಗ್ರಹಗಳಿಗೂ ಮೂರು ಸ್ಥಾನವಿರುವುದು. ಮಧ್ಯಸ್ಥಾನಕ್ಕೆ ಜರದ್ಗವ (ಮುದಿಯೆತ್ತು) ಸ್ಥಾನವೆಂದೂ, ಉತ್ತರ ದಿಕ್ಕಿನ ಸ್ಥಾನಕ್ಕೆ ಐರಾವತವೆಂದೂ, ದಕ್ಷಿಣ ದಿಕ್ಕಿನ ಸ್ಥಾನಕ್ಕೆ ವೈಶ್ವಾನರಸ್ಥಾನವೆಂದೂ, ಹೆಸರಿರುವುದು. ||೨||

ಅಶ್ವಿನೀ, ಕೃತ್ತಿಕೆ, ಭರಣೀ ಈ ಮೂರೂ ನಾಗವೀಥೀ ಎಂದೂ, ರೋಹಿಣೀ ಮೃಗಶಿರೆ, ಆರಿದ್ರೆ ಈ ಮೂರೂ ಗಜವೀಥೀ ಎಂದೂ, ಪುನರ್ವಸು, ಪುಷ್ಯ, ಆಶ್ಲೇಷೆ ಈ ಮೂರೂ ಐರಾವತವೀಥೀ ಎಂದೂ ಕರೆಯಲ್ಪಟ್ಟಿವೆ. ||೩-೪||

ಏತಾಸ್ತು ವೀಥಯಸ್ತಿಸ್ರ ಉತ್ತರೋಮಾರ್ಗ ಉಚ್ಯತೇ ।
ತಥಾ ದ್ವೇ ಚಾಪಿ ಫಲ್ಗುನ್ಯೌ ಮಘಾಚೈವಾರ್ಷಭೀ ಮತಾ ॥೫॥

ಹಸ್ತಶ್ಚಿತ್ರಾ ತಥಾ ಸ್ವಾತೀ ಗೋವೀಥೀತಿ ತು ಶಬ್ದಿತಃ ।
ಜ್ಯೇಷ್ಠಾ ವಿಶಾಖಾಽನೂರಾಧಾ ವೀಥೀ ಜಾರದ್ಗವೀ ಮತಾ ॥೬॥

ಏತಾಸ್ತು ವೀಥಯಸ್ತಿಸ್ರೋ ಮಧ್ಯಮೋ ಮಾರ್ಗಉಚ್ಯತೇ ।
ಮೂಲಾಷಾಢೋತ್ತರಾಷಾಢಾ ಅಜವೀಥ್ಯಭಿಶಬ್ದಿತಾ ॥೭॥

ಶ್ರವಣಂ ಚ ಧನಿಷ್ಠಾ ಚ ಮಾರ್ಗೀ ಶತಭಿಷಕ್ತಥಾ ।
ವೈಶ್ವಾನರೀ ಭಾದ್ರಪದೇ ರೇವತೀ ಚೈವ ಕೀರ್ತಿತಾ ॥೮॥

ಏತಾಸ್ತು ವೀಥಯಸ್ತಿಸ್ರೋ ದಕ್ಷಿಣೋ ಮಾರ್ಗ ಉಚ್ಯತೇ ।
ಉತ್ತರಾಯಣಮಾಸಾದ್ಯ ಯುಗಾಕ್ಷಾಂತರ್ನಿಬದ್ಧಯೋಃ ॥೯॥

ಕರ್ಷಣಂ ಪಾಶಯೋಃ ವಾಯುಬದ್ಧಯೋರೋಹಣಂ ಸ್ಮೃತಂ ।
ತದಾಭ್ಯಂತರಗಾನ್ಮಂಡಲಾದ್ರಥಸ್ಯ ಗತೇರ್ಭವೇತ್ ॥೧೦॥

---

ಮೇಲೆ ಹೇಳಿದ ಮೂರು ವೀಥಿಗಳು ಉತ್ತರ ಮಾರ್ಗವು. ಮಘೆ, ಪುಬ್ಬೆ, ಉತ್ತರೆ ಈ ಮೂರು ಆರ್ಷಭೀವೀಥೀ ಎಂದೂ, ಹಸ್ತ, ಚಿತ್ತ, ಸ್ವಾತಿ ಈ ಮೂರೂ ಗೋವೀಥೀ ಎಂದೂ, ವಿಶಾಖೆ, ಅನೂರಾಧೆ, ಜ್ಯೇಷ್ಠ ಈ ಮೂರೂ ಜಾರದ್ಗವವೀಥಿ ಎಂದೂ ಕರೆಯಲ್ಪಟ್ಟಿವೆ. ಈ ಮೂರು ವೀಥಿಗಳೂ ಮಧ್ಯಮಮಾರ್ಗಗಳು. ||೫-೬||

ಮೂಲ ಪೂರ್ವಾಷಾಢ, ಉತ್ತರಾಷಾಢಾ ಈ ಮೂರೂ ಅಜವೀಥೀ ಎಂದೂ, ಶ್ರವಣ ಧನಿಷ್ಠಾ, ಶತಭಿಷಾ ಈ ಮೂರೂ ಮೃಗವೀಥೀ ಎಂದೂ, ಪೂರ್ವಾಭಾದ್ರಾ, ಉತ್ತರಾಭಾದ್ರಾ, ರೇವತೀ ಈ ಮೂರೂ ವೈಶ್ವಾನರವೀಥೀ ಎಂದೂ ಕರೆಯಲ್ಪಟ್ಟಿವೆ. ಈ ಮೂರು ವೀಥಿಗಳೂ ದಕ್ಷಿಣಮಾರ್ಗವು. ||೭-೮||

ಸೂರ್ಯನು ಉತ್ತರಾಯಣಕ್ಕೆ ಬಂದಾಗ ತೇಜೋರೂಪವಾದ ಸೂರ್ಯ ರಥದ ನೊಗಕ್ಕೂ ಚಕ್ರದ ಅಚ್ಚಿಗೂ ಕಟ್ಟಿರುವ ವಾಯುರೂಪವಾದ ಹಗ್ಗವನ್ನು ಧ್ರುವಮಂಡಲವು ಆಕರ್ಷಣಮಾಡುವುದರಿಂದ ಉಂಟಾದ ಗಮನವನ್ನು ಆರೋಹ ಣವೆಂದು ಕರೆಯುವರು. ಆಗ ಸೂರ್ಯಮಂಡಲವು ರಥದ ಒಳಭಾಗಕ್ಕೆ ಜಗ್ಗುವುದ

ಮಾಂದ್ಯಂ ದಿವಸವೃದ್ಧಿಶ್ಚ ಜಾಯತೇ ಸುರಸತ್ತಮ ।
ರಾತ್ರಿಹ್ರಾಸಶ್ಚ ಭವತಿ ಸೌಮ್ಯಾಯನಕ್ರಮೋ ಹ್ಯಯಂ ॥೧೧॥

ದಕ್ಷಿಣಾಯನಕೇ ಪಾಶೇ ಪ್ರೇರಣಾದವರೋಹಣಂ ।
ಬಹಿರ್ಮಂಡಲವೇಗೇನ ಗತಿಶ್ಶೈಘ್ರ್ಯಂ ತದಾ ಭವೇತ್ ॥೧೨॥

ತದಾ ದಿನಾಲ್ಪಕಾ ರಾತ್ರಿವೃದ್ಧಿಶ್ಚ ಪರಿಕೀರ್ತಿತಾ ।
ವೈಷುವೇ ಪಾಶಸಾಮ್ಯಾತ್ತು ಸಮಾವಸ್ಥಾನತೋ ರವೇಃ ॥೧೩॥

ಮಧ್ಯಮಂಡಲವೇಶಶ್ಚ ಸಾಮ್ಯಂ ರಾತ್ರಿದಿನಾದಿಕೇ ।
ಆಕೃಷ್ಯೇತೇ ಯದಾ ತೌ ತು ಧ್ರುವೇಣ ಸಮಧಿಷ್ಠಿತೌ ॥೧೪॥

ತದಾಭ್ಯಂತರತಃ ಸೂರ್ಯೋ ಭ್ರಮತೇ ಮಂಡಲಾನಿ ಚ ।
ಧ್ರುವೇಣ ಮುಚ್ಯಮಾನೇನ ಪುನಾರಶ್ಮಿಯುಗೇನ ತು ॥೧೫॥

---

ರಿಂದ ರಥದ ಗಮನವು ನಿದಾನವಾಗುವುದು.. ಆಗ ಹಗಲಿನ ಪ್ರಮಾಣದ ಅಭಿವೃದ್ಧಿಯೂ ರಾತ್ರಿಯ ಪ್ರಮಾಣದ ಕಡಿಮೆಯೂ ಆಗುವುದು. ಇದೇ ಉತ್ತರಾಯಣ ಕ್ರಮವು. ॥೯-೧೦-೧೧॥

ದಕ್ಷಿಣಾಯನದಲ್ಲಿ ವಾಯುರೂಪವಾದ ಹಗ್ಗದ ಆಕರ್ಷಣವಿಲ್ಲದೇ ಸಡಿಲವಾಗಿರುವುದರಿಂದ ಉಂಟಾಗುವ ಗಮನವನ್ನು ಅವರೋಹಣವೆಂದು ಕರೆಯುವರು. ಆಗ ಸೂರ್ಯಮಂಡಲವು ರಥದ ಹೊರಭಾಗಕ್ಕೆ ಜಗ್ಗುವುದರಿಂದ ವೇಗವಾದ ಗಮನವುಂಟಾಗಿ ಹಗಲಿನ ಪ್ರಮಾಣವು ಕಡಿಮೆಯಾಗಿಯೂ ರಾತ್ರಿಯ ಪ್ರಮಾಣವು ಹೆಚ್ಚಾಗಿಯೂ ಇರುವುದು. ಇಲ್ಲಿ ಗ್ರಹಗಳಿಗೆ ಪರಸ್ಪರವಾಗಿರುವ ಆಕರ್ಷಣಶಕ್ತಿ ಮೊದಲಾದ ಅಂಶಗಳು ಸೂಚಿತವಾಗಿವೆ. ಎಂಬುದನ್ನು ಗಮನಿಸಬಹುದು. ॥೧೨॥

ವಿಷುವ ಸ್ಥಾನಗಮನದಲ್ಲಿ ವಾಯುಪಾಶಸಾಮ್ಯದಿಂದಲೂ ಸೂರ್ಯನು ಮಧ್ಯಮಂಡಲದಲ್ಲಿರುವುದರಿಂದಲೂ ಹಗಲು ರಾತ್ರಿಪ್ರಮಾಣಗಳು ಸಮವಾಗಿರುವುವು. ॥೧೩॥

ಧ್ರುವಮಂಡಲವು ವಾಯುರೂಪವಾದ ಹಗ್ಗಗಳನ್ನು ಎಳೆದಾಗ ಎಂದರೆ ಜ್ಯೋತಿಶ್ಶಾಸ್ತ್ರದಲ್ಲಿ ವಿವರಿಸಿರುವಂತೆ ಗ್ರಹಗಳಿಗೆ ಪರಸ್ಪರವಾಗಿ ಆಕರ್ಷಣ ಮುಂತಾದ

ತಥೈವ ಬಾಹ್ಯತಃ ಸೂರ್ಯೋ ಭ್ರಮತೇ ಮಂಡಲಾನಿ ಚ ।
ತಸ್ಮಿನ್ಮೇರೌ ಪೂರ್ವಭಾಗೇ ಪುರ್ಯೈಂದ್ರೀ ದೇವಧಾನಿಕಾ ॥೧೬॥

ದಕ್ಷಿಣೇ ವೈ ಸಂಯಮನೀ ನಾಮ ಯಾಮ್ಯಾ ಮಹಾಪುರೀ ।
ಪಶ್ಚಾನ್ನಿಮ್ಲೋಚನೀನಾಮ ವಾರುಣೀ ವೈ ಮಹಾಪುರೀ ॥೧೭॥

ತದುತ್ತರೇ ಪುರೀ ಸೌಮ್ಯಾ ಪ್ರೋಕ್ತಾ ನಾಮ ವಿಭಾವರೀ ।
ಐಂದ್ರಪುರ್ಯಾಂ ರವೇಃ ಪ್ರೋಕ್ತ ಉದಯೋ ಬ್ರಹ್ಮವಾದಿಭಿಃ ॥೧೮॥

ಸಂಯಮನ್ಯಾಂ ಚ ಮಧ್ಯಾಹ್ನೋ ನಿಮ್ಲೋಚನ್ಯಾಂ ನಿಮೀಲನಂ ।
ವಿಭಾವರ್ಯಾಂ ನಿಶೀಥಃಸ್ಯಾತ್ತಿಗ್ಮಾಂಶೋಃ ಸುರಪೂಜಿತಃ ॥೧೯॥

---

ಕಾರ್ಯದಿಂದ ಸೂರ್ಯನು ತನ್ನ ಮಂಡಲವನ್ನು ಒಳಭಾಗದಲ್ಲಿಯೇ ತಿರುಗಿಸುವನು. ಧ್ರುವದ ಆಕರ್ಷಣೆಯಿಲ್ಲದೆ ಸಡಿಲವಾದರೆ ಸೂರ್ಯನು ತನ್ನ ಮಂಡಲವನ್ನು ಹೊರಭಾಗದಲ್ಲಿ ತಿರುಗಿಸುವನು. ಮೂರನೆಯದಾದ ಸಮಸ್ಥಿತಿಯನ್ನು ಹಿಂದೆಯೇ ಹೇಳಿದೆ. ||೧೪-೧೫||

ಆ ಮೇರುಪರ್ವತದಲ್ಲಿ ಪೂರ್ವಭಾಗದಲ್ಲಿ ದೇವತೆಗಳಿಗೆ ರಾಜಧಾನಿಯಾದ ದೇವಧಾನಿಕಾ ಎಂಬ ಇಂದ್ರಪಟ್ಟಣವಿರುವುದು. ದಕ್ಷಿಣದಲ್ಲಿ ಸಂಯಮನೀ ಎಂಬ ಯಮನ ರಾಜಧಾನಿಯಾದ ಪಟ್ಟಣವೂ, ಪಶ್ಚಿಮದಲ್ಲಿ ನಿಮ್ಲೋಚನೀ ಎಂಬ ವರುಣನ ಅಧಿಕಾರ ಕೇಂದ್ರಸ್ಥಾನವಾದ ಪಟ್ಟಣವೂ, ಉತ್ತರದಲ್ಲಿ ವಿಭಾವರೀ ಎಂಬ ಕುಬೇರನ ಪಟ್ಟಣವೂ ಇರುವುದು. ||೧೬-೧೭||

ದೇವತೆಗಳಿಂದ ಪೂಜಿಸಲ್ಪಟ್ಟ ಸೂರ್ಯನಿಗೆ ಇಂದ್ರನ ಪಟ್ಟಣದ ಸಮೀಪ ದಲ್ಲಿರುವಂತೆ ಕಾಣುತ್ತಿರುವ ಕಾಲದಲ್ಲಿ ಉದಯವೆಂದೂ, ಸೂರ್ಯನು ಸಂಯಮನಿ ಪಟ್ಟಣದ ಸಮರೇಖೆಗೆ ಬಂದಾಗ ಮಧ್ಯಾಹ್ನವೆಂದೂ, ನಿಮ್ಲೋಚನಿಯ ಸಮೀಪ ದಲ್ಲಿ ಕಾಣುತ್ತಿರುವಾಗ ಸಾಯಂಕಾಲವೆಂದೂ, ವಿಭಾವರೀಪಟ್ಟಣದ ಹತ್ತಿರದಲ್ಲಿರು ವಾಗ ಅರ್ಧ ರಾತ್ರಿ ಎಂದೂ, ಬ್ರಹ್ಮಜ್ಞಾನಿಗಳು (ವೇದವನ್ನು ಬಲ್ಲವರು) ಹೇಳು ತ್ತಾರೆ. ||೧೮-೧೯||

**ಪ್ರವೃತ್ತೇಶ್ಚ ನಿಮಿತ್ತಾನಿ ಭೂತಾನಾಂ ತಾನಿ ಸರ್ವಶಃ ।**
**ಮೇರೋಶ್ಚತುರ್ದಿಶಂ ಭಾನೋಃ ಕೀರ್ತಿತಾನಿ ಮಯಾ ಮುನೇ ॥೨೦॥**

**ಮೇರುಸ್ಥಾನಾಂ ಸದಾ ಮಧ್ಯಂಗತ ಏವ ವಿಭಾತಿ ಹಿ ।**
**ಸವ್ಯಂ ಗಚ್ಛನ್ದಕ್ಷಿಣೇನ ಕರೋತಿ ಸ್ವರ್ಣಪರ್ವತಂ ॥೨೧॥**

**ಉದಯಾಸ್ತಮಯೇ ಚೈವ ಸರ್ವಕಾಲಂ ತು ಸನ್ಮುಖೇ ।**
**ದಿಶಾಸ್ವಶೇಷಾಸು ತಥಾ ಸುರರ್ಷೇ ವಿದಿಶಾಸು ಚ ॥೨೨॥**

---

ಎಲೈ ನಾರದಮುನಿಯೇ, ಮೇರುವಿನ ನಾಲ್ಕು ದಿಕ್ಕಿನಲ್ಲಿಯೂ ಸೂರ್ಯನ ಗಮನವನ್ನೂ ವಿವರಿಸಿದೆನು. ಅದರ ಪ್ರಯೋಜನವು ಹೇಗೆಂದರೆ ಮೇರುವಿಗೆ ದಕ್ಷಿಣದಲ್ಲಿರುವ ಜನರಿಗೆ ಪೂರ್ವದಿಕ್ಕು ಇಂದ್ರನ ಪಟ್ಟಣ ಮೊದಲಾಗಿಯೂ, ಪಶ್ಚಿಮದಲ್ಲಿರುವವರಿಗೆ ದಕ್ಷಿಣ ಮೊದಲಾಗಿಯೂ, ಉತ್ತರದಲ್ಲಿರುವವರಿಗೆ ಪಶ್ಚಿಮವೇ ಮೊದಲಾಗಿಯೂ ಪೂರ್ವದಲ್ಲಿರುವವರಿಗೆ ಉತ್ತರವೇ ಮೊದಲಾಗಿಯೂ ಆಗುವುದು. ॥೨೦॥

ಮೇರುವಿನಲ್ಲಿರತಕ್ಕವರಿಗೆ ಸೂರ್ಯನು ಯಾವಾಗಲೂ ಆಕಾಶಮಧ್ಯದಲ್ಲಿ ಸುತ್ತುತ್ತಿರುವಂತೆ ಕಾಣುವನು. ಸೂರ್ಯನು ನಕ್ಷತ್ರಾಭಿಮುಖವಾಗಿರುವ ತನ್ನ ಗಮನದಿಂದ ಮೇರುವನ್ನೇ ಬಲಭಾಗಕ್ಕೆ ಬಿಟ್ಟುಕೊಂಡು ಪ್ರದಕ್ಷಿಣವಾಗಿ ಸುತ್ತುವ ಪ್ರವಹ ಎಂಬ ವಾಯುವಿನ ದೆಸೆಯಿಂದ ತಾನೂ ಜ್ಯೋತಿಶ್ಚಕ್ರದಲ್ಲಿ ಒಂದು ಗ್ರಹರೂಪನಾದುದರಿಂದ ಮೇರುವನ್ನು ಸುತ್ತುತ್ತಿರುವನು. ಆ ಗಮನದಿಂದ ಬಹಳ ದೂರದಿಂದ ನೋಡುವ ನಮಗೆ ಭೂಮಿಗೆ ಸೇರಿದಂತೆ ಕಂಡಾಗ ಉದಯವೂ ಆಕಾಶದ ಮೇಲೇರಿದಂತೆ ಕಂಡಾಗ ಮಧ್ಯಾಹ್ನವೂ ಭೂಮಿಯನ್ನು ಪ್ರವೇಶಮಾಡಿದಂತೆ ಕಂಡಾಗ ಅಸ್ತಮಯವೂ ಬಹಳ ದೂರಕ್ಕೆ ಹೋದಂತಾದಾಗ ಅರ್ಧರಾತ್ರೆಯೂ(ತ್ರಿ), ಆಗುವುದು. "ಆದ್ಯೋ್ಯೇವಾ ಏಷ ಪ್ರಾತರುದೇತಿ ಅಪಃ ಸಾಯಂ ಪ್ರವಿಶತಿ" ಎಂದು ವೇದದಲ್ಲಿ ಹೇಳಿರುವುದು ಅರ್ಥವಾದವು. ಇವುಗಳನ್ನೆಲ್ಲವನ್ನೂ ಮನಸ್ಸಿನಲ್ಲಿಟ್ಟು ಬಲಭಾಗಕ್ಕೆ ನಡೆಯುತ್ತ ಮೇರುಪರ್ವತವನ್ನು ಪ್ರದಕ್ಷಿಣೆಮಾಡುವನೆಂದು ಹೇಳಿದೆ. ॥೨೧॥

ಎಲೈ ನಾರದನೇ, ದಿಕ್ಕುಗಳಲ್ಲಿಯೂ ವಿದಿಕ್ಕುಗಳಲ್ಲಿಯೂ ಎಲ್ಲಿ ಯಾರು ಸೂರ್ಯನನ್ನು ಇದಿರಿನಲ್ಲಿ ನೋಡುವರೋ ಆ ಕಾಲವೇ ಅವರಿಗೆ ಉದಯಕಾಲವು

ಯೈರ್ಯತ್ರ ದೃಶ್ಯತೇ ಭಾಸ್ವಾನ್ ಸ ತೇಷಾಮುದಯಃ ಸ್ಮೃತಃ ।
ತಿರೋಭಾವಂ ಚ ಯತ್ರೈತಿ ತತ್ರೈವಾಸ್ತಮನಂ ರವೇಃ ॥೨೩॥

ನೈವಾಸ್ತಮನಮರ್ಕಸ್ಯ ನೋದಯಃ ಸರ್ವದಾ ಸತಃ ।
ಉದಯಾಸ್ತಮನಾಖ್ಯಂ ಹಿ ದರ್ಶನಾದರ್ಶನಂ ರವೇಃ ॥೨೪॥

ಶಕ್ರಾದೀನಾಂ ಪುರೇ ತಿಷ್ಠನ್ ಸ್ಪೃಶತ್ಯೇಷ ಪುರತ್ರಯಂ।
ವಿಕರ್ಣೌ ದ್ವೌ ವಿಕರ್ಣಸ್ಥಃ ತ್ರೀನ್‌ಕೋಣಾನ್ದ್ವೇಪುರೇ ತಥಾ ॥೨೫॥

ಸರ್ವೇಷಾಂ ದ್ವೀಪವರ್ಷಾಣಾಂ ಮೇರುರುತ್ತರತಃ ಸ್ಥಿತಃ ।
ಯೈಃ ಯತ್ರ ದೃಶ್ಯತೇ ಭಾನುಃ ಸೈವ ಪ್ರಾಚೀತಿ ಚೋಚ್ಯತೇ ॥೨೬॥

---

ಯಾವಾಗ ಮರೆಯಾಗುವುದನ್ನು ನೋಡುವರೋ ಆ ಕಾಲವೇ ಅಸ್ತಮಾನ ಕಾಲವು. ||೨೨-೨೩||

ಯಾವಾಗಲೂ ಇರುತ್ತಿರುವ ಸೂರ್ಯನಿಗೆ ಉದಯಾಸ್ತಮಾನಗಳಿಲ್ಲ. ಸೂರ್ಯನು ಕಾಣುವುದು ಕಾಣದಿರುವುದೇ ಉದಯಾಸ್ತಮಾನಗಳು. ||೨೪||

ಸೂರ್ಯನು ಇಂದ್ರಾದಿಗಳ ಪಟ್ಟಣದಲ್ಲಿದ್ದಾಗ ಮೂರು ಪಟ್ಟಣಗಳನ್ನೂ ಎರಡು ತ್ರಿಕೋಣಗಳನ್ನೂ ತನ್ನ ಕಿರಣದಿಂದ ಮುಟ್ಟುವನು. ವಿಕರ್ಣವಾದ ತ್ರಿಕೋಣದಲ್ಲಿದ್ದರೆ ಮೂರು ಕೋಣಗಳನ್ನೂ ಎರಡು ಪಟ್ಟಣಗಳನ್ನೂ ತನ್ನ ಕಿರಣದಿಂದ ಮುಟ್ಟುವನು. ಎಂದರೆ ಇಂದ್ರನ ಪಟ್ಟಣದಲ್ಲಿದ್ದಾಗ ಇಂದ್ರಪುರ ಯಮಪುರ ಸೌಮ್ಯಪುರಗಳನ್ನೂ ಈಶಾನಕೋಣ ಆಗ್ನೇಯಕೋಣಗಳನ್ನೂ ತನ್ನ ಕಿರಣದಿಂದ ಮುಟ್ಟುವನು. ಆಗ್ನೇಯ ತ್ರಿಕೋಣದಲ್ಲಿದ್ದಾಗ ಆಗ್ನೇಯ ಈಶಾನ ನೈಋತ್ಯಕೋಣಗಳನ್ನೂ ತನ್ನ ಕಿರಣದಿಂದ ಮುಟ್ಟುವನೆಂದೂ ತಾತ್ಪರ್ಯವು. ಹೀಗೆಯೇ ಮಿಕ್ಕ ದಿಕ್ಕುಗಳಿಗೂ ಕೋಣಗಳಿಗೂ ತಿಳಿದುಕೊಳ್ಳಬೇಕೆಂದು ಅಭಿಪ್ರಾಯವು. ||೨೫||

ಸಮಸ್ತ ದ್ವೀಪಗಳಿಗೂ ವರ್ಷಗಳಿಗೂ ಮೇರುವು ಉತ್ತರ ದಿಕ್ಕಿನಲ್ಲಿಯೇ ಇರುವುದು. ಯಾರು ಎಲ್ಲಿ ಸೂರ್ಯನನ್ನು ಹಗಲಿನ ಮೊದಲಿನಲ್ಲಿ ನೋಡುವರೋ ಅದೇ ಅವರಿಗೆ ಪೂರ್ವದಿಕ್ಕಾಗಿರುವುದು. ||೨೬||

ತದ್ವಾಮಭಾಗಶೋ ಮೇರುಃ ವರ್ತ(ರ್ತೇ)ತೇತಿ ವಿನಿರ್ಣಯಃ ।
ಯದಿ ಚೈಂದ್ರ್ಯಾಃ ಪ್ರಚಲತೇ ಘಟಿಕಾದಶಪಂಚಭಿಃ ॥೨೭॥

ಯಾಮ್ಯಾಂ ತದಾ ಯೋಜನಾನಾಂ ಸಪಾದಂ ಕೋಟಿಯುಗ್ಮಕಂ ।
ಸಾರ್ಧದ್ವಾದಶಲಕ್ಷಾಣಿ ಪಂಚನೇತ್ರಸಹಸ್ರಕಂ ॥೨೮॥

ಪ್ರಕ್ರಾಮತಿ ಸಹಸ್ರಾಂಶುಃ ಕಾಲಮಾರ್ಗಪ್ರದರ್ಶಕಃ ।
ಏವಂ ತತೋ ವಾರುಣೀಂ ಚ ಸೌಮ್ಯಾಮೈಂದ್ರಿಂ ಸಹಸ್ರದೃಕ್॥೨೯॥

ಪರ್ಯೇತಿ ಕಾಲಚಕ್ರಾತ್ಮಾ ದ್ಯುಮಣಿಃ ಕಾಲಬುದ್ಧಯೇ ।
ತಥಾ ಚಾನ್ಯೇ ಗ್ರಹಾಸ್ಸೋಮಾದಯೋ ಯೇ ದಿವಿಚಾರಿಣಃ ॥೩೦॥

ನಕ್ಷತ್ರೈಃ ಸಹ ಚೋದ್ಯಂತಿ ಸಹ ಚಾಸ್ತಂ ವ್ರಜಂತಿ ತೇ ।
ಏವಂ ಮುಹೂರ್ತೇನ ರಥೋ ಭಾನೋರಷ್ಟಶತಾಧಿಕಂ ॥೩೧॥
ಯೋಜನಾನಾಂ ಚತುಸ್ತ್ರಿಂಶಲ್ಲಕ್ಷಾಣಿ ಭ್ರಮತಿ ಪ್ರಭುಃ ।

---

ಆದುದರಿಂದ ಸೂರ್ಯನಿಗೆ ಬಲಭಾಗದಲ್ಲಿಯೇ ಯಾವಾಗಲೂ ಮೇರು ಪರ್ವತವಿರುವುದೆಂದು ನಿಶ್ಚಯವಾಯಿತು. ಸೂರ್ಯನು ಹದಿನೈದು ಗಳಿಗೆಯಲ್ಲಿ ಪೂರ್ವದಿಕ್ಕಿನಿಂದ ದಕ್ಷಿಣದಿಕ್ಕಿಗೆ ಎರಡೂಕಾಲುಕೋಟಿ ಹನ್ನೆರಡೂವರೆಲಕ್ಷ ಇಪ್ಪತ್ತೈದುಸಾವಿರ ಯೋಜನಗಳ ದೂರ ಗಮನಮಾಡುತ್ತ ಕಾಲಪ್ರಮಾಣವನ್ನು ತೋರಿಸುತ್ತಿರುವನು. ॥೨೭-೨೮॥

ಈರೀತಿಯಾಗಿಯೇ ಪಶ್ಚಿಮ ಉತ್ತರ ಪೂರ್ವದಿಕ್ಕುಗಳಿಗೂ ಮೇಲೆ ಹೇಳಿದ ಪ್ರಮಾಣದಲ್ಲಿಯೇ ಗಮನಮಾಡುತ್ತ ಅನೇಕ ಕಣ್ಣುಳ್ಳವನೂ ಆದ ಕಾಲಚಕ್ರ ಸ್ವರೂಪನಾಗಿ ಜನಗಳಿಗೆ ಕಾಲಪ್ರಮಾಣವನ್ನುಂಟುಮಾಡುತ್ತಿರುವನು. ॥೨೯॥

ಹಾಗೆಯೇ ಆಕಾಶದಲ್ಲಿ ಸಂಚರಿಸುವ ಇತರ ಗ್ರಹಗಳಾದ ಚಂದ್ರಾದಿಗಳು ನಕ್ಷತ್ರಗಳೊಡನೆ ಉದಯಾಸ್ತಮಾನಗಳನ್ನು ಪಡೆಯುವುವು. ಸೂರ್ಯನೊಡನೆಯೂ ನಕ್ಷತ್ರಗಳಿದ್ದರೂ ಸೂರ್ಯನ ತೇಜಸ್ಸಿನಿಂದ ಅವು ಕಾಣದುದರಿಂದ ಹೀಗೆ ಹೇಳಿದೆ.॥೩೦॥

ಈ ರೀತಿಯಲ್ಲಿ ಸೂರ್ಯನ ರಥವು ಒಂದು ಮುಹೂರ್ತದಲ್ಲಿ ಮೂವತ್ತು ನಾಲ್ಕು ಲಕ್ಷದ ಎಂಟನೂರು ಯೋಜನ ದೂರ ಹೋಗುವುದು. ॥೩೧॥

ತ್ರಯೀಮಯಶ್ಚತುರ್ದಿಕ್ಷು ಪುರೀಷು ಚ ಸವಿಾರಣಾತ್ ॥೩೨॥

ಪ್ರವಹಾಖ್ಯಾತ್ಸದಾ ಕಾಲಚಕ್ರಂ ಪರ್ಯೇತಿ ಭಾನುಮಾನ್ ।
ಯಸ್ಯ ಚಕ್ರಂ ರಥಸ್ಯೈಕಂ ದ್ವಾದಶಾರಂ ತ್ರಿನಾಭಿಕಂ ॥೩೩॥

ಷಣ್ಣೇಮಿ ಕವಯಸ್ತಂ ಚ ವತ್ಸರಾತ್ಮಕಮೂಚಿರೇ ।
ಮೇರುಮೂರ್ಧನಿ ತಸ್ಯಾಕ್ಷೋ ಮಾನಸೋತ್ತರಪರ್ವತೇ ॥೩೪॥

ಕೃತೇತರವಿಭಾಗೋ ಯಃ ಪ್ರೋತಂ ತತ್ರ ರಥಾಂಗಕಂ ।
ತೈಲಕಾರಕಯಂತ್ರೇಣ ಚಕ್ರಸಾಮ್ಯಂ ಪರಿಭ್ರಮನ್ ॥೩೫॥

ಮಾನಸೋತ್ತರನಾಮ್ನಾಹ ಗಿರೌ ಪರ್ಯೇತಿ ಚಾಂಶುಮಾನ್ ।
ತಸ್ಮಿನ್ನಕ್ಷೇ ಕೃತಂ ಮೂಲಂ ದ್ವಿತೀಯೋಽಕ್ಷೋ ಧ್ರುವೇ ಕೃತಃ॥೩೬॥

---

ವೇದಸ್ವರೂಪನೂ, ಕಾಂತಿರೂಪನೂ ಆದ ಸೂರ್ಯನು ನಾಲ್ಕು ದಿಕ್ಕುಗಳಲ್ಲಿರುವ ಇಂದ್ರಾದಿಪಟ್ಟಣಗಳಲ್ಲಿ ಪ್ರವಹನೆಂಬ ವಾಯುವಿನಿಂದ ಕಾಲಚಕ್ರವನ್ನು ಸುತ್ತುತ್ತಿರುವನು. ಆ ಸೂರ್ಯನ ರಥಕ್ಕೆ ವರ್ಷಸ್ವರೂಪವಾದ ಒಂದೇ ಚಕ್ರವೂ ಮಾಸಸ್ವರೂಪವಾದ ಹನ್ನೆರಡು ಅರೆಕಾಲುಗಳೂ, ಚಾತುರ್ಮಾಸ್ಯರೂಪವಾದ ಮೂರು ಅಚ್ಚುಗಳೂ ಋತುಸ್ವರೂಪವಾದ ಆರು ಚಕ್ರದ ಪಟ್ಟಿಗಳೂ ಇರುವುವೆಂದು ಕವಿಗಳು ವರ್ಣಿಸಿರುವರು. ॥೩೨-೩೩॥

ಆ ಚಕ್ರದ ಅಚ್ಚು ಒಂದು, ಮೇರುಪರ್ವತದ ಶಿಖರದ ಮೇಲೆ ಒಂದು ಅಂಚೂ, ಉತ್ತರ ಮಾನಸಪರ್ವತದ ಮೇಲೆ ಒಂದು ಅಂಚೂ, ಸಂಬಂಧಿಸಿಕೊಂಡಂತೆ ಅಷ್ಟು ಎತ್ತರವಾಗಿರುವುದು. ಮತ್ತೊಂದು ಭಾಗದ ಅಚ್ಚು ಧ್ರುವಮಂಡಲಕ್ಕೆ ಸಂಬಂಧಿಸಿದ ವಾಯುಪಾಶದಿಂದ ಕಟ್ಟಲ್ಪಟ್ಟಿರುವುದು. ಎಣ್ಣೆಯ ಗಾಣದ ಚಕ್ರದಂತೆ ಸುತ್ತುತ್ತಿರುವುದು. ॥೩೪-೩೫॥

ಉತ್ತರಮಾನಸಪರ್ವತದಲ್ಲಿ ಸೂರ್ಯನು ಸುತ್ತುತ್ತಿರುವನು. ಅವನ ರಥಚಕ್ರದ ಒಂದು ಅಚ್ಚು ಉತ್ತರಮಾನಸಪರ್ವತದಲ್ಲಿಯೂ ಮತ್ತೊಂದು ಧ್ರುವಮಂಡಲದಲ್ಲಿಯೂ ಸಂಬಂಧಿಸಿಕೊಂಡಿರುವುದು. ॥೩೬॥

ತುರ್ಯಮಾನೇನ ತೈಲಸ್ಯ ಯಂತ್ರಾಕ್ಷವದಿತೀರಿತಃ ।
ಕೃತೋಪರಿತನೋ ಭಾಗಃ ಸೂರ್ಯಸ್ಯ ಜಗತಾಂ ಪತೇಃ ॥೩೭॥

ರಥನೀಡಸ್ತು ಷಟ್ತ್ರಿಂಶಲ್ಲಕ್ಷಯೋಜನಮಾಯತಃ ।
ತತ್ತುರ್ಯಭಾಗಃ ಸೋಽಯಂ ಹಿ ಪರಿಣಾಹೇನ ಕೀರ್ತಿತಃ ॥೩೮॥

ತಾವಾನರ್ಕರಥಸ್ಯಾತ್ರ ಯುಗಸ್ತಸ್ಮಿನ್ಹಯಾಃ ಶುಭಾಃ ।
ಸಪ್ತಚ್ಛಂದೋಽಭಿಧಾನಾಶ್ಚ ಸೂರಸೂತೇನ ಯೋಜಿತಾಃ ॥೩೯॥

ವಹಂತಿ ದೇವಮಾದಿತ್ಯಂ ಲೋಕಾನಾಂ ಸುಖಹೇತವೇ ।
ಪುರಸ್ತಾತ್ಸವಿತುಃ ಸೂತೋಽರುಣಃ ಪಶ್ಚಾನ್ನಿಯೋಜಿತಃ ॥೪೦॥

ಸೌರ್ಯೇ ಕರ್ಮಣಿ ಸಂಯುಕ್ತೋ ವರ್ತತೇ ಗರುಡಾಗ್ರಜಃ ।
ತಥೈವ ವಾಲಖಿಲ್ಯಾಖ್ಯಾ ಋಷಯೋಽಂಗುಷ್ಠಪರ್ವಕಾಃ ॥೪೧॥

---

ಜಗತ್ತಿಗೆ ಒಡೆಯನಾದ ಸೂರ್ಯನ ರಥದಲ್ಲಿ ಕುಳಿತುಕೊಳ್ಳುವ ಸ್ಥಳವು ಮೂವತ್ತಾರುಲಕ್ಷ ಯೋಜನ ವಿಸ್ತಾರವಾಗಿರುವುದು. ರಥದ ನೊಗವು ಅದರ ನಾಲ್ಕನೆಯ ಒಂದು ಭಾಗದಷ್ಟು ಉದ್ದವಾಗಿರುವುದು. ಆ ನೊಗಕ್ಕೆ ಮಂಗಳಕರ ವಾದ ಕುದುರೆಗಳನ್ನು ಕಟ್ಟಿರುವುದು. ||೩೭-೩೮||

ಸೂರ್ಯನ ರಥಕ್ಕೆ ಕಟ್ಟಿರುವ ಏಳು ಕುದುರೆಗಳಿಗೆ ಗಾಯತ್ರೀ, ಉಷ್ಣಿಕ್, ಅನುಷ್ಟುಪ್, ಬೃಹತೀ, ಪಂಙ್ಕ್ತಿ, ತ್ರಿಷ್ಟುಪ್, ಜಗತೀ ಎಂದು ಏಳು ಛಂದಸ್ಸಿನ ಹೆಸರಿರುವುದು. ಈ ಕುದುರೆಗಳನ್ನು ಸೂರ್ಯಸಾರಥಿಯಾದ ಅರುಣನು ರಥಕ್ಕೆ ಕಟ್ಟಿದನು. ಲೋಕಗಳಿಗೆ ಸುಖವನ್ನುಂಟುಮಾಡುವುದಕ್ಕಾಗಿ ಈ ಕುದುರೆಗಳು ಸೂರ್ಯದೇವನ ರಥವನ್ನೆಳೆಯುವುವು. ಸೂರ್ಯನ ಮುಂಭಾಗದಲ್ಲಿ ಅರುಣನೆಂಬ ಸಾರಥಿಯು ಪಶ್ಚಿಮಾಭಿಮುಖನಾಗಿರುವನು. ||೩೯-೪೦||

ಗರುಡನ ಅಣ್ಣನಾದ ಅರುಣನು ಸೂರ್ಯನ ರಥ ನಡೆಸುವ ಕೆಲಸದಲ್ಲಿರುವನು. ಹಾಗೆಯೇ ವಾಲಿಖಿಲ್ಯರೆಂಬ ಋಷಿಗಳು ಮನುಷ್ಯನ ಕೈಹೆಬ್ಬೆರಳಿನ ಒಂದು ಗೆರೆಯ ವರೆಗಿನ ಅಳತೆಯ ಶರೀರದಿಂದಿರುವರು. ||೪೧||

ಪ್ರಮಾಣೇನ ಪರಿಖ್ಯಾತಾಃ ಷಷ್ಟಿಸಾಹಸ್ರಸಂಖ್ಯಕಾಃ ।
ಸ್ತುವಂತಿ ಪುರತಃ ಸೂರ್ಯಂ ಸೂಕ್ತವಾಕ್ಯೈಃ ಸುಶೋಭನೈಃ ॥೪೨॥

ತಥಾ ಚಾನ್ಯೇ ಚ ಋಷಯೋ ಗಂಧರ್ವಾಃ ಅಪ್ಸರೋರಗಾಃ ।
ಗ್ರಾಮಣ್ಯೋ ಯಾತುಧಾನಾಶ್ಚ ದೇವಾಃ ಸರ್ವೇ ಪರೇಶ್ವರಂ ॥೪೩॥

ಏಕೈಕಶಃ ಸಪ್ತಸಪ್ತ ಮಾಸಿಮಾಸಿ ವಿರೋಚನಂ ।
ಸಾರ್ಧಲಕ್ಷೋತ್ತರಂ ಕೋಟಿನವಕಂ ಭೂಮಿಮಂಡಲಂ ॥೪೪॥

ದ್ವಿಸಹಸ್ರಂ ಯೋಜನಾನಾಂ ಸಗವ್ಯೂತ್ಯುತ್ತರಂ ಕ್ಷಣಾತ್ ।
ಪರ್ಯೇತಿ ದೇವದೇವೇಶೋ ವಿಶ್ವವ್ಯಾಪೀ ನಿರಂತರಂ ॥೪೫॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಅಷ್ಟಮಸ್ಕಂಧೇ
ಪಂಚದಶೋಽಧ್ಯಾಯಃ

---

ಆವಾಲಿಖಿಲ್ಯಋಷಿಗಳು ಅರವತ್ತುಸಾವಿರ ಸಂಖ್ಯೆಯಿಂದ ಕೂಡಿ ಸೂರ್ಯನ ಮುಂಭಾಗದಲ್ಲಿ ಮಂಗಳಕರವಾದ ವೇದಮಂತ್ರಗಳಿಂದ ಸ್ತೋತ್ರಮಾಡುತ್ತಿರುವರು. ॥೪೨॥

ಹಾಗೆಯೇ ಬೇರೆ ಋಷಿಗಳೂ, ಗಂಧರ್ವರೂ, ಅಪ್ಸರರೂ, ಉರಗರೂ, ಗ್ರಾಮಣಿಗಳೂ, ರಾಕ್ಷಸರೂ, ಸಮಸ್ತ ದೇವತೆಗಳೂ, ಕೂಡಿ ಪ್ರತಿಯೊಂದು ತಿಂಗಳಿನಲ್ಲಿಯೂ ಒಬ್ಬೊಬ್ಬರಾಗಿ ಹದಿನಾಲ್ಕು ಜನರೂ, ಇಬ್ಬರಂತೆ ಏಳು ಗುಂಪಾಗಿಯೂ, ಸೂರ್ಯನನ್ನು ಉಪಾಸನೆಮಾಡುವರು. ॥೪೩॥

ದೇವದೇವನೂ ಪ್ರಪಂಚದಲ್ಲೆಲ್ಲಾ ಇರತಕ್ಕವನೂ ಆದ ಸೂರ್ಯನು ಯಾವಾಗಲೂ ಗಮನ ಮಾಡುತ್ತ ಒಂದುಕ್ಷಣಕ್ಕೆ ಎರಡುಸಾವಿರ ಯೋಜನವೂ ಎರಡು ಕ್ರೋಶವೂ ಇರುವ ದೂರವನ್ನು ನಡೆಯುತ್ತ ಒಂಭತ್ತುಕೋಟಿ ಒಂದೂವರೆ ಲಕ್ಷ ಯೋಜನದ ಅಳತೆಯ ಭೂಮಂಡಲವನ್ನು ಸುತ್ತುತ್ತಿರುವನು. ॥೪೪-೪೫॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಎಂಟನೆಯ ಸ್ಕಂಧದಲ್ಲಿ
ಹದಿನೈದನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಅಷ್ಟಮಸ್ಕಂಧೇ

### || ಷೋಡಶೋಽಧ್ಯಾಯಃ ||

### ಹದಿನಾರನೆಯ ಅಧ್ಯಾಯವು

|| ಶ್ರೀ ನಾರಾಯಣ ಉವಾಚ ||

**ಅಥಾತಃ ಶ್ರೂಯತಾಂ ಚಿತ್ರಂ ಸೋಮಾದೀನಾಂ ಗಮಾದಿಕಂ ।**
**ತದ್ಗತ್ಯನುಸೃತಾ ನೃಣಾಂ ಶುಭಾಶುಭನಿದರ್ಶನಾ ॥೧॥**

**ಯಥಾ ಕುಲಾಲಚಕ್ರೇಣ ಭ್ರಮತಾ ಭ್ರಮತಾಂ ಸಹ ।**
**ತದಾಶ್ರಯಾಣಾಂ ಚ ಗತಿರನ್ಯಾ ಕೀಟಾದಿನಾಂ ಭವೇತ್ ॥೨॥**

**ಏವಂ ಹಿ ರಾಶಿವೃಂದೇನ ಕಾಲಚಕ್ರೇಣ ತೇನ ಚ ।**
**ಮೇರುಂ ಧ್ರುವಂ ಚ ಸರತಾಂ ಪ್ರಾದಕ್ಷಿಣ್ಯೇನ ಸರ್ವದಾ ॥೩॥**

---

ನಾರಾಯಣನು ಹೇಳಿದನು—ನಾರದನೇ, ಇಲ್ಲಿಂದ ಮುಂದೆ ಆಶ್ಚರ್ಯಕರವಾದ ಚಂದ್ರಾದಿಗಳ ಸಂಚಾರಗಳನ್ನು ಹೇಳುವೆನು ಕೇಳು. ಮನುಜರಿಗೆ ಶುಭಾಶುಭಫಲಗಳು ಈ ಗ್ರಹಗಳ ಸಂಚಾರಕ್ಕನುಸಾರವಾಗಿ ಉಂಟಾಗುವುವು. ||೧||

ತಿರುಗುತ್ತಿರುವ ಕುಂಬಾರನ ಚಕ್ರದಲ್ಲಿ ಓಡಾಡುತ್ತಿರುವ ಇರುವೆ ಮುಂತಾದ ಪ್ರಾಣಿಗಳ ಗಮನದಂತೆ ಮೇಷಾದಿರಾಶಿಗಳಲ್ಲಿ ಕಾಲಚಕ್ರಾನುಸಾರವಾಗಿ ಮೇರುವನ್ನೂ ಧ್ರುವಮಂಡಲವನ್ನೂ ಪ್ರದಕ್ಷಿಣಾಕಾರವಾಗಿ ಸುತ್ತುತ್ತಿರುವ ಸೂರ್ಯನೇ ಮೊದಲಾದ ಗ್ರಹಗಳಿಗೆ ಬೇರೆ ಸಂಚಾರವಿದ್ದಂತೆಯೂ ಕಾಣುವುದು. ||೨-೩||

ಗ್ರಹಾಣಾಂ ಭಾನುಮುಖ್ಯಾನಾಂ ಗತಿರನ್ಯೇವದೃಶ್ಯತೇ ।
ನಕ್ಷತ್ರಾಂತರಗಾಮಿತ್ವಾದ್ಭಾಂತರೇ(ತ್ಸ್ವರಾಶಿ)ಗಮನಂ ತಥಾ ॥೪॥

ಗತಿದ್ವಂಯಂ ಚಾsವಿರುದ್ಧಂ ಸರ್ವತ್ರೈಷ ವಿನಿರ್ಣಯಃ ।
ಸ ಏವ ಭಗವಾನಾದಿಪುರುಷೋ ಲೋಕಭಾವನಃ ॥೫॥

ನಾರಾಯಣೋsಖಿಲಾಧಾರೋ ಲೋಕಾನಾಂ ಸ್ವಸ್ತಯೇ ಭ್ರಮನ್ ।
ಕರ್ಮಶುದ್ಧಿನಿಮಿತ್ತಂ ತು ಆತ್ಮಾನಂ ವೈ ತ್ರಯೀಮಯಂ ॥೬॥

ಕವಿಭಿಶ್ಚೈವ ವೇದೇನ ವಿಜಿ (ಜ್ಞಾ)ಸ್ಯೋsರ್ಕಧಾ ಭವತ್ ।
ಷಟ್ಸು ಕ್ರಮೇಣ ಋತು ಷು ವಸಂತಾದಿಷು ಚ ಸ್ವಯಂ ॥೭॥

ಯಥೋಪಜೋಷಂ ಋತುಜಾನ್ ಗುಣಾನ್ಸೈ ವಿದಧಾತಿ ಚ ।
ತಮೇನಂ ಪುರುಷಾಸ್ಸರ್ವೇ ತ್ರಯ್ಯಾ ಚ ವಿದ್ಯಯಾ ಸದಾ ॥೮॥

ವರ್ಣಾಶ್ರಮಾಚಾರಪಥಾ ತಥಾಮ್ನಾತೈಶ್ಚ ಕರ್ಮಭಿಃ ।
ಉಚ್ಚಾವಚೈಃ ಶ್ರದ್ಧಯಾ ಚ ಯೋಗಾನಾಂ ಚ ವಿತಾನಕೈಃ ॥೯॥

---

ಒಂದು ನಕ್ಷತ್ರದ ಒಂದು ಪಾದದಿಂದ ಮತ್ತೊಂದು ಪಾದಕ್ಕೆ ಹೋಗುವುದೂ ಈ ಎರಡು ಗಮನಗಳೂ ಎಲ್ಲ ಗ್ರಹಗಳಿಗೂ ಅವಿರುದ್ಧವಾದುದೆಂದು ನಿರ್ಣಯವು. ॥೪॥

ಷಡ್ಗುಣೈಶ್ವರ್ಯಸಂಪನ್ನನೂ ಆದಿಪುರುಷನೂ ಸಮಸ್ತಕ್ಕೂ ಆಶ್ರಯಸ್ವರೂಪನೂ ಜನರಿಂದ ಧ್ಯಾನಿಸಲ್ಪಡತಕ್ಕವನೂ ಆದ ಸೂರ್ಯನಾರಾಯಣನು ಸಮಸ್ತ ಲೋಕಗಳ ಶುಭಕ್ಕೋಸ್ಕರವಾಗಿ, ಕರ್ಮಾಚರಣೆಗಾಗಿಯೂ ಸಮಸ್ತ ವಸ್ತುಗಳನ್ನೂ ಪರಿಶುದ್ಧಿಮಾಡುವುದಕ್ಕಾಗಿಯೂ ಕವಿಗಳಿಂದಲೂ ವೇದಗಳಿಂದಲೂ ತಿಳಿಯಲ್ಪಡ ತಕ್ಕವನಾಗಿ ವೇದಸ್ವರೂಪನಾದ ತನ್ನನ್ನು ಹನ್ನೆರಡು ಭಾಗವಾಗಿರುವಂತೆ ಕಾಣಿಸಿಕೊಂಡನು. ॥೫-೬॥

ಅವನು ವಸಂತಾದಿ ಆರು ಋತುಗಳಲ್ಲಿ ಕರ್ಮಭೋಗಕ್ಕನುಸಾರವಾಗಿ ಋತುಸಂಬಂಧವಾದ ಗುಣಗಳನ್ನುಂಟುಮಾಡುವನು. ॥೭॥

ಆ ಸೂರ್ಯನಾರಾಯಣನನ್ನು ಸಮಸ್ತ ಜನರೂ ವೇದವಿದ್ಯೆಯಿಂದಲೂ ವರ್ಣಾಶ್ರಮಗಳ ಆಚಾರಮಾರ್ಗದಿಂದ ಎಂದರೆ, ವೇದವಿಹಿತವಾದ ಕರ್ಮಗಳಿಂದಲೂ

ಅಂಜಸಾ ಚ ಯಜಂತೇ ಯೇ ಶ್ರೇಯೋ ವಿಂದಂತಿ ತೇ ಮತಂ ।
ಆಥ್ಯೈಷ ಆತ್ಮಾ ಲೋಕಾನಾಂ ದ್ಯಾವಾಭೂಮ್ಯಂತರೇಣ ಚ ॥೧೦।

ಕಾಲಚಕ್ರಗತೋ ಭುಙ್ಕ್ತೇ ಮಾಸಾನ್ ದ್ವಾದಶರಾಶಿಭಿಃ ।
ಸಂವತ್ಸರಸ್ಯಾವಯವಾನ್ಮಾಸಃ ಪಕ್ಷದ್ವಯಂ ದಿವಾ ॥೧೧॥

ನಕ್ತಂ ಚೇತಿ ಸಪಾದರ್ಕ್ಷದ್ವಯಮಿತ್ಯುಪದಿಶ್ಯತೇ ।
ಯಾವತಾ ಷಷ್ಠಮಂಶಂ ಸ ಭುಂಜೀತ ಋತುರುಚ್ಯತೇ ॥೧೨॥

ಸಂವತ್ಸರಸ್ಯಾವಯವಃ ಕವಿಭಿಶ್ಚೋಪವರ್ಣಿತಃ ।
ಯಾವತಾರ್ಧೇನ ಚಾಕಾಶವೀಥ್ಯಾಂ ಪ್ರಚರತೇ ರವಿಃ ॥೧೩॥

ತಂ ಪ್ರಾಕ್ತನಾ ವರ್ಣಯಂತಿ ಅಯನಂ ಮುನಿಪೂಜಿತಾಃ ।
ಅಥ ಯಾವನ್ನಭೋಮಂಡಲಂ ಸಹ ಪ್ರತಿಗಚ್ಛತಿ ॥೧೪॥
ಕಾರ್ತ್ಸ್ನ್ಯೇನ ಸಹ ಭುಂಜೀತ ಕಾಲಂ ತಂ ವತ್ಸರಂ ವಿದುಃ ।

---

ಸ್ತೋತ್ರಗಳಿಂದಲೂ, ಭಕ್ತಿಯಿಂದಲೂ ಯೋಗದಿಂದಲೂ ಯಾರು ಪೂಜಿಸುವರೋ ಅವರು ಶುಭಫಲವನ್ನು ಪಡೆಯುವರು. ॥೮-೯॥

ಪ್ರಪಂಚಕ್ಕೆ ಆತ್ಮಸ್ವರೂಪನಾದ ಸೂರ್ಯನು ದ್ಯುಲೋಕಕ್ಕೂ ಭೂಮಿಗೂ ನಡುವೆ ಕಾಲಚಕ್ರದಲ್ಲಿದ್ದುಕೊಂಡು ಹನ್ನೆರಡು ರಾಶಿಗಳಲ್ಲಿ ವರ್ಷದ ಭಾಗದಿಂದ ಹನ್ನೆರಡು ತಿಂಗಳುಗಳನ್ನು ಕಳೆಯುವನು. ಚಂದ್ರಮಾನದಿಂದ ಎರಡು ಪಕ್ಷಗಳು ಒಂದು ಮಾಸವು. ಸೌರಮಾನದಿಂದ ಎರಡೂಕಾಲು ನಕ್ಷತ್ರಗಳಿಗೆ ಒಂದು ಮಾಸವು. ಹಗಲು ರಾತ್ರಿಗಳಿಗೆ ಒಂದು ಮಾಸವೆಂಬುದು ಪಿತೃಮಾನವು. ॥೧೦-೧೧॥

ಕಾಲಚಕ್ರದ ಆರನೇ ಒಂದು ಭಾಗವನ್ನು ಎಷ್ಟು ಕಾಲದಲ್ಲಿ ದಾಟುವನೋ ಆ ಕಾಲವನ್ನು ಋತುವೆಂಬ ಸಂವತ್ಸರದ ಭಾಗವಾಗಿ ಕವಿಗಳು ವರ್ಣಿಸಿರುವರು. ॥೧೨-೧೩॥

ಆಕಾಶವೀಥಿಯಲ್ಲಿ ಅರ್ಧಭಾಗವನ್ನು ದಾಟಿದರೆ ಅದನ್ನು ಅಯನವೆಂದೂ ಪೂರ್ಣವಾಗಿ ದಾಟಿದರೆ ಆ ಕಾಲವನ್ನು ಸಂವತ್ಸರವೆಂದೂ ತಿಳಿದಿರುವರು. ॥೧೪॥

ಸಂವತ್ಸರಂ ಪರಿವತ್ಸರಮಿಡಾವತ್ಸರಮೇವ ಚ ॥೧೫॥

ಅನುವತ್ಸರಮಿದ್ವತ್ಸರಮಿತಿ ಪಂಚಕವಿಾರಿತಂ ।
ಭಾನೋರ್ವರ್ಾಂದ್ಯ ಶೈಘ್ರ್ಯಸಮಗತಿಭಿಃ ಕಾಲವಿತ್ತಮೈಃ ॥೧೬॥

ಏವಂ ಭಾನೋರ್ಗತಿಃ ಪ್ರೋಕ್ತಾ ಚಂದ್ರಾದೀನಾಂ ನಿಬೋಧತ ।
ಏವಂ ಚಂದ್ರೋಽರ್ಕರಶ್ಮಿಭ್ಯೋ ಲಕ್ಷಯೋಜನಮೂರ್ಧ್ವತಃ ॥೧೭॥

ಉಪಲಭ್ಯಮಾನೋ ಮಿತ್ರಸ್ಯ ಸಂವತ್ಸರಭುಜಿಂ ಚ ಸಃ ।
ಪಕ್ಷಾಭ್ಯಾಂ ಚೌಷಧೀನಾಥೋ ಭುಙ್ಕ್ತೇ ಮಾಸಭುಜಿಂ ಚ ಸಃ ॥೧೮॥

ಸಪಾದಭಾಭ್ಯಾಂ ದಿವಸಭುಕ್ತಿಂ ಪಕ್ಷಭುಜಿಂ ಚ ತತ್ ।
ಏವಂ ಶೀಘ್ರಗತಿಸ್ಸೋಽನೋ ಭುಂಕ್ತೇ ನೂನಂ ಭಚಕ್ರಕಂ ॥೧೯॥

---

ಸಂವತ್ಸರ, ಪರಿವತ್ಸರ, ಇಡಾವತ್ಸರ, ಅನುವತ್ಸರ, ಇದ್ವತ್ಸರ ಎಂದು ಐದು ವರ್ಷಗಳು. ಶುಕ್ಲಪಕ್ಷದ ಪಾಡ್ಯಮಿಯದಿನ ಸಂಕ್ರಮಣವು ಬಂದರೆ ಆಗ ಚಾಂದ್ರ ಸೌರಮಾಸಗಳ ಆರಂಭವು ಏಕಕಾಲದಲ್ಲಾಗುವುದು. ಅದನ್ನೇ ಸಂವತ್ಸರವೆಂದು ಕರೆಯುವರು. ಅಲ್ಲಿಂದ ಮುಂದೆ ಚಾಂದ್ರಸೌರಮಾನಗಳಲ್ಲಿ ವರ್ಷಕ್ಕೆ ಹನ್ನೆರಡು ದಿನಗಳು ವ್ಯವಧಾನವುಂಟಾಗುವುದರಿಂದ ಐದು ವರ್ಷಗಳ ಮೇಲೆ ಒಂದೇ ದಿನದಲ್ಲಿ ಚಾಂದ್ರಸೌರವರ್ಷಗಳು ಪ್ರಾರಂಭವಾಗುವುವು. ಈ ನಿಯಮವನ್ನನುಸರಿಸಿ ಐದು ವರ್ಷಗಳಿಗೆ ಈ ಹೆಸರುಗಳನ್ನು ಕೊಟ್ಟಿರುವುದು. ॥೧೫॥

ಕಾಲವನ್ನು ಬಲ್ಲವರು ಸೂರ್ಯನ ಮಂದಶೀಘ್ರಸಮಗತಿಗಳಿಂದ ಈ ವರ್ಷಭೇದಗಳು ಉಂಟಾದುವು ಎಂದು ಹೇಳುವರು. ಹೀಗೆ ಸೂರ್ಯನ ಗತಿಯನ್ನು ಹೇಳಿಯಾಯ್ತು. ಚಂದ್ರಾದಿಗ್ರಹಗಳ ಗತಿಯನ್ನು ಕೇಳು. ॥೧೬॥

ಚಂದ್ರನು ಸೂರ್ಯನ ಕಾಂತಿಯಿಂದ ಲಕ್ಷಯೋಜನ ದೂರದಲ್ಲಿದ್ದು ಸೂರ್ಯನ ಒಂದು ವರ್ಷದ ಗಮನವನ್ನು ಒಂದು ತಿಂಗಳಲ್ಲಿಯೂ, ಒಂದು ತಿಂಗಳ ಗಮನವನ್ನು ಎರಡುಕಾಲು ನಕ್ಷತ್ರ (ದಿನ) ದಲ್ಲಿಯೂ ಮಾಡುವನು. ಹೀಗೆ ಚಂದ್ರನು ವೇಗವಾದ ಗಮನದಿಂದ ನಕ್ಷತ್ರ ಚಕ್ರವನ್ನು ಸುತ್ತುವನು. ॥೧೭-೧೮-೧೯॥

ಪೂರ್ಯಮಾಣ ಕಲಾಭಿಶ್ಚಾಽಮರಾಣಾಂ ಪ್ರೀತಿಮಾವಹನ್ ।
ಕ್ಷೀಯಮಾಣಕಲಾಭಿಶ್ಚ ಪಿತೄಣಾಂ ಚಿತ್ತರಂಜಕಃ ॥೨೦॥

ಅಹೋರಾತ್ರಾಣಿ ತನ್ವಾನಃ ಪೂರ್ವಾಪರಸುಘಸ್ರಕೈಃ ।
ಸರ್ವಜೀವನಿಕಾಯಸ್ಯ ಪ್ರಾಣೋ ಜೀವಃ ಸ ಏವ ಹಿ ॥೨೧॥

ಭುಙ್ಕ್ತೇ ಚೈಕೈಕನಕ್ಷತ್ರಂ ಮುಹೂರ್ತತ್ರಿಂಶತಾ ವಿಭುಃ ।
ಸ ಏವ ಷೋಡಶಕಲಃ ಪುರುಷೋಽನಾದಿರುತ್ತಮಃ ॥೨೨॥

ಮನೋಮಯೋಽಪ್ಯನ್ನಮಯೋಽಮೃತಧಾಮಾ ಸುಧಾಕರಃ ।
ದೇವಪಿತೃಮನುಷ್ಯಾದಿ ಸರೀಸೃಪಸವೀರುಧಾಂ ॥೨೩॥

ಪ್ರಾಣಾಪ್ಯಾಯನಶೀಲತ್ವಾತ್ ಸ ಸರ್ವಮಯ ಉಚ್ಯತೇ ।
ತತೋ ಭಚಕ್ರಂ ಭ್ರಮತಿ ಯೋಜನಾನಾಂ ತ್ರಿಲಕ್ಷತಃ ॥೨೪॥

---

ಮತ್ತು ಶುಕ್ಲಪಕ್ಷದಲ್ಲಿ ಹೆಚ್ಚುತ್ತಿರುವ ಕಲೆಗಳಿಂದ ದೇವತೆಗಳಿಗೆ ಹಗಲನ್ನೂ ಸಂತೋಷವನ್ನೂ ಉಂಟುಮಾಡುತ್ತ, ಕೃಷ್ಣಪಕ್ಷದಲ್ಲಿ ಕಡಿಮೆಯಾಗುತ್ತಿರುವ ಕಲೆಗಳಿಂದ ರಾತ್ರಿಯನ್ನೂ ಪಿತೃಗಳಿಗೆ ಸಂತೋಷವನ್ನೂ ಉಂಟುಮಾಡುತ್ತ, ಸಮಸ್ತ ಪ್ರಾಣಿಗಳಿಗೂ ಅನ್ನಮಯನೂ ಅಮೃತಮಯನೂ ಆಗಿರುವುದರಿಂದ ಪ್ರಾಣಸ್ವರೂಪನೂ, ಜ್ಞಾನಹೇತುವಾಗಿರುವುದರಿಂದ ಜೀವಸ್ವರೂಪನೂ ಆಗಿರುವನು. ||೨೦-೨೧||

ಚಂದ್ರನು ಮೂವತ್ತು ಮುಹೂರ್ತಗಳಲ್ಲಿ ಎಂದರೆ ಅರವತ್ತುಗಳಿಗೆಯಲ್ಲಿ ಒಂದೊಂದು ನಕ್ಷತ್ರವನ್ನು ದಾಟುವನು. ಇವನೇ ಅನಾದಿಪುರುಷನೂ ಶ್ರೇಷ್ಠನೂ ಆದ ಷೋಡಶ ಕಲಾಪುರುಷನು (ಹದಿನಾರು ಕಲೆಗಳು) ಮನೋರೂಪನಾಗಿಯೂ, ಅನ್ನರೂಪನಾಗಿಯೂ ಅಮೃತಕ್ಕೆ ಆಶ್ರಯನಾಗಿಯೂ, ಅಮೃತವನ್ನುಂಟುಮಾಡುವವನಾಗಿಯೂ, ದೇವತೆಗಳು ಪಿತೃಗಳು ಮನುಷ್ಯರು ಮೊದಲಾಗಿ ಹಾವುಗಳು ಬಳ್ಳಿಗಳು ಮುಂತಾದುವುಗಳಿಗೆ ಜೀವನ ಸಂತೋಷವನ್ನುಂಟುಮಾಡುವ ಸ್ವಭಾವವಿರುವುದರಿಂದ ಚಂದ್ರನನ್ನು ಸರ್ವಮಯನೆಂದು ಹೇಳುವರು. ||೨೨-೨೩||

ಆ ಚಂದ್ರಮಂಡಲದಿಂದ ಮೂರುಲಕ್ಷಯೋಜನ ದೂರದಲ್ಲಿ ಅಭಿಜಿತ್ ಎಂಬ ನಕ್ಷತ್ರವೂ ಸೇರಿ ಅಶ್ವಿನ್ಯಾದಿ ಇಪ್ಪತ್ತೆಂಟು ನಕ್ಷತ್ರಗಳುಳ್ಳ ನಕ್ಷತ್ರಚಕ್ರವು

ಮೇರುಪ್ರದಕ್ಷಿಣೇನೈವ ಯೋಜಿತಂ ಚ ಈಶ್ವರೇಣ ತು ।
ಅಷ್ಟವಿಂಶತಿ ಸಂಖ್ಯಾನಿ ಗಣಿತಾನಿ ಸಹಾಭಿಜಿತ್ ॥೨೫॥

ತತಃ ಶುಕ್ರೋ ದ್ವಿಲಕ್ಷೇಣ ಯೋಜನಾನಾಮುಥೋಪರಿ ।
ಪುರಃಪಶ್ಚಾತ್ಸಹೈವಾಸೌ ಅರ್ಕಸ್ಯ ಪರಿವರ್ತತೇ ॥೨೬॥

ಶೀಘ್ರಮಂದಸಮಾನಾಭಿಃ ಗತಿಭಿರ್ವಿಚರನ್ವಿಭುಃ ।
ಲೋಕಾನಾಮನುಕೂಲೋಽಯಂ ಪ್ರಾಯಃ ಪ್ರೋಕ್ತಃ ಶುಭಾವಹಃ ॥೨೭॥

ವೃಷ್ಟಿವಿಷ್ಟಂಭಶಮನೋ ಭಾರ್ಗವಃ ಸರ್ವದಾ ಮುನೇ ।
ಶುಕ್ರಾದ್ಬುಧಃ ಸಮಾಖ್ಯಾತೋ ಯೋಜನಾನಾಂ ದ್ವಿಲಕ್ಷಕಃ ॥೨೮॥

ಶೀಘ್ರಮಂದಸಮಾನಾಭಿರ್ಗತಿಭಿಃ ಶುಕ್ರವತ್ಸದಾ ।
ಯದಾರ್ಕಾದ್ವ್ಯತಿರಿಚ್ಯೇತ ಸೌಮ್ಯಃ ಪ್ರಾಯೇಣ ತತ್ರ ತು ॥೨೯॥

ಅತಿವಾತಾಭ್ರಪಾತಾನಾವೃಷ್ಟ್ಯಾದಿ ಭಯಸೂಚಕಃ ।
ಉಪರಿಷ್ಟಾತ್ತತೋ ಭೌಮೋ ಯೋಜನಾನಾಂ ದ್ವಿಲಕ್ಷಕಃ ॥೩೦॥

ಈಶ್ವರನಿಂದ ಸಂಬಂಧಿಸಲ್ಪಟ್ಟು ಮೇರುವನ್ನು ಪ್ರದಕ್ಷಿಣಾಕಾರವಾಗಿ ಸುತ್ತುವುದು. ಉತ್ತರಾಷಾಢಾ, ಶ್ರವಣ, ನಕ್ಷತ್ರಗಳ ಸಂಧಿಕಾಲಕ್ಕೆ ಅಭಿಜಿತ್ತೆಂದುಹೆಸರು.॥೨೪-೨೫॥

ಅನಕ್ಷತ್ರಚಕ್ರದಿಂದ ಮುಂದೆ ಎರಡು ಲಕ್ಷ ಯೋಜನ ದೂರದಲ್ಲಿ ಶುಕ್ರ ಗ್ರಹವು ಸೂರ್ಯಗ್ರಹದ ಮುಂದೆ ಹಿಂದೆ ಅಥವಾ ಜತೆಯಲ್ಲಿಯೇ ಶೀಘ್ರ, ಮಂದ, ಸಮಾನಗತಿಗಳಿಂದ ಸಂಚರಿಸುವುದು. ಬಹುತರವಾಗಿ ಈ ಗ್ರಹವು ಲೋಕದ ಜನರಿಗೆ ಅನುಕೂಲವನ್ನುಂಟುಮಾಡುವ ಶುಭಗ್ರಹವಾಗಿರುವುದು. ॥೨೬-೨೭॥

ಎಲೈ ನಾರದಮುನಿಯೇ, ಶುಕ್ರನು ಯಾವಾಗಲೂ ಮಳೆಗೆ ಇರುವ ಪ್ರತಿ ಬಂಧವನ್ನು ನಾಶಮಾಡುವನು. ಈ ಶುಕ್ರನಿಂದ ಮುಂದೆ ಬುಧನು ಎರಡುಲಕ್ಷ ಯೋಜನ ದೂರದಲ್ಲಿ ಶೀಘ್ರಮಂದಸಮಾನಗತಿಗಳಿಂದ ಶುಕ್ರನಂತೆಯೇ ಸೂರ್ಯನ ಹಿಂದೆ ಮುಂದೆ ಅಥವಾ ಜತೆಯಲ್ಲಿಯೇ ಸಂಚರಿಸುವನು. ಆ ಬುಧನು ಸೂರ್ಯ ನನ್ನು ಬಿಟ್ಟದ್ದರೆ ಆ ಕಾಲದಲ್ಲಿ ಪ್ರಪಂಚದಲ್ಲಿ ಅತಿಯಾದ ಗಾಳಿ, ಸಿಡಿಲು, ಅನಾ ವೃಷ್ಟಿ ಮುಂತಾದ ಭಯವನ್ನುಂಟುಮಾಡುವನು. ॥೨೮-೨೯॥

ಅಲ್ಲಿಂದ ಮುಂದೆ ಎರಡುಲಕ್ಷ ಯೋಜನ ದೂರದಲ್ಲಿ ಅಂಗಾರಕನು ವಕ್ರ

ಪಕ್ಷೈಸ್ತ್ರಿಭಿಸ್ತ್ರಿಭಿಃ ಸೋಽಯಂ ಭುಙ್ಕ್ತೇ ರಾಶೀನಥೈಕಶಃ ।
ದ್ವಾದಶಾಽಪಿ ಚ ದೇವರ್ಷೇ ಯದಿ ವಕ್ರೋ ನ ಜಾಯತೇ ॥೩೦॥

ಪ್ರಾಯೇಣಾಽಶುಭಕೃತ್ಸೋಽಯಂ ಗ್ರಹೌಘಾನಾಂ ಚ ಸೂಚಕಃ ।
ತತೋ ದ್ವಿಲಕ್ಷಮಾನೇನ ಯೋಜನಾನಾಂ ಚ ಗೀಷ್ಪತಿಃ ॥೩೨॥

ಏಕೈಕಸ್ಮಿನ್ನಥೋ ರಾಶೌ ಭುಙ್ಕ್ತೇ ಸಂವತ್ಸರಂ ಚರನ್ ।
ಯದಿ ವಕ್ರೋ ಭವೇನ್ನೈವಾಽನುಕೂಲೋ ಬ್ರಹ್ಮವಾದಿನಾಂ ॥೩೩॥

ತತಃ ಶನೈಶ್ಚರೋ ಘೋರೋ ಲಕ್ಷದ್ವಯಪರೋ ಮಿತಃ ।
ಯೋಜನೈಃ ಸೂರ್ಯಪುತ್ರೋಽಯಂ ತ್ರಿಂಶನ್ಮಾಸೈಃ ಪರಿಭ್ರಮನ್ ॥೩೪॥

ಏಕೈಕರಾಶೌ ಪರ್ಯೇತಿ ಸರ್ವಾನ್ರಾಶೀನ್ಮಹಾಗ್ರಹಃ ।
ಸರ್ವೇಷಾಮಶುಭೋ ಮಂದಃ ಪ್ರೋಕ್ತಃ ಕಾಲವಿದಾಂ ವರೈಃ ॥೩೫॥

ತತ ಉತ್ತರತಃ ಪ್ರೋಕ್ತಮೇಕಾದಶಸು ಲಕ್ಷಕೈಃ ।
ಯೋಜನೈಃ ಪರಿಸಂಖ್ಯಾತಂ ಸಪ್ತರ್ಷೀಣಾಂ ಚ ಮಂಡಲಂ ॥೩೬॥

---

ನಾಗದಿದ್ದರೆ ಮೂರು ಪಕ್ಷಗಳಿಗೆ ಒಂದು ರಾಶಿಯಂತೆ ಹನ್ನೆರಡು ರಾಶಿಗಳಲ್ಲಿ ಸಂಚರಿಸುವನು. ಪ್ರಾಯಃ ಕ್ರೂರಗ್ರಹವಾದ ಈ ಅಂಗಾರಕನು ಅಶುಭವನ್ನು ಮಾಡತಕ್ಕವನೂ ಪಾಪಗಳನ್ನು ಸೂಚಿಸತಕ್ಕವನೂ ಆಗಿರುವನು. ॥೩೦-೩೧॥

ಅಲ್ಲಿಂದ ಮುಂದೆ ಎರಡುಲಕ್ಷ ಯೋಜನ ದೂರದಲ್ಲಿ ಬೃಹಸ್ಪತಿಗ್ರಹವು ವಕ್ರವಾಗದಿದ್ದರೆ ಒಂದೊಂದು ರಾಶಿಯಲ್ಲಿ ಒಂದೊಂದು ವರ್ಷದಂತೆ ಹನ್ನೆರಡು ರಾಶಿಗಳಲ್ಲಿ ಸಂಚರಿಸುವುದು. ಈ ಗ್ರಹವು ಬ್ರಹ್ಮಜ್ಞಾನಿಗಳಾದ ಬ್ರಾಹ್ಮಣರಿಗೆ ಶುಭ ಫಲವನ್ನು ಕೊಡುವುದು. ॥೩೨-೩೩॥

ಅಲ್ಲಿಂದ ಆಚೆಗೆ ಎರಡು ಲಕ್ಷ ಯೋಜನ ದೂರದಲ್ಲಿ ಸೂರ್ಯಪುತ್ರನಾದ ಶನಿಯು ತನ್ನ ಮಂದಗತಿಯಿಂದ ಮೂವತ್ತು ತಿಂಗಳಿಗೆ ಒಂದು ರಾಶಿಯಂತೆ ಹನ್ನೆರಡು ರಾಶಿಗಳನ್ನೂ ಸುತ್ತುವನು. ಕಾಲಫಲವನ್ನು ಬಲ್ಲವರು ಈ ಶನಿಯು ಸಮಸ್ತರಿಗೂ ಅಶುಭಫಲವನ್ನು ಕೊಡುವನೆಂದು ಹೇಳುವರು. ॥೩೪-೩೫॥

ಅಲ್ಲಿಂದ ಹೊರಗೆ ಹನ್ನೊಂದುಲಕ್ಷ ಯೋಜನ ದೂರದಲ್ಲಿ ಸಪ್ತರ್ಷಿಮಂಡಲ

**ಲೋಕಾನಾಂ ಶಂ ಭಾವಯಂತೋ ಮುನಯಃ ಸಪ್ತ ತೇ ಮುನೇ ।**
**ಯತ್ತದ್ವಿಷ್ಣುಪದಂ ಸ್ಥಾನಂ ದಕ್ಷಿಣಂ ಕ್ರಮತೇ ಚ ತೇ ॥೩೭॥**

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಅಷ್ಟಮಸ್ಕಂಧೇ ಷೋಡಶೋಽಧ್ಯಾಯಃ.**

---

ವಿರುವುದು. ಆ ಸಪ್ತರ್ಷಿಗಳು ಲೋಕಗಳಿಗೆಲ್ಲಾ ಸುಖವನ್ನು ಬಯಸುತ್ತ ವಿಷ್ಣುಪದ ಸ್ಥಾನವನ್ನು ಪ್ರದಕ್ಷಿಣಾಕಾರವಾಗಿ ಸುತ್ತುತ್ತಿರುವರು. ||೩೬-೩೭||

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಎಂಟನೆಯ ಸ್ಕಂಧದಲ್ಲಿ ಹದಿನಾರನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಅಷ್ಟಮಸ್ಕಂಧೇ

### || ಸಪ್ತದಶೋಽಧ್ಯಾಯಃ ||

### ಹದಿನೇಳನೆಯ ಅಧ್ಯಾಯವು

|| ಶ್ರೀನಾರಾಯಣ ಉವಾಚ ||

**ಅಥರ್ಷಿಮಂಡಲಾದೂರ್ಧ್ವಂ ಯೋಜನಾನಾಂ ಪ್ರಮಾಣತಃ ।**
**ಲಕ್ಷೈಸ್ತ್ರಯೋದಶಮಿತೈಃ ಪರಮಂ ವೈಷ್ಣವಂ ಪದಂ ||೧||**

**ಮಹಾಭಾಗವತಃ ಶ್ರೀಮಾನ್ವರ್ತತೇ ಲೋಕವಂದಿತಃ ।**
**ಔತ್ತಾನಪಾದಿರಿಂದ್ರೇಣ ವಹ್ನಿನಾ ಕಶ್ಯಪೇನ ಚ ||೨||**

**ಧರ್ಮೇಣ ಸಹ ಚೈವಾಸ್ತೇ ಸಮಕಾಲಯುಜಾ ಧ್ರುವಃ ।**
**ಬಹುಮಾನಂ ದಕ್ಷಿಣತಃ ಕುರ್ವದ್ಭಿಃ ಪ್ರೇಕ್ಷಕೈಃ ಸದಾ ||೩||**

---

ನಾರಾಯಣನು ಹೇಳಿದನು—ಋಷಿಮಂಡಲದಿಂದ ಮುಂದೆ ಹದಿಮೂರು ಲಕ್ಷ ಯೋಜನ ದೂರದಲ್ಲಿ ಶ್ರೇಷ್ಠವಾದ ವಿಷ್ಣುಪದವೆಂಬ ಸ್ಥಾನವಿರುವುದು. ||೧||

ಅಲ್ಲಿ ಭಕ್ತಶ್ರೇಷ್ಠನೂ ಶ್ರೀಮಂತನೂ ಆದ ಉತ್ತಾನಪಾದರಾಜನ ಮಗನಾದ ಧ್ರುವನು ತನ್ನ ಸಮಕಾಲಿಕರಾದ ಇಂದ್ರ, ಅಗ್ನಿ, ಕಶ್ಯಪ, ಧರ್ಮ ಇವರೊಡನೆ ಎಂದರೆ ನಕ್ಷತ್ರರೂಪರಾದ ಇವರೊಡನೆ ತಾನೂ ನಕ್ಷತ್ರರೂಪನಾಗಿರುವನು. ||೨||

ಆ ಧ್ರುವನು ಯಾವಾಗಲೂ ತನ್ನ ಬಲಭಾಗದಲ್ಲಿ ತನ್ನನ್ನು ನೋಡುತ್ತ ತನಗೆ ಗೌರವವನ್ನುಂಟುಮಾಡುತ್ತಿರುವ ಮತ್ತು ತಾನಿರುವವರೆಗೂ ಇರುವ ನಕ್ಷತ್ರ ರೂಪರಾದ ಇಂದ್ರಾದಿಗಳಿಗೆ ಸ್ಥಿತಿಕಾರಣನಾಗಿ ಭಗವಂತನ ಪಾದವನ್ನು ಉಪಾಸನೆ ಮಾಡುತ್ತಾ, ಅಸ್ಪಷ್ಟವಾದ ವೇಗದಿಂದ ಅಸ್ಪಷ್ಟವಾದ ಕಾಲದಲ್ಲಿ ಸಮಸ್ತವಾದ

ಆಜೀವ್ಯಃ ಕಲ್ಪಜೀವಿನಾಮುಪಾಸ್ತೇ ಭಗವತ್ಪದಂ ।
ಜ್ಯೋತಿರ್ಗಣಾನಾಂ ಸರ್ವೇಷಾಂ ಗ್ರಹನಕ್ಷತ್ರಭಾದಿನಾಂ ॥೪॥

ಕಾಲೇನಾನಮಿಷೇಣಾಯಂ ಭ್ರಾಮ್ಯತಾಂ ವ್ಯಕ್ತರಂಹಸಾ ।
ಅವಷ್ಟಂಭಸ್ಥಾಣುರಿವ ವಿಹಿತಶ್ಚೇಶ್ವರೇಣ ಸಃ ॥೫॥

ಭಾಸತೇ ಭಾಸಯನ್ ಭಾಸಾ ಸ್ವೀಯಯಾ ದೇವಪೂಜಿತಃ ।
ಮೇಢಿಸ್ತಂಭೇ ಯಥಾ ಯುಕ್ತಾಃ ಪಶವಃ ಕರ್ಷಣಾರ್ಥಕಾಃ ॥೬॥

ಮಂಡಲಾನಿ ಚರಂತೀಮೇ ಸವನತ್ರಿತಯೇನ ಚ ।
ಏವಂ ಗ್ರಹಾದಯಃ ಸರ್ವೇ ಭಗಣಾದ್ಯಾ ಯಥಾಕ್ರಮಂ ॥೭॥

ಅಂತರ್ಬಹಿರ್ವಿಭಾಗೇನ ಕಾಲಚಕ್ರೇ ನಿಯೋಜಿತಾಃ ।
ಧ್ರುವಮೇವಾವಲಂಬ್ಯಾಶು ವಾಯುನೋದೀರಿತಾಶ್ಚರನ್ ॥೮॥

ಆಕಲ್ಪಾಂತಂ ಚಕ್ರಮಂತಿ ಖೇ ಶ್ಯೇನಾದ್ಯಾಃ ಖಗಾಇವ ।
ಕರ್ಮಸಾರಥಯೋ ವಾಯುವಶಾಃ ಸರ್ವತಏವ ತೇ ॥೯॥

---

ಗ್ರಹಗಳು ನಕ್ಷತ್ರಗಳು ಮುಂತಾದ ಜ್ಯೋತಿರ್ಮಂಡಲಗಳಿಗೆ ಆಶ್ರಯವಾದ ಕಂಬದಂತೆ ಈಶ್ವರನಿಂದ ಮಾಡಲ್ಪಟ್ಟಿರುವನು. ॥೩-೪-೫॥

ದೇವತೆಗಳಿಂದ ಪೂಜಿಸಲ್ಪಟ್ಟ ಆ ಧ್ರುವನು ತನ್ನ ಕಾಂತಿಯಿಂದ ತನ್ನನ್ನೂ ಇತರ ಗ್ರಹನಕ್ಷತ್ರಾದಿಗಳನ್ನೂ ಪ್ರಕಾಶಪಡಿಸುತ್ತಿರುವನು. ಮೇಟಿಕಂಬಕ್ಕೆ ಕಟ್ಟಿದ ಪಶುಗಳಂತೆ, ಸಮಸ್ತ ಗ್ರಹಗಳೂ ನಕ್ಷತ್ರಗಳೂ ಕ್ರಮವಾಗಿ ಮೂರು ಕಾಲಗಳಲ್ಲಿಯೂ ಈ ಧ್ರುವಮಂಡಲದ ಸುತ್ತಲೂ ತಿರುಗುತ್ತಿರುವುವು. ॥೬-೭॥

ಆ ಗ್ರಹಗಳು ಕಾಲಚಕ್ರದಲ್ಲಿ ತಮ್ಮ ಸಂಸ್ಥಾನದ ಒಳಗೂ ಹೊರಗೂ ಸೇರಿಸಲ್ಪಟ್ಟವುಗಳಾಗಿ ಧ್ರುವವನ್ನೇ ಆಶ್ರಯಿಸಿ ವಾಯುವಿನಿಂದ ತಳ್ಳಲ್ಪಟ್ಟು ಆಕಾಶದಲ್ಲಿ ಗಿಡುಗನೇ ಮೊದಲಾದ ಹಕ್ಕಿಗಳು ಸುತ್ತುವಂತೆ ಕಲ್ಪಕಾಲವು ಮುಗಿಯುವ ವರೆಗೂ ಸುತ್ತುತ್ತಿರುವುವು. ಈ ಸಮಸ್ತಗ್ರಹಗಳೂ ಕರ್ಮಫಲಕ್ಕೆ ಸಾರಥಿಯಾದವುಗಳಾಗಿ ಎಂದರೆ ಕರ್ಮಫಲವನ್ನು ಕೊಡತಕ್ಕುವುಗಳಾಗಿ ವಾಯುವಿನ ಅಧೀನವಾಗಿರುವುವು. ॥೮-೯॥

ಏವಂ ಜ್ಯೋತಿರ್ಗಣಾಸ್ಸರ್ವೇ ಪ್ರಕೃತೇಃ ಪುರುಷಸ್ಯ ಚ ।
ಸಂಯೋಗಾನುಗೃಹೀತಾಸ್ತೇ ಭೂಮೌ ನ ನಿಪತಂತಿ ಚ ॥೧೦॥

ಜ್ಯೋತಿಶ್ಚಕ್ರಂ ಕೇಚಿದೇತಚ್ಛಿಶುಮಾರಸ್ವರೂಪಕಂ ।
ಸೋಪಯೋಗಂ ಭಗವತೋ ಯೋಗಧಾರಣ ಕರ್ಮಣಿ ॥೧೧॥

ಯಸ್ಯಾವಾರ್ಕ್ ಶಿರಸಃ ಕುಂಡಲೀಭೂತವಪುಷೋ ಮುನೇ ।
ಪುಚ್ಛಾಗ್ರೇ ಕಲ್ಪಿತೋ ಯೋಽಯಂ ಧ್ರುವಉತ್ತಾನಪಾದಜಃ ॥೧೨॥

ಲಾಂಗೂಲೇಽಸ್ಯ ಚ ಸಂಪ್ರೋಕ್ತಃ ಪ್ರಜಾಪತಿರಕಲ್ಮಷಃ ।
ಅಗ್ನಿರಿಂದ್ರಶ್ಚ ಧರ್ಮಶ್ಚ ತಿಷ್ಠಂತೇ ಸುರಪೂಜಿತಾಃ ॥೧೩॥
ಧಾತಾ ವಿಧಾತಾ ಪುಚ್ಛಾಂತೇ ಕಟ್ಯಾಂ ಸಪ್ತರ್ಷಯಸ್ತತಃ ।

---

ಪ್ರಕೃತಿಪುರುಷರ ಸಂಯೋಗಾನುಗ್ರಹದಿಂದ ಎಂದರೆ ಮಾಯಾಶಬಳ ಬ್ರಹ್ಮ ರೂಪಿಣಿಯಾದ ದೇವಿಯ ಅನುಗ್ರಹದಿಂದ ಈ ಜ್ಯೋತಿಶ್ಚಕ್ರದಲ್ಲಿರುವ ಸಮಸ್ತ ಗ್ರಹಗಳೂ ಭೂಮಿಗೆ ಬೀಳದೆ ತಮ್ಮ ತಮ್ಮ ದಾರಿಯಲ್ಲಿ ಸುತ್ತುತ್ತಿರುವುವು. ॥೧೦॥

ಕೆಲವರು ಈ ಜ್ಯೋತಿಶ್ಚಕ್ರವನ್ನು ಶಿಶುಮಾರಚಕ್ರಸ್ವರೂಪ ಎಂದರೆ ಯೋಗ ಶಾಸ್ತ್ರದಲ್ಲಿ ಹೇಳುವಂತೆ ಮನುಷ್ಯನ ಶರೀರವೇ ಜ್ಯೋತಿಶ್ಚಕ್ರವೆಂದು ಹೇಳುವರು. ಹಾಗೆ ಹೇಳುವುದು ಯೋಗಾಭ್ಯಾಸಕ್ಕೆ ಸಾಧಕವಾದುದು. ಮನುಷ್ಯನ ಶರೀರವು ಕ್ಲಪ್ತವಾದ ಅಳತೆಯದು. ಮಾಯಾಶಬಲ ಬ್ರಹ್ಮರೂಪಿಣಿಯಾದ ದೇವಿಯ ಶರೀರ ವಾದರೋ ವ್ಯಾಪಕವಾದುದು. ಆದುದರಿಂದ ದೇವಿಯೇ ಈ ಜ್ಯೋತಿಶ್ಚಕ್ರಕ್ಕೆ ಆಧಾರ ವೆಂಬುದು ಸರಿಯಾದುದು. ಆದರೂ ಯೋಗಾಭ್ಯಾಸಿಗಳಿಗೆ ಉಪಯೋಗವಾದ ಶಿಶು ಮಾರಚಕ್ರಸ್ವರೂಪವು ಮುಂದಿನ ವಿವರಣೆಯಲ್ಲಿರುವುದು. ॥೧೧॥

ಯೋಗಿಯ ಶರೀರದಲ್ಲಿರುವ ಸುಷುಮ್ನಾ ನಾಡಿಯಲ್ಲಿ ಕೆಳಗಡೆಗೆ ತಲೆಯನ್ನು ಮಾಡಿಕೊಂಡಿರುವ ಕುಂಡಲಿನೀಶಕ್ತಿಯ ಬಾಲದ ಭಾಗದಲ್ಲಿ ಧ್ರುವನಕ್ಷತ್ರವಿರುವು ದೆಂದು ಕಲ್ಪಿಸಿರುವರು. ॥೧೨॥

ಆ ಕುಂಡಲಿನಿಯ ಬಾಲದ ತುದಿಯ ಕೆಳಭಾಗದಲ್ಲಿ ಬ್ರಹ್ಮನೂ, ಅಗ್ನಿ, ಇಂದ್ರ, ಧರ್ಮ ಇವರುಗಳೂ ಇರುವರು. ಆ ಕಡೆಯ ಕೆಳಭಾಗದಲ್ಲಿ ಧಾತ, ವಿಧಾತ ಎಂಬ ದೇವತೆಗಳೂ, ಸೊಂಟದಲ್ಲಿ ಸಪ್ತರ್ಷಿಗಳೂ ಇರುವರು. ॥೧೩॥

ದಕ್ಷಿಣಾವರ್ತಭೋಗೇನ ಕುಂಡಲಾಕಾರಮಿಾಯುಷಃ ॥೧೪॥

ಉತ್ತರಾಯಣಭಾಗೀಹ ದಕ್ಷಪಾರ್ಶ್ವೇಽರ್ಪಿತಾನಿ ಚ ।
ದಕ್ಷಿಣಾಯನಭಾಗೀಹ ಸವ್ಯಪಾರ್ಶ್ವೇಽರ್ಪಿತಾನಿ ಚ ॥೧೫॥

ಕುಂಡಲಾಭೋಗವೇಶಸ್ಯ ಪಾರ್ಶ್ವಯೋರುಭಯೋರಪಿ ।
ಸಮಸಂಖ್ಯಾಕಶ್ಯಾವಯವಾ ಭವಂತಿ ಕಜನಂದನ ॥೧೬॥

ಅಜವೀಥೀ ಪೃಷ್ಠಭಾಗೇ ಆಕಾಶಸರಿದೌದರೇ ।
ಪುನರ್ವಸೂಶ್ಚ ಪುಷ್ಯಶ್ಚ ಶ್ರೋಣ್ಯೋ ದಕ್ಷಿಣವಾಮಯೋಃ ॥೧೭॥

ಆದ್ರಾಶ್ಲೇಷೇ ಪಶ್ಚಿಮಯೋಃ ಪಾದಯೋಃ ದಕ್ಷವಾಮಯೋಃ ।
ಅಭಿಜಿಚ್ಚೋತ್ತರಾಷಾಢಾ ನಾಸಯೋರ್ದಕ್ಷವಾಮಯೋಃ ॥೧೮॥

ಯಥಾಸಂಖ್ಯಂ ಚ ದೇವರ್ಷೇ ಶ್ರುತಿಶ್ಚ ಜಲಭಂ ತಥಾ ।
ಕಲ್ಪಿತೇ ಕಲ್ಪನಾವಿದ್ಭಿಃ ನೇತ್ರಯೋರ್ದಕ್ಷವಾಮಯೋಃ ॥೧೯॥

---

ಕುಂಡಲಾಕಾರದ ಆ ಕುಂಡಲಿನೀಶಕ್ತಿಯ ಶರೀರದ ಬಲಭಾಗದ ಪಕ್ಕದಲ್ಲಿ ಉತ್ತರಾಯಣ ನಕ್ಷತ್ರಗಳಿಂದ ಅಭಿಜಿತು ಮೊದಲಾಗಿ ಪುನರ್ವಸು ಕೊನೆಯ ವರೆಗೆ ಹದಿನಾಲ್ಕು ನಕ್ಷತ್ರಗಳೂ. ಎಡಭಾಗದಲ್ಲಿ ಪುಷ್ಯಾದಿಯಾಗಿ ಉತ್ತರಾಷಾಢಾಂತವಾಗಿ ಹದಿನಾಲ್ಕು ನಕ್ಷತ್ರಗಳೂ ಇರುವುವು. ॥೧೪-೧೫॥

ಓ ಬ್ರಹ್ಮಪುತ್ರನಾದ ನಾರದನೇ, ಅಜವೀಥಿಯ ಹಿಂಭಾಗದಲ್ಲಿ ಕುಂಡಲಿನೀ ಶಕ್ತಿಯ ಹೊಟ್ಟೆಯ ಪ್ರದೇಶದಲ್ಲಿ ಆಕಾಶಗಂಗೆ ಇರುವುದು. ಸೊಂಟದ ಬಲ ಮತ್ತು ಎಡಭಾಗದಲ್ಲಿ ಪುನರ್ವಸು ಪುಷ್ಯ ನಕ್ಷತ್ರಗಳಿರುವುವು. ॥೧೬-೧೭॥

ಕ್ರಮವಾಗಿ ಬಲ ಎಡಭಾಗಗಳ ಪಾದಗಳಲ್ಲಿ ಆದ್ರಾ ಆಶ್ಲೇಷಾ ನಕ್ಷತ್ರಗಳೂ, ಮೂಗಿನಲ್ಲಿ ಅಭಿಜಿತು ಉತ್ತರಾಷಾಢಾನಕ್ಷತ್ರಗಳೂ ಇರುವುವು. ॥೧೮॥

ಹಾಗೆಯೇ ಕ್ರಮವಾಗಿ ಬಲ ಎಡ ಕಣ್ಣುಗಳಲ್ಲಿ ಶ್ರವಣ ಪೂರ್ವಾಷಾಢಾ ನಕ್ಷತ್ರಗಳಿವೆ ಎಂದು ಕಲ್ಪಿಸಿರುವರು. ॥೧೯॥

ಧನಿಷ್ಠಾ ಚೈವ ಮೂಲಂ ಚ ಕರ್ಣಯೋರ್ದಕ್ಷವಾಮಯೋಃ ।
ಮಘಾದೀನ್ಯಷ್ಟಭಾನೀಹ ದಕ್ಷಿಣಾಯನಗಾನಿ ಚ ॥೨೦॥

ಯುಂಜೀತವಾಮಪಾರ್ಶ್ವೀಯ ವಂಕ್ರಿಷು ಕ್ರಮತೋ ಮುನೇ ।
ತಥೈವ ಮೃಗಶೀರ್ಷಾದೀನ್ಯುದಗ್ಭಾನಿ ಚ ಯಾನಿ ಹಿ ॥೨೧॥

ದಕ್ಷಪಾರ್ಶ್ವೀಯವಂಕ್ರೀಕೇಷು ಪ್ರಾತಿಲೋಮ್ಯೇನ ಯೋಜಯೇತ್ ।
ಶತತಾರಂ ತಥಾ ಜ್ಯೇಷ್ಠಾ ಸ್ಕಂಧಯೋರ್ದಕ್ಷವಾಮಯೋಃ ॥೨೨॥

ಅಗಸ್ತಿಶ್ಚೋತ್ತರಹನಾವಧರಾಯಾಂ ಹನೌ ಯಮಃ ।
ಮುಖೇಷ್ವಂಗಾರಕಃ ಪ್ರೋಕ್ತೋ ಮಂದಃ ಪ್ರೋಕ್ತಃ ಉಪಸ್ಥಕೇ ॥೨೩॥

ಬೃಹಸ್ಪತಿಶ್ಚ ಕಕುದಿ ವಕ್ಷಸ್ಯರ್ಕೋ ಗ್ರಹಾಧಿಪಃ ।
ನಾರಾಯಣಶ್ಚ ಹೃದಯೇ ಚಂದ್ರೋ ಮನಸಿ ತಿಷ್ಠತಿ ॥೨೪॥

ಸ್ತನಯೋರಶ್ವಿನೌ ನಾಭ್ಯಾಮುಶನಾಃ ಪರಿಕೀರ್ತಿತಃ ।
ಬುಧಃ ಪ್ರಾಣಾಪಾನಯೋಶ್ಚ ಗಲೇ ರಾಹುಶ್ಚ ಕೇತವಃ ॥೨೫॥

---

ಕಿವಿಗಳಲ್ಲಿ ಧನಿಷ್ಠಾ ಮೂಲನಕ್ಷತ್ರಗಳೂ, ಮಘಾ ಮೊದಲಾದ ದಕ್ಷಿಣಾಯನದ ಎಂಟು ನಕ್ಷತ್ರಗಳು ಎಡೆಗೂಡಿನ ಬಲಭಾಗದ ಮೂಳೆಗಳಲ್ಲಿಯೂ, ಹಾಗೆಯೇ ಉತ್ತರಾಯಣದ ಮೃಗಶೀರ್ಷಾದಿ ಎಂಟು ನಕ್ಷತ್ರಗಳು ಎಡಭಾಗದ ಮೂಳೆಗಳ ಸ್ಥಾನಗಳಲ್ಲಿಯೂ ಇರುವಂತೆ ದೂರಗಳ ಸಂಬಂಧವನ್ನು ತಿಳಿಯಬೇಕು. ॥೨೦-೨೧॥

ಹೆಗಲುಗಳಲ್ಲಿ ಶತತಾರ ಮತ್ತು ಜ್ಯೇಷ್ಠಾನಕ್ಷತ್ರಗಳೂ ಮೇಲಿನ ದವಡೆಯಲ್ಲಿ ಅಗಸ್ತ್ಯನಕ್ಷತ್ರವೂ ಕೆಳದವಡೆಯಲ್ಲಿ ಭರಣೀನಕ್ಷತ್ರವೂ ಇರುವುವು. ॥೨೨॥

ಬಾಯಲ್ಲಿ ಅಂಗಾರಕನೂ, ಜನನೇಂದ್ರಿಯದಲ್ಲಿ ಶನಿಯೂ, ಬೃಹಸ್ಪತಿಯು ಹೆಗಲಮೇಲೆಯೂ, ಗ್ರಹಾಧಿಪತಿಯಾದ ಸೂರ್ಯನು ಹೃದಯದಲ್ಲಿಯೂ, ನಾರಾಯಣನು ಬುದ್ಧಿಯಲ್ಲಿಯೂ, ಚಂದ್ರನು ಮನಸ್ಸಿನಲ್ಲಿಯೂ, ಇರುವರು. ॥೨೩-೨೪॥

ಸ್ತನಗಳಲ್ಲಿ ಅಶ್ವಿನೀದೇವತೆಗಳೂ ಹೊಕ್ಕುಳಿನಲ್ಲಿ ಶುಕ್ರನೂ ಪ್ರಾಣಾಪಾನವಾಯುಗಳಲ್ಲಿ ಬುಧನೂ ಕಂಠದಲ್ಲಿ ರಾಹುಕೇತುಗಳೂ ಸಮಸ್ತ ಅವಯವದಲ್ಲಿಯೂ

ಸರ್ವಾಂಗೇಷು ತಥಾ ರೋಮಕೂಪೇ ತಾರಾಗಣಾಃ ಸ್ಮೃತಾಃ ।
ಏತದ್ಭಗವತೋ ವಿಷ್ಣೋಃ ಸರ್ವದೇವಮಯಂ ವಪುಃ ॥೨೬॥

ಸಂಧ್ಯಾಯಾಂ ಪ್ರತ್ಯಹಂ ಧ್ಯಾಯೇತ್ಪ್ರಯತೋ ವಾಗ್ಯತೋ ಮುನಿಃ ।
ನಿರೀಕ್ಷಮಾಣಶ್ಚೋತ್ತಿಷ್ಠೇನ್ಮಂತ್ರೇಣಾನೇನ ಧೀಧರಃ ॥೨೭॥

ನಮೋ ಜ್ಯೋತಿರ್ಲೋಕಾಯ ಕಾಲಾಯಾಽನಿಮಿಷಾಂಪತಯೇ
ಮಹಾಪುರುಷಾಯಾಽಭಿಧೀಮಹಿ ॥೨೮॥

ಗ್ರಹರ್ಕ್ಷತಾರಾಮಯಮಾದಿದೈವಿಕಂ ।
ಪಾಪಾಪಹಂ ಮಂತ್ರಕೃತಾಂ ತ್ರಿಕಾಲಂ ॥
ನಮಸ್ಯತಃ ಸ್ಮರತೋ ವಾ ತ್ರಿಕಾಲಂ ।
ನಶ್ಯೇತ ತತ್ಕಾಲಜಮಾಶು ಪಾಪಂ ॥೨೯॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಅಷ್ಟಮಸ್ಕಂಧೇ ಸಪ್ತದಶೋಽಧ್ಯಾಯ.

---

ಇರುವ ರೋಮಕೂಪಗಳಲ್ಲಿ ನಕ್ಷತ್ರಗಳೂ ಇರುವುವು. ಇದು ಸಮಸ್ತ ದೇವತೆಗಳಿಂದ ಕೂಡಿದ ಮಹಾತ್ಮನಾದ ವಿಷ್ಣುವಿನ ಶರೀರವು. ॥೨೫-೨೬॥

ಯೋಗಾಭ್ಯಾಸಿಯು ಇದುವರೆಗೆ ವರ್ಣಿಸಿರುವ ಜ್ಯೋತಿಶ್ಚಕ್ರವನ್ನು ಶರೀರದಲ್ಲಿಯೂ, ಸುಷುಮ್ನಾನಾಡಿಯಲ್ಲಿರುವ ಕುಂಡಲಿನೀಶಕ್ತಿಯನ್ನು ವಿರಾಟ್‌ಸ್ವರೂಪವಾದ ಪ್ರಪಂಚದಲ್ಲಿಯೂ, ಪ್ರತಿದಿನವೂ ಸಂಧ್ಯಾಕಾಲದಲ್ಲಿ ಮೌನದಿಂದ ಪ್ರಯತ್ನಪೂರ್ವಕ ಧ್ಯಾನಮಾಡಬೇಕು. ಜ್ಯೋತಿಶ್ಚಕ್ರವು ಕಣ್ಣೆದುರಿಗೆ ಸ್ಪಷ್ಟವಾಗಿ ಕಂಡಂತಾದಾಗ ಮುಂದೆ ಹೇಳುವ ಮಂತ್ರವನ್ನು ಹೇಳುತ್ತ ಎದ್ದುನಿಲ್ಲಬೇಕು. ಆ ಮಂತ್ರವಾವುದೆಂದರೆ, ॥೨೭॥

ಕಾಲಸ್ವರೂಪನೂ ದೇವತೆಗಳಿಗೆಲ್ಲರಿಗೂ ಒಡೆಯನೂ ಮಹಾಪುರುಷನೂ ತೇಜೋಲೋಕದ ಸ್ವರೂಪನೂ ಆದ ಪರಮಾತ್ಮನಿಗೆ ನಮಸ್ಕಾರವು. ಪ್ರಕಾಶಸ್ವರೂಪನಾದ ನಿನ್ನನ್ನು ಧ್ಯಾನಮಾಡುತ್ತೇನೆ. ಎಂಬುದು ಆ ಮಂತ್ರಾರ್ಥವು. ॥೨೮॥

ಗ್ರಹನಕ್ಷತ್ರಗಳ ಸ್ವರೂಪವೂ ಆದಿದೈವತಾಸ್ವರೂಪವೂ ಆದ ಜ್ಯೋತಿಶ್ಚಕ್ರವು ಮೇಲೆ ಹೇಳಿದ ಮಂತ್ರವನ್ನು ಮೂರು ಕಾಲಗಳಲ್ಲಿಯೂ ಜಪಿಸತಕ್ಕವರಿಗೆ ಪಾಪ

ವನ್ನು ನಾಶಮಾಡತಕ್ಕುದಾಗಿರುವುದು. ಮತ್ತು ಮೂರು ಕಾಲಗಳಲ್ಲಿ ಯಾವ ಸಮಯದಲ್ಲಾದರೂ ನಮಸ್ಕಾರ ಮಾಡತಕ್ಕವರಿಗೂ ಸ್ಮರಣೆಮಾಡತಕ್ಕವರಿಗೂ ಆಯಾ ಕಾಲಗಳಲ್ಲಿಯೇ ಹುಟ್ಟಿದ ಪಾಪಗಳನ್ನು ಜಾಗ್ರತೆಯಾಗಿ ನಾಶಮಾಡುವುದು. ||೨೯||

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಎಂಟನೆಯ ಸ್ಕಂಧದಲ್ಲಿ
ಹದಿನೇಳನೆಯ ಅಧ್ಯಾಯವು ಮುಗಿದುದು.

|| ಶ್ರೀ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಅಷ್ಟಮಸ್ಕಂಧೇ

### || ಅಷ್ಟಾದಶೋಽಧ್ಯಾಯಃ ||

### ಹದಿನೆಂಟನೆಯ ಅಧ್ಯಾಯವು

|| ಶ್ರೀನಾರಾಯಣ ಉವಾಚ ||

**ಅಧಸ್ತಾತ್ಸವಿತುಃ ಪ್ರೋಕ್ತಮಯುತಂ ರಾಹುಮಂಡಲಂ ।**
**ನಕ್ಷತ್ರವಚ್ಚರತಿ ಚ ಸೈಂಹಿಕೇಯೋಽತದರ್ಹಣಃ ॥೧॥**

**ಸೂರ್ಯಾಚಂದ್ರಮಸೋರೇವ ಮರ್ದನಃ ಸಿಂಹಿಕಾಸುತಃ ।**
**ಅಮರತ್ವಂ ಚ ಖೇಟತ್ವಂ ಲೇಭೇ ಯೋ ವಿಷ್ಣ್ವನುಗ್ರಹಾತ್ ॥೨॥**

**ಯದಧಸ್ತರಣೇರ್ಬಿಂಬಂ ತಪತೋ ಯೋಜನಾಯುತಂ ।**
**ತಚ್ಛಾವಕೋಽಸುರೋಜ್ಞೇಯೋಽಪ್ಯರ್ಕಸಾಹಸ್ರವಿಸ್ತರಂ ॥೩॥**

---

ನಾರಾಯಣನು ಹೇಳಿದನು—ಹಿಂದಿನ ಅಧ್ಯಾಯಗಳಲ್ಲಿ ಸೂರ್ಯಮಂಡಲದಿಂದ ಧ್ರುವಮಂಡಲದಪರ್ಯಂತವಾಗಿ ಗ್ರಹಗಳ ಸನ್ನಿವೇಶವನ್ನು ವಿವರಿಸಿ ಇಲ್ಲಿಂದ ಮುಂದೆ ಸೂರ್ಯನ ಮತ್ತೊಂದು ಭಾಗವು ಅಧೋಭಾಗವೆಂದು ಕಲ್ಪಿಸಿ ಆ ಸೂರ್ಯಮಂಡಲದಿಂದ ಹತ್ತುಸಾವಿರ ಯೋಜನದೂರದಲ್ಲಿ ರಾಹುಮಂಡಲವಿರುವುದು. ಎಂದು ವರ್ಣಿಸಿದೆ. ಸಿಂಹಿಕಾ ಎಂಬ ರಾಕ್ಷಸಿಯ ಮಗನಾದ ರಾಹುವು ತನಗೆ ನಕ್ಷತ್ರವಾಗತಕ್ಕ ಯೋಗ್ಯತೆಯಿಲ್ಲದಿದ್ದರೂ ನಕ್ಷತ್ರದಂತೆ ಸಂಚರಿಸುವನು. ||೧||

ಸಿಂಹಿಕಾಪುತ್ರನಾದ ರಾಹುವು ಸೂರ್ಯಚಂದ್ರರನ್ನು ಮಾತ್ರ ತನ್ನ ನೆರಳಿನಿಂದ ಮುಚ್ಚುವನು. ಆ ರಾಹುವು ವಿಷ್ಣುವಿನ ಅನುಗ್ರಹದಿಂದ ದೇವತ್ವವನ್ನೂ ಗ್ರಹತ್ವವನ್ನೂ ಪಡೆದನು. ||೨||

ಹತ್ತುಸಾವಿರ ಯೋಜನದವರೆಗೂ ಕಿರಣದ ತಾಪವನ್ನುಂಟುಮಾಡುವ ಸೂರ್ಯಬಿಂಬದ ಕೆಳಭಾಗದಲ್ಲಿ ರಾಕ್ಷಸನಾದ ರಾಹುಗ್ರಹವು ಹನ್ನೆರಡುಸಾವಿರ

ತ್ರಯೋದಶಸಹಸ್ರಂ ತು ಸೋಮಸ್ಯಾಚ್ಛಾದಕೋ ಗ್ರಹಃ ।
ಯಃ ಪರ್ವಸಮಯೇ ವೈರಾನುಬಂಧೀ ಛಾದಕೋಽಭವತ್ ॥೪॥

ಸೂರ್ಯಾಚಂದ್ರಮಸೋರ್ದೂರಾದ್ಧುವೇಚ್ಛಾದನಕಾರಕಃ ।
ತನ್ನಿಶಮ್ಯೋಭಯತ್ರಾಪಿ ವಿಷ್ಣುನಾ ಪ್ರೇರಿತಂ ಸ್ವಕಂ ॥೫॥

ಚಕ್ರಂ ಸುದರ್ಶನಂ ನಾಮ ಜ್ವಾಲಾಮಾಲಾವಿಭೀಷಣಂ ।
ತತ್ತೇಜಸಾ ದುಸ್ಸಹೇನ ಸಮಂತಾತ್ಪರಿವಾರಿತಂ ॥೬॥

ಮುಹೂರ್ತೋಽದ್ವಿಜಮಾನಸ್ತು ದೂರಾಚ್ಚಕಿತಮಾನಸಃ ।
ಆರಾನ್ನಿವರ್ತತೇ ಸೋಽಯಮುಪರಾಗ ಇತೀವ ಹ ॥೭॥

---

ಯೋಜನ ವಿಸ್ತಾರವಾದ ಚಂದ್ರಮಂಡಲವನ್ನೂ ಸೂರ್ಯಬಿಂಬವನ್ನೂ ಮರೆ ಮಾಡುವುದು. ॥೩॥

ಸೂರ್ಯಚಂದ್ರರನ್ನು ಮುಚ್ಚುವ ಗ್ರಹವಾದ ರಾಹುವು ಹದಿಮೂರುಸಾವಿರ ಯೋಜನ ವಿಸ್ತಾರವಿರುವುದು. ಅಮಾವಾಸ್ಯಾ ಪೂರ್ಣಿಮಾ ರೂಪವಾದ ಪರ್ವಕಾಲ ಗಳಲ್ಲಿ ತನಗೂ ಸೂರ್ಯಚಂದ್ರರಿಗೂ ಇರುವ ವೈರದಿಂದ ರಾಹುವು ಸೂರ್ಯ ಚಂದ್ರರನ್ನು ತನ್ನ ನೆರಳಿನಿಂದ ಮುಚ್ಚುವನು. ॥೪॥

ಸೂರ್ಯಚಂದ್ರರನ್ನು ಮರೆಮಾಡುವ ರಾಹುಗ್ರಹವು ಸೂರ್ಯಚಂದ್ರ ಮಂಡಲಗಳಿಗೆ ದೂರದಲ್ಲಿರುವುದು. ಕಾರಣವೇನೆಂದರೆ ಅಮೃತಪಾನಮಾಡುವಾಗ ಸೂರ್ಯಚಂದ್ರರ ನಡುವೆ ಪ್ರವೇಶಮಾಡಿದ ಸಿಂಹಿಕಾಪುತ್ರನನ್ನು ಸೂರ್ಯಚಂದ್ರರು ವಿಷ್ಣುವಿಗೆ ತಿಳಿಸಿದುದರಿಂದ ವೈರಕಾರಣವುಂಟಾಯಿತು. ಸೂರ್ಯಚಂದ್ರರಿಬ್ಬರ ಮಾತನ್ನು ಕೇಳಿದ ವಿಷ್ಣುವು ತನ್ನ ಸುದರ್ಶನವೆಂಬ ಉರಿಯನ್ನುಗುಳುವ ಚಕ್ರಾ ಯುಧವನ್ನು ಪ್ರಯೋಗಿಸಲು ಸುತ್ತಲೂ ಸುತ್ತಿಕೊಂಡ ಅದರ ತೇಜಸ್ಸನ್ನು ಸಹಿಸ ಲಾರದೆ ಮುಹೂರ್ತಕಾಲ ಪರ್ಯಂತ ಉದ್ವೇಗಹೊಂದಿ ಭಯದಿಂದ ರಾಹುಗ್ರಹವು ದೂರಕ್ಕೆ ಹೊರಟು ಹೋಗುವುದು. ಅದನ್ನೇ ಗ್ರಹಣವೆಂದು ಲೋಕದ ಜನರು ಹೇಳುವರು. ಎಲೈ ನಾರದನೇ, ಗ್ರಹಣಕಾರಣವನ್ನು ಹೀಗೆ ತಿಳಿದುಕೊ. ॥೫-೬-೭॥

ಉಚ್ಯತೇ ಲೋಕಮಧ್ಯೇ ತು ದೇವರ್ಷೇ ಅವಬುಧ್ಯತಾಂ ।
ತತೋಽಧಸ್ತಾತ್ಸಮಾಖ್ಯಾತಾ ಲೋಕಾಃ ಪರಮಪಾವನಾಃ ॥೮॥

ಸಿದ್ಧಾನಾಂ ಚಾರಣಾನಾಂ ಚ ವಿದ್ಯಾಧ್ರಾಣಾಂ ಚ ಸತ್ತಮಃ ।
ಯೋಜನಾಯುತವಿಖ್ಯಾತಾ ಲೋಕಾಃ ಪುಣ್ಯನಿಷೇವಿತಾಃ ॥೯॥

ತತೋಽಪ್ಯಧಸ್ತಾದ್ದೇವರ್ಷೇ ಯಕ್ಷಾಣಾಂ ಚ ಸರಕ್ಷಸಾಂ ।
ಪಿಶಾಚಪ್ರೇತಭೂತಾನಾಂ ವಿಹಾರಾಜಿರಮುತ್ತಮಂ ॥೧೦॥

ಅಂತರಿಕ್ಷಂ ಚ ತತ್ಪ್ರೋಕ್ತಂ ಯಾವದ್ವಾಯುಃ ಪ್ರವಾತಿ ಹಿ ।
ಯಾವನ್ಮೇಘಾಸ್ತತೋದ್ಯಂತಿ ತತ್ಪ್ರೋಕ್ತಂ ಜ್ಞಾನಕೋವಿದೈಃ ॥೧೧॥

ತತೋಽಧಸ್ತಾದ್ಯೋಜನಾನಾಂ ಶತಂ ಯಾವದ್ದ್ವಿಜೋತ್ತಮ ।
ಪೃಥಿವೀ ಪರಿಸಂಖ್ಯಾತಾ ಸುಪರ್ಣಶ್ಯೇನಸಾರಸಾಃ ॥೧೨॥

ಹಂಸಾದಯಃ ಪ್ರೋತ್ಪತಂತಿ ಪಾರ್ಥಿವಾಃ ಪೃಥಿವೀ ಭವಾಃ ।
ಭೂಸನ್ನಿವೇಶಾವಸ್ಥಾನಂ ಯಥಾವದನುವರ್ಣಿತಂ ॥೧೩॥

---

ಆ ರಾಹುಮಂಡಲದಿಂದ ಕೆಳಗಡೆಗೆ ಹತ್ತುಸಾವಿರ ಯೋಜನದೂರದಲ್ಲಿ ಅತ್ಯಂತ ಪರಿಶುದ್ಧವೂ ಪುಣ್ಯವಂತರ ವಾಸಕ್ಕೆ ಯೋಗ್ಯವೂ ಆದ ಸಿದ್ಧ, ಚಾರಣ ವಿದ್ಯಾಧರರ ಲೋಕಗಳಿರುವುವು. ॥೮-೯॥

ಆ ಲೋಕಗಳಿಗಿಂತಲೂ ಕೆಳಗೆ ಯಕ್ಷರೂ, ರಾಕ್ಷಸರೂ, ಪಿಶಾಚಿಗಳೂ, ಪ್ರೇತಗಳೂ, ಭೂತಗಳೂ ಎಂಬ ವಾಯುರೂಪವಾದ ಪ್ರಾಣಿಗಳು ಸಂಚಾರಮಾಡುವ ಮತ್ತು ವಾಸಮಾಡುವ ಸ್ಥಳವಿರುವುದು. ಅದನ್ನೇ ಅಂತರಿಕ್ಷವೆಂದು ಕರೆಯುವರು. ಅಲ್ಲಿ ಗಾಳಿಯು ಬಲವಾಗಿ ಬೀಸುವುದು. ಮೇಘಗಳು ವಿಶೇಷವಾಗಿ ಉತ್ಪತ್ತಿಯಾಗುವುವು. ಶ್ರೇಷ್ಠರಾದ ಜ್ಞಾನಿಗಳು ಈ ವಿಚಾರವನ್ನು ಹೇಳಿರುವರು. ॥೧೦-೧೧॥

ಅಂತರಿಕ್ಷಲೋಕದಿಂದ ಕೆಳಗೆ ನೂರುಯೋಜನ ದೂರದಲ್ಲಿ ಭೂಮಿಯು ಇರುವುದು. ಭೂಮಿಯಲ್ಲಿ ಹುಟ್ಟಿದ ಗರುಡ, ಗಿಡುಗ, ಸಾರಸ, ಹಂಸ ಮುಂತಾದ ಪಕ್ಷಿಗಳು ಎಲ್ಲಿಯವರೆಗೆ ಸಂಚರಿಸುವುವೋ ಅಲ್ಲಿಯವರೆಗೂ ಭೂಲೋಕವಿರುವುದು. ಭೂಮಿಯು ಇರುವ ಸ್ಥಳ ವಿಸ್ತಾರ ಇವುಗಳನ್ನು ಹಿಂದೆಯೇ ವರ್ಣಿಸಿರುವುದು. ॥೧೨-೧೩॥

ಅಧಸ್ತಾದವನೇಃ ಸಪ್ತ ದೇವರ್ಷೇ ವಿವರಾಃ ಸ್ಮೃತಾಃ ।
ಏಕೈಕಶೋ ಯೋಜನಾನಾಮಾಯಾಮೋಚ್ಛ್ರಾಯತಃ ಪುನಃ॥೧೪॥

ಅಯುತಾಂತರವಿಖ್ಯಾತಾಃ ಸರ್ವರ್ತು ಸುಖದಾಯಕಾಃ ।
ಅತಲಂ ಪ್ರಥಮಂ ಪ್ರೋಕ್ತಂ ದ್ವಿತೀಯಂ ವಿತಲಂ ತಥಾ ॥೧೫॥

ತೃತೀಯಂ ಸುತಲಂ ಪ್ರೋಕ್ತಂ ಚತುರ್ಥಂ ನೈ ತಲಾತಲಂ ।
ಮಹಾತಲಂ ಪಂಚಮಂ ಚ ಷಷ್ಠಂ ಪ್ರೋಕ್ತಂ ರಸಾತಲಂ ॥೧೬॥

ಸಪ್ತಮಂ ವಿಪ್ರ ಪಾತಾಲಂ ಸಪ್ತೈತೇ ವಿವರಾಃ ಸ್ಮೃತಾಃ ।
ಏತೇಷು ಬಿಲಸ್ವರ್ಗೇಷು ದಿವೋಽಪ್ಯಧಿಕಮೇವ ಚ ॥೧೭॥

ಕಾಮಭೋಗೈಶ್ವರ್ಯಸುಖಸಮೃದ್ಧಭುವನೇಷು ಚ ।
ನಿತ್ಯೋದ್ಯಾನವಿಹಾರೇಷು ಸುಖಾಸ್ವಾದಃ ಪ್ರವರ್ತತೇ ॥೧೮॥

ದೈತ್ಯಾಶ್ಚ ಕಾದ್ರವೇಯಾಶ್ಚ ದಾನವಾ ಬಲಶಾಲಿನಃ ।
ನಿತ್ಯಂ ಪ್ರಮುದಿತಾ ರಕ್ತಾಃ ಕಲತ್ರಾಪತ್ಯಬಂಧುಭಿಃ ॥೧೯॥

---

ದೇವರ್ಷಿಯಾದ ನಾರದನೇ, ಭೂಲೋಕದಿಂದ ಕೆಳಭಾಗಕ್ಕೆ ಏಳು ಬಿಲಗಳಿರುವುವು. ಒಂದೊಂದಕ್ಕೂ ಹತ್ತುಸಾವಿರ ಯೋಜನದ ದೂರವೂ, ಎತ್ತರವೂ, ಅಷ್ಟೇ ವಿಸ್ತಾರವೂ ಇರುವುದು. ಆ ಏಳು ಲೋಕಗಳೂ ಸಮಸ್ತ ಋತುಗಳಲ್ಲಿಯೂ ಸುಖಕರವಾಗಿರುವುವು. ॥೧೪॥

ಅತಲ, ವಿತಲ, ಸುತಲ, ತಲಾತಲ, ಮಹಾತಲ, ರಸಾತಲ, ಪಾತಾಲ, ಎಂಬಿವೇ ಏಳು ಅಧೋಲೋಕಗಳು ಅಥವಾ ಬಿಲಗಳು. ॥೧೫-೧೬॥

ಇಷ್ಟವಾದ ಸುಖಾನುಭವವೂ ಸಂಪತ್ತಿನ ಸಮೃದ್ಧಿಯೂ ಉಳ್ಳ ಈ ಬಿಲಸ್ವರ್ಗಗಳಲ್ಲಿ ಮೇಲಿನ ಸ್ವರ್ಗಲೋಕಕ್ಕಿಂತಲೂ ಹೆಚ್ಚಾಗಿ ಉದ್ಯಾನವಿಹಾರವೇ ಮುಂತಾದ ಸುಖಾನುಭವಗಳುಂಟಾಗುವುವು. ॥೧೭-೧೮॥

ಆ ಬಿಲಸ್ವರ್ಗಗಳಲ್ಲಿ ದಿತಿಯ ಮಕ್ಕಳಾದ ದೈತ್ಯರೂ ಕದ್ರುವಿನ ಮಕ್ಕಳಾದ ಸರ್ಪಗಳೂ ದನುದೇವಿಯ ಮಕ್ಕಳಾದ ದಾನವರೂ ಬಲದಿಂದ ಕೂಡಿದವರಾಗಿ ಯಾವಾಗಲೂ ಸಂತೋಷದಿಂದ ಕೂಡಿ ತಮ್ಮ ಪುತ್ರ, ಮಿತ್ರ, ಕಳತ್ರ, ಬಂಧುಗಳಿಂದಲೂ, ಸೇವಕರಿಂದಲೂ ಕೂಡಿ ಇಂದ್ರಜಾಲವಿದ್ಯೆಯನ್ನು ಬಲ್ಲವರಾಗಿ ಯಾವ

**ಸುಹೃದ್ಭಿರನುಚರಾದ್ಯೈಃ ಸಂಯುತಾಶ್ಚ ಗೃಹೇಶ್ವರಾಃ ।**
**ಈಶ್ವರಾದ ಪ್ರತಿಹತಕಾಮಮಾಯಾವಿನಶ್ಚ ತೇ ॥೨೦॥**

**ನಿವಸಂತಿ ಸದಾ ಹೃಷ್ಟಾಃ ಸರ್ವರ್ತುಸುಖಸಂಯುತಾಃ ।**
**ಮಯೇನ ಮಾಯಾವಿಭುನಾ ಯೇಷು ಯೇಷು ಚ ನಿರ್ಮಿತಾಃ ॥೨೧॥**

**ಪುರಃ ಪ್ರಕಾಮಶೋ ಭಕ್ತ್ಯಾ ಮಣಿಪ್ರವರಶಾಲಿನಃ ।**
**ವಿಚಿತ್ರಭವನಾಟ್ಟಾಲಗೋಪುರಾದ್ಯಾಃ ಸಹಸ್ರಶಃ ॥೨೨॥**

**ಸಭಾಚತ್ವರಚೈತ್ಯಾದಿ ಶೋಭಾಢ್ಯಾಃ ಸುರದುರ್ಲಭಾಃ ।**
**ನಾಗಾಸುರಾಣಾಂ ಮಿಥುನೈಃ ಸಪಾರಾವತಸಾರಿಕೈಃ ॥೨೩॥**

**ಕೀರ್ಣಕೃತ್ರಿಮಭೂಮಿಶ್ಚ ವಿವರೇಶಗೃಹೋತ್ತಮೈಃ ।**
**ಅಲಂಕೃತಾಶ್ಚಕಾಸಂತಿ ಉದ್ಯಾನಾನಿ ಮಹಾಂತಿ ಚ ॥೨೪॥**

**ಮನಃಪ್ರಸನ್ನಕಾರೀಣಿ ಫಲಪುಷ್ಪವಿಶಾಲಿಭಿಃ ।**
**ಲಲನಾನಾಂ ವಿಲಾಸಾರ್ಹಸ್ಥಾನೈಃ ಶೋಭಿತಭಾಂಜಿ ಚ ॥॥೨೫॥**

---

ತಡೆಯೂ ಇಲ್ಲದೆ ತಮ್ಮ ಇಷ್ಟಾರ್ಥಗಳನ್ನನುಭವಿಸುತ್ತ ಯಾವಾಗಲೂ ಸಂತೋಷ ಚಿತ್ತವುಳ್ಳವರಾಗಿ ಸಮಸ್ತ ಋತುಗಳ ಸಂಬಂಧವಾದ ಸುಖಗಳನ್ನೂ ಎಲ್ಲಕಾಲ ಗಳಲ್ಲೂ ಅನುಭವಿಸುತ್ತಿರುವರು. ॥೧೯-೨೦॥

ಪ್ರತಿಯೊಂದು ಬಿಲದಲ್ಲಿಯೂ ಮಾಯಾವಿದ್ಯೆಯನ್ನು ಚೆನ್ನಾಗಿ ಬಲ್ಲ ಮಯನು ಅನೇಕ ರತ್ನಗಳಿಂದ ವಿಚಿತ್ರವಾದ ಮನೆಗಳನ್ನೂ ಉಪ್ಪರಿಗೆಗಳನ್ನೂ ಗೋಪುರಗಳನ್ನೂ ಸಭಾಮಂಟಪಗಳನ್ನೂ ದೇವಾಲಯಗಳನ್ನೂ ಅನೇಕವಾಗಿ ಕಟ್ಟಿರು ವನು. ಇಂತಹ ಕಟ್ಟಡಗಳು ಸುಂದರವಾಗಿ ದೇವತೆಗಳಿಗೂ ದುರ್ಲಭವಾದುವಾಗಿರು ವುವು. ॥೨೧-೨೨॥

ಅಲ್ಲಿ ನಾಗರ ಮತ್ತು ಅಸುರರ ದಂಪತಿಗಳಿಂದಲೂ, ಪಾರಿವಾಳ ಗಿಳಿ ಮುಂತಾದ ಹಕ್ಕಿಗಳಿಂದಲೂ ತುಂಬಿದ ಕೃತ್ರಿಮವಾದ ಭೂಮಿಗಳೂ ಬಿಲಗಳಿಗೆ ರಾಜರಾದವರ ಉತ್ತಮವಾದ ಅರಮನೆಗಳೂ ಮನೋಹರವಾದ ಫಲಪುಷ್ಪಗಳಿಂದ ತುಂಬಿದ ಉದ್ಯಾನವನಗಳೂ ಆ ವನಗಳಲ್ಲಿ ಸ್ತ್ರೀಯರ ಆಟಗಳಿಗೆ ತಕ್ಕ ಸ್ಥಳಗಳೂ ಅಲಂಕಾರವಾಗಿ ಪ್ರಕಾಶಿಸುತ್ತಿರುವುವು. ॥೨೩-೨೪-೨೫॥

ನಾನಾವಿಹಂಗಮವ್ರಾತಸಂಯುಕ್ತಜಲರಾಶಿಭಿಃ ।
ಸ್ವಚ್ಛಾರ್ಣಪೂರಿತಹ್ರದೈಃ ಪಾಠೀನಸಮಲಂಕೃತೈಃ ॥೨೬॥

ಜಲಜಂತುಕ್ಷುಬ್ಧನರನೀರಜಾತೈಃ ಅನೇಕಶಃ ।
ಕುಮುದೋತ್ಪಲಕಲ್ಹಾರನೀಲರಕ್ತೋತ್ಪಲೈಃ ತಥಾ ॥೨೭॥

ತೇಷು ಕೃತನಿಕೇತಾನಾಂ ವಿಹಾರೈಃ ಸಂಕುಲಾನಿ ಚ ।
ಇಂದ್ರಿಯೋತ್ಸವಕಾರ್ಯೈಶ್ಚ ತಥೈವ ವಿವಿಧೈಃ ಸ್ವರೈಃ ॥೨೮॥

ಅಮರಾಣಾಂ ಚ ಪರಮಾಂ ಶ್ರಿಯಂ ಚಾತಿಶಯಂತಿ ಚ ।
ಯತ್ರ ನೈವ ಭಯಂ ಕ್ವಾಪಿ ಕಾಲಾಂಗೈರ್ದಿನರಾತ್ರಿಭಿಃ ॥೨೯॥

ಯತ್ರಾಹಿಪ್ರವರಾಣಾಂ ಚ ಶಿರಸ್ಥೈರ್ಮಣಿರಶ್ಮಿಭಿಃ ।
ನಿತ್ಯಂ ತಮಃ ಪ್ರಬಾಧ್ಯೇತ ಸದಾ ಪ್ರಸ್ಫುಟಕಾಂತಿಭಿಃ ॥೩೦॥

ನ ವಾ ಏತೇಷು ವಸತಾಂ ದಿವ್ಯೌಷಧಿರಸಾಯನೈಃ ।
ರಸಾನ್ನಪಾನಸ್ನಾನಾದ್ಯೈಃ ನಾಽಽಧಯೋ ನ ಚ ವ್ಯಾಧಯಃ ॥೩೧॥

---

ಬಗೆಬಗೆಯ ನೀರುಹಕ್ಕಿಗಳಿಂದಲೂ ಕೂಡಿ ಶುದ್ಧವಾದ ನೀರು ತುಂಬಿದ ಸರೋವರಗಳಲ್ಲಿ ಮಾನು ಮುಂತಾದ ಜಲಚರಪ್ರಾಣಿಗಳು ಸಂಚರಿಸುವುದರಿಂದ ನೀರಿನಲ್ಲಿ ಅಲೆಗಳುಂಟಾಗಿ ಕೆಂಪು, ನೀಲಿಬಣ್ಣಗಳಿಂದಲೂ, ಕೂಡಿದ ತಾವರೆಹೂಗಳಿಂದ ಶೋಭಿಸುತ್ತಿರುವ, ॥೨೬-೨೭॥

ಆ ಸರೋವರಗಳಲ್ಲಿ ವಿಹಾರಾರ್ಥವಾಗಿ (ಆಟಕ್ಕಾಗಿ) ಮಾಡಿದ ಮನೆಗಳು ಇಂದ್ರಿಯಗಳಿಗೆ ಸಂತೋಷವನ್ನುಂಟುಮಾಡುವ ವಸ್ತುಗಳಿಂದಲೂ, ಕಿವಿಗಿಂಪಾದ ಧ್ವನಿಗಳಿಂದಲೂ, ಕೂಡಿ ದೇವತೆಗಳ ಶ್ರೇಷ್ಠವಾದ ಸಂಪತ್ತನ್ನೂ ಮಾರಿಸುತ್ತಿದ್ದಿತು. ॥೨೮॥

ಆ ಬಿಲಗಳಲ್ಲಿ ಕಾಲದ ಅವಯವವಾದ ಹಗಲುರಾತ್ರಿಗಳ ಭಯವಿಲ್ಲ. ಏಕೆಂದರೆ ಆ ಪ್ರದೇಶದಲ್ಲಿರುವ ಶ್ರೇಷ್ಠವಾದ ಸರ್ಪಗಳ ತಲೆಯಲ್ಲಿರುವ ರತ್ನಗಳ ಕಾಂತಿಯಿಂದ ಯಾವಾಗಲೂ, ಕತ್ತಲೆಯು ಅಲ್ಲಿ ಸೇರುತ್ತಿರಲಿಲ್ಲ. ॥೨೯-೩೦॥

ಆ ಬಿಲಗಳಲ್ಲಿ ವಾಸಮಾಡತಕ್ಕವರಿಗೆ ದಿವ್ಯವಾದ ಮೂಲಿಕೆಗಳ ರಸಾಯನದಿಂದಲೂ ರಸವತ್ತಾದ ಅನ್ನಪಾನಾದಿಗಳಿಂದಲೂ ಮನೋವ್ಯಥೆಯಾಗಲಿ, ರೋಗ

ವಲೀಪಲಿತಜೀರ್ಣತ್ವಂ ವೈವರ್ಣ್ಯಂ ಸ್ವೇದಗಂಧತಾಃ ।
ಅನುತ್ಸಾಹವಯೋಽವಸ್ಥಾ ನ ಬಾಧಂತೇ ಕದಾಚನ ॥೩೨॥

ಕಲ್ಯಾಣಾನಾಂ ಸದಾ ತೇಷಾಂ ನ ಚ ಮೃತ್ಯುಭಯಂ ಕುತಃ ।
ಭಗವತ್ತೇಜಸೋಽನ್ಯತ್ರ ಚಕ್ರಾಚ್ಚೈವ ಸುದರ್ಶನಾತ್ ॥೩೩॥

ಯಸ್ಮಿನ್ಪ್ರವಿಷ್ಟೇ ದೈತೇಯವಧೂನಾಂ ಗರ್ಭರಾಶಯಃ ।
ಪ್ರಾಯೋ ಭಯಾತ್ಪತಂತ್ಯೇವ ಸ್ರವಂತಿ ಬ್ರಹ್ಮಪುತ್ರಕ ॥೩೪॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಅಷ್ಟಮಸ್ಕಂಧೇ
ಅಷ್ಟಾದಶೋಽಧ್ಯಾಯಃ.

---

ವಾಗಲಿ ಇರುವುದಿಲ್ಲ. ಮೈಯಲ್ಲಿ ಸುಕ್ಕುಗಳು ನರೆಯಕೂದಲುಗಳಾಗಲಿ ಅಂಗ ವಿಕಾರವಾಗಲಿ ಬೆವರಿನ ದುರ್ವಾಸನೆಯಾಗಲಿ ಉತ್ಸಾಹಹೀನತೆಯಾಗಲಿ ವಾರ್ಧಕಾವಸ್ಥೆಯಾಗಲಿ ಈ ಜನರನ್ನು ಎಂದಿಗೂ ಬಾಧೆಪಡಿಸಲಾರವು. ॥೩೧-೩೨॥

ಅಲ್ಲಿರುವವರೆಲ್ಲರೂ ಯಾವಾಗಲೂ ಮಂಗಳಕರವಾದ ಕೆಲಸಗಳನ್ನೇ ಮಾಡುತ್ತಿರುವರು. ಭಗವಂತನಾದ ವಿಷ್ಣುವಿನ ತೇಜೋರೂಪವಾದ ಸುದರ್ಶನಚಕ್ರ ಹೊರತಾಗಿ ಮತ್ತಾವುದರಿಂದಲೂ ಅವರಿಗೆ ಮರಣಭಯವಿಲ್ಲ. ಎಲೈ ಬ್ರಹ್ಮಪುತ್ರನಾದ ನಾರದನೇ, ಆ ಭಗವಂತನ ತೇಜಸ್ಸು ಆ ಬಿಲಗಳಿಗೆ ಪ್ರವೇಶಿಸಿದರೆ ದೈತ್ಯಸ್ತ್ರೀಯರ ಗರ್ಭಗಳು ಭಯದಿಂದ ಸ್ರಾವವಾಗಿ ಬಿದ್ದುಹೋಗುವುವು. ॥೩೩-೩೪॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಎಂಟನೆಯ ಸ್ಕಂಧದಲ್ಲಿ
ಹದಿನೆಂಟನೆಯ ಅಧ್ಯಾಯವು ಮುಗಿದುದು.

|| ಶ್ರೀ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಅಷ್ಟಮಸ್ಕಂಧೇ

### || ಏಕೋನವಿಂಶೋಽಧ್ಯಾಯಃ ||

### ಹತ್ತೊಂಬತ್ತನೆಯ ಅಧ್ಯಾಯವು

|| ಶ್ರೀನಾರಾಯಣ ಉವಾಚ ||

**ಪ್ರಥಮೇ ವಿವರೇ ವಿಪ್ರ ಅತಲಾಖ್ಯೇ ಮನೋರಮೇ ।**
**ಮಯಪುತ್ರೋ ಬಲೋನಾಮ ವರ್ತತೇಽಖರ್ವಗರ್ವಕೃತ್ ||೧||**

**ಷಣ್ಣವತ್ಯೋ ಯೇನ ಸೃಷ್ಟಾ ಮಾಯಾಃ ಸರ್ವಾರ್ಥಸಾಧಿಕಾಃ ।**
**ಮಾಯಾವಿನೋ ಯಾಶ್ಚ ಸದ್ಯೋ ಧಾರಯಂತಿ ಚ ಕಾಶ್ಚನ ||೨||**

**ಜೃಂಭಮಾಣಸ್ಯ ಯಸ್ಯೈವ ಬಲಸ್ಯ ಬಲಶಾಲಿನಃ ।**
**ಸ್ತ್ರೀಗಣಾ ಉಪಪದ್ಯಂತೇ ತ್ರಯೋ ಲೋಕವಿಮೋಹನಾಃ ||೩||**

---

ನಾರಾಯಣನು ಹೇಳಿದನು—ಎಲೈ ನಾರದನೇ, ಅತಲವೆಂಬ ಮೊದಲನೆಯ ಸೊಗಸಾದ ಬಿಲದಲ್ಲಿ ಮಯನ ಮಗನಾದ ಬಲನೆಂಬವನು ವಿಶೇಷವಾದ ಗರ್ವದಿಂದ ಕೂಡಿರುವನು. ||೧||

ಆ ಬಲನು ಸಕಲ ಇಷ್ಟಾರ್ಥಗಳನ್ನೂ ಉಂಟುಮಾಡತಕ್ಕ ತೊಂಬತ್ತಾರು ಮಾಯೆಗಳನ್ನು ಸೃಷ್ಟಿಮಾಡಿದನು. ಅವುಗಳಲ್ಲಿ ಕೆಲವನ್ನು ಮಾತ್ರ ಇಂದ್ರಜಾಲ ಮಾಡುವವರು ಕಲಿತಿರುವರು. ||೨||

ಪರಾಕ್ರಮಶಾಲಿಯಾದ ಬಲನು ಆಕಳಿಸಿದಾಗ ಮೂರು ಲೋಕವನ್ನೂ ಮೋಹಗೊಳಿಸುವ ಮೂರುಗುಂಪಿನ ಅನೇಕ ಸ್ತ್ರೀಯರು ಹುಟ್ಟಿದರು. ||೩||

ಪುಂಶ್ಚಲ್ಯಶ್ಚೈವ ಸ್ವೈರಿಣ್ಯಃ ಕಾಮಿನ್ಯಶ್ಚೇತಿ ವಿಶ್ರುತಾಃ ।
ಯಾ ವೈ ಬಿಲಾಯನಂ ಪ್ರೇಷ್ಠಂ ಪ್ರವಿಷ್ಟಂ ಪುರುಷಂ ರಹಃ ॥೪॥

ರಸೇನ ಹಾಟಕಾಖ್ಯೇನ ಸಾಧಯಿತ್ವಾ ಪ್ರಯತ್ನತಃ ।
ಸ್ವವಿಲಾಸಾವಲೋಕಾನುರಾಗಸ್ಮಿತವಿಗೂಹನೈಃ ॥೫॥

ಸಂಲಾಪ ವಿಭ್ರಮಾದ್ಯೈಶ್ಚ ರಮಯಂತ್ಯಪಿ ತಾಃ ಸ್ತ್ರಿಯಃ ।
ಯಸ್ಮಿನ್ನುಪಯುಕ್ತೇ ಜನೋ ಮನುತೇ ಬಹುಧಾ ಸ್ವಯಂ ॥೬॥

ಈಶ್ವರೋಽಹಮಹಂ ಸಿದ್ಧೋ ನಾಗಾಯುತಬಲೋ ಮಹಾನ್ ।
ಆತ್ಮಾನಂ ಮನ್ಯಮಾನಃ ಸನ್ಮದಾಂಧ ಇವ ಕಥ್ಯತೇ ॥೭॥

ಏವಂ ಪ್ರೋಕ್ತಾ ಸ್ಥಿತಿಶ್ಚಾತ್ರ ಅತಲಸ್ಯ ಚ ನಾರದ ।
ದ್ವಿತೀಯವಿವರಸ್ಯಾತ್ರ ವಿತಲಸ್ಯ ನಿಬೋಧತ ॥೮॥

ಭೂತಲಾಧಸ್ತಲೇ ಚೈವ ವಿತಲೇ ಭಗವಾನ್ ಭವಃ ।
ಹಾಟಕೇಶ್ವರನಾಮಾಽಯಂ ಸ್ವಪಾರ್ಷದ ಗಣೈರ್ವೃತಃ ॥೯॥

---

ಆ ಸ್ತ್ರೀಯರಲ್ಲಿ ಸಮಾನಜಾತಿಯ ಪುರುಷರಲ್ಲಾಸಕ್ತರಾದವರನ್ನು ಸ್ವೈರಿಣಿಗಳೆಂದೂ, ಅಸಮಾನಜಾತಿಯ ಪುರುಷರಲ್ಲಾಸಕ್ತರಾದವರನ್ನು ಕಾಮಿನಿಯರೆಂದೂ, ಯಾವ ನಿಯಮವೂ ಇಲ್ಲದೆ ಪುರುಷಮಾತ್ರರಲ್ಲಾಸಕ್ತರಾದ ಚಂಚಲೆಯರನ್ನು ಪುಂಶ್ಚಲಿಗಳೆಂದೂ ಕರೆಯುವರು. ಈ ಸ್ತ್ರೀಯರು ಆ ಬಿಲವನ್ನು ಪ್ರವೇಶಿಸಿದ ಪುರುಷರನ್ನು ಪ್ರೀತಿಸಿ ಗುಟ್ಟಾಗಿ ಕರೆದುಕೊಂಡು ಹೋಗಿ ಪ್ರಯತ್ನಪೂರ್ವಕವಾಗಿ ಸುವರ್ಣರಸಾಯನವನ್ನು ಕೊಟ್ಟು ಸಂಭೋಗಸಮರ್ಥನನ್ನು ಮಾಡಿ ತಮ್ಮ ವಿಲಾಸ, ನೋಟ, ಪ್ರೀತಿ, ನಗು, ಆಲಿಂಗನ, ಸರಸಸಲ್ಲಾಪಗಳಿಂದ ಕ್ರೀಡಿಸುವರು. ॥೪-೫॥

ಆ ಸುವರ್ಣರಸಾಯನವನ್ನು ಸೇವಿಸಿದೊಡನೆಯೇ ಮನುಷ್ಯನು ತಾನೇ ಈಶ್ವರನು, ಸಿದ್ಧನು, ಹತ್ತುಸಾವಿರ ಆನೆಯ ಬಲವುಳ್ಳವನು. ಎನ್ದು ತಿಳಿದುಕೊಂಡು ಮದಿಸಿ ಮಾತನಾಡುವನು. ಹೀಗೆ ಅತಲಬಿಲದಸ್ಥಿತಿಯನ್ನು ಹೇಳಿದೆನು. ಇನ್ನು ಎರಡನೆಯದಾದ ವಿತಲ ಬಿಲದ ಸ್ಥಿತಿಯನ್ನು ಕೇಳು. ॥೬-೭-೮॥

ಭೂಲೋಕದ ಕೆಳಭಾಗದಲ್ಲಿರುವ ವಿತಲ ಲೋಕದಲ್ಲಿ ದೇವತೆಗಳಿಂದ ಪೂಜಿಸಲ್ಪಟ್ಟ ಮಹಾಮಹಿಮನಾದ ಶಿವನು ಹಾಟಕೇಶ್ವರನೆಂಬ ಹೆಸರಿನಿಂದ ತನ್ನ

ಪ್ರಜಾಪತಿಕೃತಸ್ಯಾಪಿ ಸರ್ಗಸ್ಯ ಬೃಂಹಣಾಯುಚ ।
ಭವಾನ್ಯಾ ಮಿಥುನೀಭೂಯ ಆಸ್ತೇ ದೇವಾಧಿಪೂಜಿತಃ ॥೧೦॥

ಭವಯೋರ್ವೀರ್ಯಸಂಭೂತಾ ಹಾಟಕೀ ಸರಿದುತ್ತಮಾ ।
ಸಮಿದ್ಧೋ ಮರುತಾ ವಹ್ನಿ ರೋಜಸಾ ಪಿಬತೀವ ಹಿ ॥೧೧॥

ತನ್ನಿಷ್ಠ್ಯೂತಂ ಹಾಟಕಾಖ್ಯಂ ಸುವರ್ಣಂ ದೈತ್ಯವಲ್ಲಭಂ ।
ದೈತ್ಯಾಂಗನಾಭೂಷಣಾರ್ಹಂ ಸದಾ ಸಂಧಾರಯಂತಿ ಹಿ ॥೧೨॥

ತದ್ಬಿಲಾಧಸ್ತಲಾತ್ಪ್ರೋಕ್ತಂ ಸುತಲಾಖ್ಯಂ ಬಿಲೇಶ್ವರಂ ।
ಪುಣ್ಯಶ್ಲೋಕೋ ಬಲಿರ್ನಾಮ ಆಸ್ತೇ ವೈರೋಚನಿರ್ಮುನೇ ॥೧೩॥

ಮಹೇಂದ್ರಸ್ಯ ಚ ದೇವಸ್ಯ ಚಿಕೀರ್ಷುಃ ಪ್ರಿಯಮುತ್ತಮಂ ।
ತ್ರಿವಿಕ್ರಮೋಽಪಿ ಭಗವಾನ್ಸುತಲೇ ಬಲಿಮಾನಯತ್ ॥೧೪॥

ತ್ರೈಲೋಕ್ಯಲಕ್ಷ್ಮೀಮಾಕ್ಷಿಪ್ಯ ಸ್ಥಾಪಿತಃ ಕಿಲ ದೈತ್ಯರಾಟ್ ।
ಇಂದ್ರಾದಿಷ್ವಪ್ಯಲಬ್ಧಾಯಾ ಸಾ ಶ್ರೀಸ್ತಮನುವರ್ತತೇ ॥೧೫॥

---

ಗಣಗಳೊಡನೆ ಕೂಡಿ ಬ್ರಹ್ಮನುಮಾಡಿದ ಸೃಷ್ಟಿಯನ್ನು ಅಭಿವೃದ್ಧಿಪಡಿಸುವುದಕ್ಕಾಗಿ ಭವಾನಿಯೊಡನೆ ಕೂಡಿ ಕ್ರೀಡಿಸುತ್ತಿರುವನು. ||೯-೧೦||

ಕ್ರೀಡಿಸುತ್ತಿರುವ ಆ ಭವಾನೀಭವರ ವೀರ್ಯದಿಂದ ಹುಟ್ಟಿದ ಶ್ರೇಷ್ಠವಾದ ಹಾಟಕೀನದಿಯು ಗಾಳಿಯಿಂದ ಬೆಂಕಿಹತ್ತಿಕೊಂಡು ಪ್ರಕಾಶಿಸುತ್ತ ತನ್ನ ತೇಜಸ್ಸಿನಿಂದ ಎಲ್ಲವನ್ನೂ ಮುಚ್ಚುವುದು. ಆ ಬೆಂಕಿಯಿಂದ ಹೊರಕ್ಕೆ ಉಗುಳಿದ ರಸವೇ ಚಿನ್ನವು. ದೈತ್ಯರು ಇದನ್ನು ಪ್ರೀತಿಸಿದುದರಿಂದ ದೈತ್ಯಸ್ತ್ರೀಯರು ಇದರಿಂದ ಆಭರಣಗಳನ್ನು ಮಾಡಿಸಿ ಯಾವಾಗಲೂ ಧರಿಸಿಕೊಂಡಿರುವರು. ||೧೧-೧೨||

ಆ ವಿತಲ ಬಿಲದಿಂದ ಕೆಳಭಾಗಕ್ಕೆ ಸುತಲವೆಂಬ ಲೋಕವಿರುವುದು. ಅಲ್ಲಿ ಕೀರ್ತಿವಂತನಾದ ವಿರೋಚನನ ಮಗನಾದ ಬಲಿಯು ಇರುವನು. ದೇವೇಂದ್ರನಿಗೆ ಅನುಕೂಲ ಮಾಡಬೇಕೆಂದು ಹರಿಯು ತ್ರಿವಿಕ್ರಮಾವತಾರವನ್ನು ಮಾಡಿ ಸುತಲ ಲೋಕಕ್ಕೆ ಬಲಿಯನ್ನು ಕರೆದುಕೊಂಡು ಬಂದನು. ||೧೩-೧೪||

ತ್ರಿವಿಕ್ರಮನು ಮೂರುಲೋಕದ ಸಂಪತ್ತನ್ನೂ ಬಲಿಯಿಂದ ಕಿತ್ತುಕೊಂಡು ಅವನನ್ನು ಆ ಸುತಲದಲ್ಲಿ ಸ್ಥಾಪಿಸಿದನು. ಇಂದ್ರಾದಿಗಳಿಗೂ ದೊರೆಯದಿದ್ದ ಸಂಪತ್ತು

ತನೋವ ದೇವದೇವೇಶಮಾರಾಧಯತಿ ಭಕ್ತಿತಃ ।
ವ್ಯಪೇತಸಾಧ್ವಸೋಽದ್ಯಾಪಿ ವರ್ತತೇ ಸುತಲಾಧಿಪಃ ॥೧೬॥

ಭೂಮಿದಾನಫಲಂ ಹ್ಯೇತತ್ಪಾತ್ರಭೂತೇಽಖಿಲೇಶ್ವರೇ ।
ವರ್ಣಯಂತಿ ಮಹಾತ್ಮಾನೋ ನೈತದ್ಯುಕ್ತಂ ಚ ನಾರದ ॥೧೭॥

ವಾಸುದೇವೇ ಭಗವತಿ ಪುರುಷಾರ್ಥಪ್ರದೇ ಹರೌ ।
ಏತದ್ದಾನಫಲಂ ವಿಪ್ರ ಸರ್ವಥಾ ನ ಹಿ ಯುಜ್ಯತೇ ॥೧೮॥

ಯಸ್ಯೈವ ದೇವದೇವಸ್ಯ ನಾಮಾಪಿ ವಿವಶೋ ಗೃಣನ್ ।
ಸ್ವಕೀಯಕರ್ಮಬಂಧೀಯಗುಣಾನ್ ವಿಧುನುತೇಽಂಜಸಾ ॥೧೯॥

ಯತ್ಕ್ಲೇಶಬಂಧ-ಹಾನಾಯ ಸಾಂಖ್ಯಯೋಗಾದಿಸಾಧನಂ ।
ಕುರ್ವತೇ ಯತಯೋ ನಿತ್ಯಂ ಭಗವತ್ಯಖಿಲೇಶ್ವರೇ ॥೨೦॥

---

ಆ ದೈತ್ಯರಾಜನಾದ ಬಲಿಯನ್ನು ಅನುಸರಿಸಿರುವುದು. ಆ ಬಲಿಯು ದೇವದೇವನಾದ ಆ ವಿಷ್ಣುವನ್ನೇ ಭಕ್ತಿಯಿಂದ ಪೂಜಿಸುವನು. ಈ ಕಾರಣದಿಂದ ಅವನು ಈಗಲೂ ಯಾವ ಭಯವೂ ಇಲ್ಲದೆ ಸುತಲಾಧಿಪತಿಯಾಗಿರುವನು. ||೧೫-೧೬||

ಕೆಲವರು ಮಹಾತ್ಮರು ಬಲಿಚಕ್ರವರ್ತಿಗೆ ಈ ಸಂಪತ್ತು ಬಂದಿರುವುದು. ಸಮಸ್ತಕ್ಕೂ ಒಡೆಯನಾದ ಮತ್ತು ದಾನಕ್ಕೆ ಯೋಗ್ಯಪಾತ್ರನಾದ ವಿಷ್ಣುವಿಗೆ ಭೂಮಿದಾನವನ್ನು ಮಾಡಿದುದರ ಫಲವೆಂದು ವರ್ಣನೆಮಾಡುವರು. ನಾರದನೇ, ಇದು ಯುಕ್ತವಾದುದಲ್ಲ. ಸಮಸ್ತ ಪುರುಷಾರ್ಥಗಳನ್ನೂ ಕೊಡಲು ಸಮರ್ಥನಾದ ಭಗವಂತನಾದ ಹರಿಯ ವಿಷಯದಲ್ಲಿ ಈ ಅಲ್ಪವಾದ ದಾನಫಲವನ್ನು ಪ್ರಶಂಸಿಸುವುದು ಸರ್ವಥಾ ಯೋಗ್ಯವಾದುದಲ್ಲ. ||೧೭-೧೮||

ಮನುಷ್ಯನು ದೇವತೆಗಳಿಗೂ ಸ್ವಾಮಿಯಾದ ಆ ಹರಿಯ ನಾಮವನ್ನು ಪ್ರಯತ್ನವಿಲ್ಲದೆ ಉಚ್ಚಾರಮಾಡಿ ತನ್ನ ಕರ್ಮಬಂಧಕಾರಣವಾದ ಗುಣಗಳನ್ನು ಬೇಗನೆ ಕಳೆದುಕೊಳ್ಳುವನು. ಯತಿಗಳು ತಮ್ಮ ಕಷ್ಟ ಮತ್ತು ಸಂಸಾರಬಂಧ ಇವುಗಳ ನಾಶಕ್ಕೋಸ್ಕರ ಭಗವಂತನಾದ ಆ ದೇವನ ಸಾಕ್ಷಾತ್ಕಾರದ ವಿಷಯದಲ್ಲಿ ಸಾಂಖ್ಯವೆಂಬ ವಿವೇಕಜ್ಞಾನವನ್ನೂ ಯೋಗವೆಂಬ ಯಮನಿಯಮಾದಿಗಳಿಂದ ಮನೋನಿರೋಧವನ್ನೂ ಅಭ್ಯಾಸಮಾಡುವರು. ||೧೯-೨೦||

ನ ಚಾಽಯಂ ಭಗವಾನಸ್ಮಾನನುಜಗ್ರಾಹ ನಾರದ ।
ಮಾಯಾಮಯಂ ಚ ಭೋಗಾನಾಮೈಶ್ವರ್ಯಂ ವ್ಯತನೋತ್ಪರಂ॥೨೧॥

ಸರ್ವಕ್ಲೇಶಾಧಿಹೇತುಂ ತದಾತ್ಮಾನುಸ್ಮೃತಿ ಮೋಷಣಂ ।
ಯಂ ಸಾಕ್ಷಾದ್ಭಗವಾನ್ವಿಷ್ಣುಃ ಸರ್ವೋಪಾಯವಿದೀಶ್ವರಃ ॥೨೨॥

ಯಾಚ್ಞಾಛಲೇನಾಪಹೃತಂ ಸರ್ವಸ್ವಂ ದೇಹಶೇಷಕಂ ।
ಅಪ್ರಾಪ್ತಾನ್ಯೋಪಾಯ ಈಶಃ ಪಾಶೈಃ ವಾರುಣಸಂಭವೈಃ ॥೨೩॥

ಬಂಧಯಿತ್ವಾವಮುಚ್ಯಾಽಪಿ ಗಿರಿದರ್ಯಾಮಿವಾಬ್ರವೀತ್ ।
ಅಸಾವಿಂದ್ರೋ ಮಹಾಮೂಢೋ ಯಸ್ಯ ಮಂತ್ರೀ ಬೃಹಸ್ಪತಿಃ ॥೨೪॥

ಪ್ರಸನ್ನಮಿಮಮತ್ಯರ್ಥಂ ಅಯಾಚಲ್ಲೋಕಸಂಪದಂ ।
ತ್ರೈಲೋಕ್ಯಮಿದಮೈಶ್ವರ್ಯಂ ಕಿಯದೇವಾತಿತುಚ್ಛಕಂ ॥೨೫॥

---

ಎಲೈ ನಾರದನೇ, ಆ ಭಗವಂತನಾದ ವಿಷ್ಣುವು ನಮಗೆ ಇನ್ನೂ ಅನುಗ್ರಹ ಮಾಡಿಲ್ಲ. ಮಾಯಾಮಯವಾದ ಸುಖಾನುಭವರೂಪವಾದ ಸಂಪತ್ತನ್ನು ವಿಶೇಷವಾಗಿ ಉಂಟುಮಾಡುತ್ತಿರುವನು. ಆ ಸಂಪತ್ತು ಸಮಸ್ತ ಕಷ್ಟಗಳಿಗೂ ಮುಖ್ಯ ಕಾರಣವಾದುದಾಗಿ ಆತ್ಮಜ್ಞಾನವನ್ನು ನಾಶಮಾಡುವುದು. ॥೨೧॥

ಸಮಸ್ತ ಉಪಾಯಗಳನ್ನೂ ಬಲ್ಲ ಮಹಾಮಹಿಮನಾದ ವಿಷ್ಣುವು ಉಪಾಯಾಂತರವನ್ನು ಕಾಣದೆ ದಾನವನ್ನು ಕೇಳುವ ನೆಪದಿಂದ ಬಲಿಚಕ್ರವರ್ತಿಯ ಶರೀರವನ್ನು ಬಿಟ್ಟು ಅವನ ಸರ್ವಸ್ವವನ್ನೂ ವರುಣಪಾಶಗಳಿಂದ ಕಟ್ಟಿ ಬೆಟ್ಟದ ಗುಹೆಯಲ್ಲಿ ಬಿಟ್ಟಂತೆ ಸುತಲೋಕದಲ್ಲಿ ಇಟ್ಟಿರುವನು. ಅವನಲ್ಲಿರುವ ಭಕ್ತಿಯನ್ನು ತಿಳಿದು ತನ್ನ ದುಃಖವನ್ನು ಸ್ವಲ್ಪವೂ ಲೆಕ್ಕಿಸದೆ ಅವನ ಮನೆಯ ಬಾಗಿಲಲ್ಲಿರುವನು. ಆ ವಿಷ್ಣುವನ್ನು ಕುರಿತು ಬಲಿಯು ಮುಂದೆ ಹೇಳುವ ಮಾತನ್ನಾಡುವನು. ॥೨೨-೨೩॥

ಈ ದೇವೇಂದ್ರನು ಬಹು ದಡ್ಡನು. ತನಗೆ ಬುದ್ಧಿವಂತನಾದ ಬೃಹಸ್ಪತಿಯು ಮಂತ್ರಿಯಾಗಿದ್ದರೂ ತನಗೆ ಸಂಪೂರ್ಣನಾಗಿ ಪ್ರಸನ್ನನಾದ ವಿಷ್ಣುವನ್ನು ಕುರಿತು ಲೋಕಗಳ ಸಂಪತ್ತನ್ನು ಕೇಳಿಕೊಂಡನು. ಈ ಮೂರು ಲೋಕದ ಸಂಪತ್ತೂ ಯಾವ ಉತ್ತಮ ಪ್ರಯೋಜನಕ್ಕೂ ಬರತಕ್ಕುದಲ್ಲ. ಅಸತ್ತಾದುದು. ಸಮಸ್ತ ಕಾಮನೆಗಳಿಗೂ ಉತ್ಪತ್ತಿಸ್ಥಾನನಾದ ಹರಿಯನ್ನು ಬಿಟ್ಟು ಲೋಕಗಳ ಸಂಪತ್ತಿನಲ್ಲಿ ಆಸೆಯಿಂದ ಅಜ್ಞಾನಿಯಾದನು. ॥೨೪-೨೫॥

ಆಶಿಷಾಂ ಪ್ರಭವಂ ಮುಕ್ತ್ವಾ ಯೋ ಮೂಢೋ ಲೋಕಸಂಪದಿ ।
ಅಸ್ಮತ್ಪಿತಾಮಹಃ ಶ್ರೀಮಾನ್ಪ್ರಹ್ಲಾದೋ ಭಗವತ್ಪ್ರಿಯಃ ॥೨೬॥

ದಾಸ್ಯಂ ವವ್ರೇ ವಿಭೋಸ್ತಸ್ಯ ಸರ್ವಲೋಕೋಪಕಾರಕಃ ।
ಪಿತ್ರ್ಯನ್ಯೈಶ್ವರ್ಯಮತುಲಂ ದೀಯಮಾನಂ ಚ ವಿಷ್ಣುನಾ ॥೨೭॥

ಪಿತರ್ಯುಪರತೇ ವೀರೇ ನೈವೈಚ್ಛದ್ಭಗವತ್ಪ್ರಿಯಃ ।
ತಸ್ಯಾತುಲಾನುಭಾವಸ್ಯ ಸರ್ವಲೋಕೋಪ(ಕೇಃಪಿ)ಧೀಮತಃ॥೨೮॥

ಅಸ್ಮದ್ವಿಧೋನಾಲ್ಪಪಕ್ವೋ ತರದೋಷೋಽವಗಚ್ಛತಿ ।
ಏವಂ ದೈತ್ಯಪತಿಃ ಸೋಽಯಂ ಬಲಿಃ ಪರಮಪೂಜಿತಃ ॥೨೯॥

ಸುತಲೇ ವರ್ತತೇ ಯಸ್ಯ ದ್ವಾರಪಾಲೋ ಹರಿಃ ಸ್ವಯಂ ।
ಏಕದಾ ದಿಗ್ವಿಜಯೀ ರಾಜಾ ರಾವಣೋ ಲೋಕರಾವಣಃ ॥೩೦॥

ಪ್ರವಿಶನ್ಸುತಲೇ ಯೇನ ಭಕ್ತಾನುಗ್ರಹಕಾರಿಣಾ ।
ಪಾದಾಂಗುಷ್ಠೇನ ಪ್ರಕ್ಷಿಪ್ತೋ ಯೋಜನಾಯುತಮತ್ರ ಹಿ ॥೩೧॥

---

ಭಗವಂತನಿಗೆ ಪ್ರೀತಿಪಾತ್ರನಾದ ನಮ್ಮ ತಾತನಾದ ಪ್ರಹ್ಲಾದನು ಶೂರನಾದ ತಂದೆಯು ಸತ್ತಮೇಲೆ ತನ್ನ ತಂದೆಯಾದ ಹಿರಣ್ಯಕಶಿಪುವಿನ ಸಮಸ್ತ ಐಶ್ವರ್ಯವನ್ನೂ ಕೊಡುತ್ತಿರುವ ವಿಷ್ಣುವನ್ನು ಕುರಿತು ಆ ಸಂಪತ್ತು ಬೇಡವೆಂದೂ ಲೋಕೋಪಕಾರಕ್ಕಾಗಿ ನಾನು ಯಾವಾಗಲೂ ನಿನ್ನ ದಾಸನಾಗಿರಬೇಕೆಂದೂ ಬೇಡಿಕೊಂಡನು. ॥೨೬-೨೭॥

ಸಮಸ್ತ ಲೋಕಗಳೂ ಉಪಾಧಿಯಾಗುಳ್ಳ ಅಸಮಾನವಾದ ಮಹಿಮೆಯುಳ್ಳ ಆ ವಿಷ್ಣುವಿನ ಅಂತರಂಗವನ್ನು ಅಪರಿಪಕ್ವವಾದ ಅನೇಕ ದೋಷಗಳುಳ್ಳ ನಮ್ಮಂಥವರು ಹೇಗೆ ತಿಳಿಯುವರು. ॥೨೮॥

ಸಮಸ್ತರಿಗೂ ಪೂಜೆಗೆ ಯೋಗ್ಯನಾದ ಬಲಿಚಕ್ರವರ್ತಿಯು ಹೀಗೆ ಹೇಳುತ್ತ ಸುತಲ ಲೋಕದಲ್ಲಿರುವನು. ಅವನ ಮನೆಯ ಬಾಗಿಲು ಕಾಯುವ ಕೆಲಸವನ್ನು ವಿಷ್ಣುವು ತಾನೇ ಮಾಡುತ್ತಿರುವನು. ॥೨೯॥

ಒಂದಾನೊಂದುಕಾಲದಲ್ಲಿ ಲೋಕಗಳನ್ನೆಲ್ಲಾ ಪೀಡಿಸುವ ರಾವಣನು ದಿಗ್ವಿಜಯಕ್ಕಾಗಿ ಸುತಲಲೋಕವನ್ನು ಪ್ರವೇಶಿಸಿದನು. ಆಗ ಭಕ್ತರನ್ನು ಕಾಪಾಡುವ

ಏವಂ ಭೂತಾನುಭಾವೋಽಯಂ ಬಲಿಃ ಸರ್ವಸುಖೈಕಭುಕ್ ।
ಆಸ್ತೇ ಸುತಲರಾಜ್ಯಸ್ಥೋ ದೇವದೇವಪ್ರಸಾದತಃ ॥೩೨॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಅಷ್ಟಮಸ್ಕಂಧೇ
ಏಕೋನವಿಂಶೋಽಧ್ಯಾಯಃ

---

ಹರಿಯು ತನ್ನ ಕಾಲಿನ ಹೆಬ್ಬೆರಳಿನಿಂದ ಆ ರಾವಣನನ್ನು ಹತ್ತುಸಾವಿರ ಯೋಜನ ದೂರಕ್ಕೆ ಚಿಮ್ಮಿದನು. ॥೩೦-೩೧॥

ಈ ರೀತಿಯಾದ ಮಹಿಮೆಯುಳ್ಳ ಬಲಿಚಕ್ರವರ್ತಿಯು ದೇವೋತ್ತಮನಾದ ವಿಷ್ಣುವಿನ ಅನುಗ್ರಹದಿಂದ ಸಮಸ್ತ ಸುಖಗಳನ್ನೂ ಅನುಭವಿಸುತ್ತ ಸುತಲ ಲೋಕದ ಆಧಿಪತ್ಯದಲ್ಲಿರುವನು. ॥೩೨॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಎಂಟನೆಯ ಸ್ಕಂಧದಲ್ಲಿ
ಹತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಅಷ್ಟಮಸ್ಕಂಧೇ

### || ವಿಂಶೋಽಧ್ಯಾಯಃ ||

### ಇಪ್ಪತ್ತನೆಯ ಅಧ್ಯಾಯವು

|| ಶ್ರೀನಾರಾಯಣ ಉವಾಚ ||

**ತತೋಽಧಸ್ತಾದ್ವಿವರಕಂ ತಲಾತಲಮುದೀರಿತಂ ।**
**ದಾನವೇಂದ್ರೋ ಮಯೋನಾಮ ತ್ರಿಪುರಾಧಿಪತಿರ್ಮಹಾನ್ ॥೧॥**

**ತ್ರಿಲೋಕ್ಯಾಃ ಶಂಕರೇಣಾಽಯಂ ಪಾಲಿತೋ ದಗ್ಧಪೂಸ್ತ್ರಯಃ ।**
**ದೇವದೇವಪ್ರಸಾದಾತ್ತು ಲಬ್ಧರಾಜ್ಯಸುಖಾಸ್ಪದಃ ॥೨॥**

**ಆಚಾರ್ಯೋ ಮಾಯಿನಾಂ ಸೋಽಯಂ ನಾನಾಮಾಯಾವಿಶಾರದಃ ।**
**ಪೂಜ್ಯತೇ ರಾಕ್ಷಸೈರ್ಘೋರೈಃ ಸರ್ವಕಾರ್ಯಸಮೃದ್ಧಯೇ ॥೩॥**

---

ನಾರಾಯಣನು ಹೇಳಿದನು—ಆ ಸುತಲದಿಂದ ಕಳಭಾಗಕ್ಕೆ ತಲಾತಲವೆಂಬ ಬಿಲವಿರುವುದು. ಅಲ್ಲಿ ತ್ರಿಪುರಾಧಿಪತಿಯಾದ ದಾನವರ ಒಡೆಯನಾದ ಮಯನೆಂಬ ಅಸುರನು ಇರುವನು. ಮೂರು ಲೋಕಕ್ಕೂ ಸುಖವನ್ನುಂಟುಮಾಡುವ ಈಶ್ವರನು ಅವನ ಮೂರು ಪಟ್ಟಣಗಳನ್ನೂ ಸುಟ್ಟು ಭಕ್ತನಾದ ಅವನನ್ನು ಕಾಪಾಡಲು ಈ ಸ್ಥಳದಲ್ಲಿ ಅವನನ್ನಿಟ್ಟಿರುವನು. ಆ ಮಹಾದೇವನ ಅನುಗ್ರಹದಿಂದ ಆ ಅಸುರನು ಇಲ್ಲಿ ರಾಜ್ಯಸುಖವನ್ನನುಭವಿಸುತ್ತಿರುವನು. ||೧-೨||

ಆ ಮಯಾಸುರನು ಇಂದ್ರಜಾಲಮಾಡುವವರಿಗೆ ಗುರುವಾಗಿರುವನು. ಸಮಸ್ತ ಮಾಯಾವಿದ್ಯೆಯನ್ನೂ ಬಲ್ಲವನು. ಕ್ರೂರರಾದ ರಾಕ್ಷಸರು ತಮ್ಮ ಕಾರ್ಯಸಿದ್ಧಿಗೋಸ್ಕರವಾಗಿ ಅವನನ್ನು ಪೂಜಿಸುವರು. ||೩||

ತತೋಽಧಸ್ತಾತ್ತುವಿಖ್ಯಾತಂ ಮಹಾತಲಮಿತಿ ಸ್ಫುಟಂ ।
ಸರ್ಪಾಣಾಂ ಕಾದ್ರವೇಯಾಣಾಂ ಗಣಃ ಕ್ರೋಧವಶೋ ಮಹಾನ್ ॥೪॥

ಅನೇಕಶಿರಸಾಂ ವಿಪ್ರ ಪ್ರಧಾನಾನ್ಕೀರ್ತಯಾಮಿ ತೇ ।
ಕುಹಕಸ್ತಕ್ಷಕಶ್ಚೈವ ಸುಷೇಣಃ ಕಾಲಿಯಸ್ತಥಾ ॥೫॥

ಮಹಾಭೋಗಾ ಮಹಾಸತ್ವಾಃ ಕ್ರೂರಾಃ ಕ್ರೂರಸ್ವಜಾತಯಃ ।
ಪತತ್ರಿರಾಜಾಧಿಪತೇರುದ್ವಿಗ್ನಾಃ ಸರ್ವಏವ ತೇ ॥೬॥

ಸ್ವಕಲತ್ರಾಪತ್ಯಸುಹೃತ್ಕುಟುಂಬಸ್ಯ ಚ ಸಂಗತಾಃ ।
ಪ್ರಮತ್ತಾ ವಿಹರಂತ್ಯೇವ ನಾನಾಕ್ರೀಡಾವಿಶಾರದಾಃ ॥೭॥

ತತೋಽಧಸ್ತಾಚ್ಚ ವಿವರೇ ರಸಾತಲ ಸಮಾಹ್ವಯೇ ।
ದೈತೇಯಾ ನಿವಸಂತ್ಯೇವ ಪಣಯೋ ದಾನವಾಶ್ಚ ತೇ ॥೮॥

ನಿವಾತಕವಚಾನಾಮ ಹಿರಣ್ಯಪುರವಾಸಿನಃ ।
ಕಾಲೇಯಾ ಇತಿ ಚ ಪ್ರೋಕ್ತಾಃ ಪ್ರತ್ಯನೀಕಾ ಹವಿರ್ಭುಜಾಂ ॥೯॥

---

ಆ ತಲಾತಲ ಲೋಕದಿಂದ ಕೆಳಗೆ ಮಹಾತಲವೆಂಬ ಲೋಕವಿರುವುದು. ಅಲ್ಲಿ ಕದ್ರುದೇವಿಯ ಮಕ್ಕಳಾದ ಕ್ರೂರವಾದ ಸರ್ಪಗಳು ಇರುವುವು. ಅನೇಕ ತಲೆಗಳುಳ್ಳ ಸರ್ಪಗಳಲ್ಲಿ ಮುಖ್ಯವಾದುವುಗಳನ್ನು ಹೇಳುವೆನು. ||೪||

ಕುಹಕ, ತಕ್ಷಕ, ಸುಷೇಣ, ಕಾಲಿಯ ಎಂಬ ದೊಡ್ಡ ಹೆಡೆಗಳುಳ್ಳ ಬಲವಾದ ಭಯಂಕರವಾದ ಸರ್ಪಗಳು ಪಕ್ಷಿರಾಜನಾದ ಗರುಡನ ಭಯದಿಂದ ಆ ಪ್ರದೇಶದಲ್ಲಿ ವಾಸಮಾಡುತ್ತ ತಮ್ಮ ಹೆಂಡಿತಿ ಮಕ್ಕಳೊಡನೆ ಕೂಡಿ ಕ್ರೀಡಿಸುತ್ತಾ ಮದಿಸಿರುವುವು. ||೫-೬-೭||

ಅಲ್ಲಿಂದ ಕೆಳಗಿನ ರಸಾತಲವೆಂಬ ಬಿಲದಲ್ಲಿ ದಿತಿಯ ಮಕ್ಕಳಾದ ಪಣಿಗಳೆಂಬ ದಾನವರು ವಾಸವಾಗಿರುವರು. ಹಿರಣ್ಯಪುರದಲ್ಲಿ ವಾಸಮಾಡುವ ಅವರನ್ನು ನಿವಾತ ಕವಚರೆಂದೂ ಕಾಲೇಯರೆಂದೂ ಕರೆಯುವರು. ಅವರು ದೇವತೆಗಳ ಶತ್ರುಗಳು. ||೮-೯||

ಮಹೌಜಸ ಶ್ಚೋತ್ಪತ್ತ್ಯೈವ ಮಹಾಸಾಹಸಿನಃ ತಥಾ ।
ಸಕಲೇಶಸ್ಯಚ ಹರೇಃ ತೇಜಸಾ ಹತವಿಕ್ರಮಾಃ ॥೧೦॥

ಬಿಲೇಶಯಾ ಇವ ಸದಾ ವಿವರೇ ನಿವಸಂತಿ ಹಿ ।
ಯೇ ವೈ ವಾಗ್ಭಿಃ ಸರಮಯಾ ಶಕ್ರದೂತ್ಯಾ ನಿರಂತರಂ ॥೧೧॥

ಮಂತ್ರವರ್ಣಾಭಿರಸುರಾ ಸ್ತಾಡಿತಾ ಬಿಭ್ಯತಿಸ್ಮ ಹ ।
ತತೋಽಪ್ಯಧಸ್ತಾತ್ಪಾತಾಲೇ ನಾಗಲೋಕಾಧಿಪಾಲಕಾಃ ॥೧೨॥

ವಾಸುಕಿಪ್ರಮುಖಾಃ ಶಂಖಃ ಕುಲಿಕಃ ಶ್ವೇತವಿವ ಚ ।
ಧನಂಜಯೋ ಮಹಾಶಂಖೋ ಧೃತರಾಷ್ಟ್ರಸ್ತಥೈವ ಚ ॥೧೩॥

---

ಅವರು ಹುಟ್ಟುತ್ತಿದ್ದ ಹಾಗೆಯೇ ಮಹಾ ಪರಾಕ್ರಮಿಗಳಾಗಿಯೂ ಕಷ್ಟವಾದ ಕೆಲಸವನ್ನು ಸಾಧಿಸುವವರಾಗಿಯೂ ಆಗುವರು. ಇಂಥವರು ಸಮಸ್ತಕ್ಕೂ ಒಡೆಯನಾದ ಹರಿಯ ತೇಜಸ್ಸಿನಿಂದ ತಮ್ಮ ಪರಾಕ್ರಮವನ್ನು ಕಳೆದುಕೊಂಡು ಯಾವಾಗಲೂ ಸರ್ಪಗಳಂತೆ ಬಿಲಗಳಲ್ಲಿಯೇ ವಾಸಮಾಡುತ್ತಿರುವರು. ॥೧೦॥

ಆ ಪಣಿಗಳೆಂಬ ಅಸುರರು ಇಂದ್ರನ ದೂತಿಯಾದ ಸರಮಾ ಎಂಬ ಹೆಣ್ಣು ನಾಯಿಯ ಮಂತ್ರಾಕ್ಷರಗಳಿಂದ ಹೊಡೆಯಲ್ಪಟ್ಟವರಾಗಿ ಯಾವಾಗಲೂ ಭಯ ಪಡುತ್ತಿರುವರು.

ಈ ವಿಚಾರದಲ್ಲಿ ಒಂದು ಕಥೆಯು ಇರುವುದು. ಪಣಿಗಳೆಂಬ ರಾಕ್ಷಸರು ಒಂದು ಪಶುವನ್ನು ಕದ್ದು ಅದನ್ನು ಮುಚ್ಚಿಟ್ಟರು. ದೇವೇಂದ್ರನು ಅದನ್ನು ಹುಡುಕುವುದಕ್ಕಾಗಿ ಸರಮೆ ಎಂಬ ದೇವತೆಗಳ ನಾಯಿಯನ್ನು ಕಳುಹಿದನು. ಅದು ಬರುತ್ತಲು ಪಣಿಗಳು ಸಂಧಿ ಮಾಡಿಕೊಳ್ಳಬೇಕೆಂದು ಸರಮೆಯನ್ನು ಕುರಿತು "ಕಿಮಿಚ್ಛಂತೀ ಸರಮಾ" ಇತ್ಯಾದಿ ಮಂತ್ರಗಳಿಂದ ಕೇಳುವರು. ಸರಮೆಯು ಸಂಧಿಯನ್ನಪೇಕ್ಷಿಸದೆ ದೇವೇಂದ್ರನನ್ನು ಸ್ತೋತ್ರಮಾಡುತ್ತ ಅವರನ್ನು ಕುರಿತು "ಹತಾ ಇಂದ್ರೇಣ ಪಣಯಃ ಶಯಧ್ವಂ" ಇತ್ಯಾದಿ ಮಂತ್ರಗಳನ್ನು ಹೇಳುತ್ತಲು ಅಸುರರು ಅದನ್ನು ಕೇಳಿ ಹೆದರುವರು. ॥೧೧॥

ರಸಾತಲದಿಂದ ಕೆಳಗಡೆಗೆ ಪಾತಾಳ ಬಿಲವಿರುವುದು. ಅಲ್ಲಿ ವಾಸುಕಿ, ಶಂಖ, ಕುಲಿಕ, ಶ್ವೇತ, ಧನಂಜಯ, ಮಹಾಶಂಖ, ಧೃತರಾಷ್ಟ್ರ, ಶಂಖಚೂಡ, ಕಂಬಲ,

ಶಂಖಚೂಡಃ ಕಂಬಲಾಶ್ವತರೋ ದೇವೋಪದತ್ತಕಃ ।
ಮಹಾಮರ್ಷಾ ಮಹಾಭೋಗಾ ನಿವಸಂತಿ ವಿಷೋಲ್ಬಣಾಃ ॥೧೪॥

ಪಂಚಮಸ್ತಕವಂತಶ್ಚ ಫಣಾಸಪ್ತಕಭೂಷಿತಾಃ ।
ಕೇಚಿದ್ದಶಫಣಾಃ ಕೇಚಿಚ್ಛತಶೀರ್ಷಾಃ ತಥಾಪರೇ ॥೧೫॥

ಸಹಸ್ರಶಿರಸಃಕೇಽಪಿ ರೋಚಿಷ್ಣುಮಣಿಧಾರಕಾಃ ।
ಪಾತಾಲರಂಧ್ರತಿಮಿರನಿಕರಂ ಸ್ವಮರೀಚಿಭಿಃ ॥೧೬॥

ವಿಧಮಂತಿ ಚ ದೇವರ್ಷೇ ಸದಾ ಸಂಜಾತಮನ್ಯವಃ ।
ಅಸ್ಯಮೂಲಪ್ರದೇಶೋ ಹಿ ತ್ರಿಂಶತ್ಸಾಹಸ್ರಕೇಽಂತರೇ ॥೧೭॥

ಯೋಜನೈಃ ಪರಿಸಂಖ್ಯಾತೇ ತಾಮಸೀ ಭಗವತ್ಕಲಾ ।
ಅನಂತಾಖ್ಯಾ ಸಮಾಸ್ತೇ ಹಿ ಸರ್ವದೇವಪ್ರಪೂಜಿತಾ ॥೧೮॥

---

ಅಶ್ವತರ, ದೇವದತ್ತ ಎಂಬ ಮಹಾ ಕೋಪವೂ ದೊಡ್ಡ ಶರೀರವೂ ಹೆಚ್ಚಾದ ವಿಷವೂ, ಉಳ್ಳ ನಾಗಲೋಕ ಮುಖ್ಯರು ವಾಸಮಾಡುತ್ತಿರುವರು. ॥೧೨-೧೩-೧೪॥

ಆ ಸರ್ಪಗಳಲ್ಲಿ ಕೆಲವಕ್ಕೆ ಐದು, ಕೆಲವಕ್ಕೆ ಏಳು, ಮತ್ತೆ ಕೆಲವಕ್ಕೆ ಹತ್ತು, ಇನ್ನು ಕೆಲವಕ್ಕೆ ನೂರು, ಸಾವಿರ, ಈ ರೀತಿಯಾಗಿರುವ ಹೆಡೆಗಳು ಪ್ರಕಾಶಗಳಾದ ರತ್ನಗಳಿಂದ ಕೂಡಿ ಆ ರತ್ನಕಾಂತಿಗಳಿಂದ ಪಾತಾಳಲೋಕದ ಕತ್ತಲೆಯನ್ನು ನಾಶ ಮಾಡುತ್ತಿರುವುವು. ನಾರದನೇ, ಆ ಸರ್ಪಗಳು ಯಾವಾಗಲೂ ಕೋಪದಿಂದ ಕೂಡಿರುವುವು. ॥೧೫-೧೬॥

ಈ ಪಾತಾಲ ಲೋಕದ ಬುಡದಲ್ಲಿ ಮೂವತ್ತುಸಾವಿರ ಯೋಜನ ದೂರದಲ್ಲಿ ಅನಂತ ಎಂಬ ಹೆಸರನ್ನು ಹೊಂದಿದ ಸಮಸ್ತ ದೇವತೆಗಳೂ ಪೂಜೆ ಮಾಡತಕ್ಕ ಭಗವಂತನ ತಾಮಸ ಗುಣ ಪ್ರಧಾನವಾದ ಕಲೆಯಿರುವುದು. ॥೧೭-೧೮॥

ಆ ಕಲೆಯನ್ನು ಸಂಕರ್ಷಣನೆಂದು ಕರೆಯುವರು. ದ್ರಷ್ಟೃ ಎಂದರೆ ನೋಡ ತಕ್ಕವನು. ದೃಶ್ಯ ಎಂದರೆ ನೋಡತಕ್ಕ ವಸ್ತು. ಇವೆರಡರ ಏಕೀಕರಣವನ್ನು ಸಂಕರ್ಷಣನೆಂದೂ, ಇದೇ ಅಹಂಕಾರಕ್ಕೆ ಕಾರಣವೆಂದೂ, ಅಭಿಮಾನವೇ ಅದರ ಲಕ್ಷಣವೆಂದೂ ಸಾತ್ವತೀಯರು ಹೇಳುವರು. (ಸಾತ್ವತೀಯರು=ಆ ಲೋಕವಾಸಿಗಳು) ॥೧೯॥

ಅಹಮಿತ್ಯಭಿಮಾನಸ್ಯ ಲಕ್ಷಣಂ ಯಂ ಪ್ರಚಕ್ಷತೇ ।
ಸಕರ್ಷಣಂ ಸಾತ್ವತೀಯಾಃ ಕರ್ಷಣಂ ದ್ರಷ್ಟೃದೃಶ್ಯಯೋಃ ॥೧೯॥

ಇದಂ ಭೂಮಂಡಲಂ ಯಸ್ಯ ಸಹಸ್ರಶಿರಸಃ ಪ್ರಭೋಃ ।
ಅನಂತಮೂರ್ತೇಃ ಶೇಷಸ್ಯ ಧ್ರಿಯಮಾಣಂ ಚ ಶೀರ್ಷಕೇ ॥೨೦॥

ಪೃಥ್ವೀಗೋಲಮಶೇಷಂ ಹಿ ಸಿದ್ಧಾರ್ಥ ಇವ ಲಕ್ಷ್ಯತೇ ।
ಯಸ್ಯ ಕಾಲೇನ ದೇವಸ್ಯ ಸಂಜಿಹೀರ್ಷೋಃ ಸಮಂ ವಿಭೋಃ ॥೨೧॥

ಚರಾಚರಂ ಭ್ರುವೋರಂತರ್ವಿವರಾದುಪಪದ್ಯತೇ ।
ಸಾಂಕರ್ಷಣೋನಾಮ ರುದ್ರೋ ವ್ಯೂಹೈಕಾದಶಶೋಭಿತಃ ॥೨೨॥

ತ್ರಿಲೋಚನಶ್ಚ ತ್ರಿಶಿಖಂ ಶೂಲಮುತ್ತಂಭಯನ್ಸ್ವಯಂ ।
ಉದತಿಷ್ಠನ್ಮಹಾಸತ್ತ್ವೋ ಮಹಾಭೂತಕ್ಷಯಂಕರಃ ॥೨೩॥

ಯಸ್ಯಾಂಘ್ರಿಕಮಲದ್ವಂದ್ವ ಶೋಣಾಚ್ಛ ನಖಮಂಡಲೇ ।
ವಿರಾಜನ್ಮಣಿಬಿಂಬೇಷು ಮಹಾಹಿಪತಯೋಽನಿಶಂ ॥೨೪॥

ಏಕಾಂತಭಕ್ತಿಯೋಗೇನ ಸಹ ಸಾತ್ವತಪುಂಗವೈಃ ।
ಪ್ರಣಮಂತಃ ಸ್ವಮೂರ್ಧ್ನಾ ತೇ ಸ್ವಮುಖಾನಿ ಸಮೀಕ್ಷತೇ ॥೨೫॥

---

ಈ ಭೂಮಂಡಲವು ಸಾವಿರ ತಲೆಯುಳ್ಳ ಅನಂತಮೂರ್ತಿಯ ತಲೆಯ ಮೇಲೆ ಒಂದು ಸಾಸುವೆಯ ಕಾಳಿನಂತೆ ಕಾಣುತ್ತಿರುವುದು. ॥೨೦॥

ಈ ಸಮಸ್ತ ಚರಾಚರ ಪ್ರಾಣಿಗಳಿಂದ ಕೂಡಿದ ಪ್ರಪಂಚಕ್ಕೆ ನಾಶಕಾಲವು ಬಂದರೆ ಆಗ ಆ ಸಂಕರ್ಷಣಮೂರ್ತಿಯ ಹುಬ್ಬುಗಳ ನಡುವೆ ಇರುವ ಒಂದು ರಂಧ್ರದ ದೆಸೆಯಿಂದ ॥೨೧॥

ಏಕಾದಶ ರುದ್ರರಲ್ಲೊಬ್ಬನಾದ ಸಂಕರ್ಷಣನೆಂಬ ರುದ್ರನು ಮೂರು ಕಣ್ಣುಳ್ಳವನಾಗಿಯೂ, ಮೂರು ಮೊನೆಯುಳ್ಳ ಶೂಲವನ್ನು ಹಿಡಿದುಕೊಂಡವನಾಗಿಯೂ, ಮಹಾ ಬಲವುಳ್ಳವನಾಗಿ ಪಂಚಮಹಾಭೂತಗಳನ್ನೂ ನಾಶಮಾಡತಕ್ಕವನಾಗಿ ಹುಟ್ಟಿದನು. ॥೨೨-೨೩॥

ಯಾವ ಸಂಕರ್ಷಣಮೂರ್ತಿಯ ಪಾದಕಮಲದಲ್ಲಿರುವ ಕೆಂಪಾಗಿಯೂ, ಶುದ್ಧವಾಗಿಯೂ ರತ್ನಕನ್ನಡಿಯಂತೆ ಇರುವ ಉಗುರುಗಳಲ್ಲಿ ಆ ದೇವನಿಗೆ ಭಕ್ತಿ

ಸ್ಫುರತ್ಕುಂಡಲಮಾಣಿಕ್ಯ ಪ್ರಭಾಮಂಡಲಭಾಂಜ್ಯಪಿ ।
ಸುಕಪೋಲಾನಿ ಚಾರೂಣಿ ಗಂಡಸ್ಥಲದ್ಯುಮಂತಿ ಚ ॥೨೬॥

ನಾಗರಾಜಕುಮಾರ್ಯೋಽಪಿ ಚಾರ್ವಂಗವಿಲಸತ್ತ್ವಿಷಃ ।
ವಿಶದೈರ್ವಿಪುಲೈಸ್ತದ್ವದ್ಧವಲೈಃ ಸುಭಗೈಸ್ತಥಾ ॥೨೭॥

ರುಚಿರೈರ್ಭುಜದಂಡೈಶ್ಚ ಶೋಭಮಾನಾ ಇತಸ್ತತಃ ।
ಚಂದನಾಗರುಕಾಶ್ಮೀರಪಂಕಲೇಪೇನ ಭೂಷಿತಾಃ ॥೨೮॥

ತದಭಿಮರ್ಶಸಂಜಾತಕಾಮವೇಶಸಮಾಯುತಾಃ ।
ಲಲಿತಸ್ಮಿತಸಂಯುಕ್ತಾಃ ಸವ್ರೀಡಂ ಲೋಕಯಂತಿ ಚ ॥೨೯॥

ಅನುರಾಗಮದೋನ್ಮತ್ತವಿಘೂರ್ಣಾರುಣಲೋಚನಂ ।
ಕರುಣಾವಲೋಕನೇತ್ರಂ ಚ ಆಶಾಸಾನಾಸ್ತಥಾಶಿಷಃ ॥೩೦॥

---

ಯಿಂದ ನಮಸ್ಕಾರ ಮಾಡುವ ಸರ್ಪಾಧಿಪತಿಗಳೂ ಸಾತ್ವತಶ್ರೇಷ್ಠರೂ ತಮ್ಮ ಮುಖಗಳನ್ನು ನೋಡಿಕೊಳ್ಳುವರು. ॥೨೪-೨೫॥

ನಾಗರಾಜನ ಹೆಣ್ಣುಮಕ್ಕಳುಗಳು ತಮ್ಮ ಕಿವಿಗಳಲ್ಲಿರುವ ಆಭರಣದ ರತ್ನಗಳಿಂದ ಸೊಗಸಾದ ತಮ್ಮ ಕೆನ್ನೆಗಳು ಪ್ರಕಾಶಿಸುತ್ತಿರಲು, ಬೆಳ್ಳಗಿರುವ ತಮ್ಮ ಮೃದುವಾದ ಅವಯವಗಳು ಕಾಂತಿಯನ್ನು ಹರಡುತ್ತಿರಲು ಉದ್ದವಾದ ಕಾಂತಿಯುಕ್ತವಾದ ತೋಳುಗಳಿಂದ ಪ್ರಕಾಶಿಸುತ್ತ ಶ್ರೀಗಂಧ ಅಗರು ಕೇಸರಿ ಗಂಧಗಳನ್ನು ಬಳಿದುಕೊಂಡು ಆ ಸಂಕರ್ಷಣಮೂರ್ತಿಯ ನೋಟದಿಂದುಂಟಾದ ಕಾಮಾವೇಶವುಳ್ಳವರಾಗಿ ಮನೋಹರವಾದ ನಗುವಿನಿಂದ ಕೂಡಿ ನಾಚಿಕೆಯಿಂದ ಆ ಸಂಕರ್ಷಣಮೂರ್ತಿಯನ್ನು ನೋಡುವರು. ॥೨೬-೨೭-೨೮-೨೯॥

ಮತ್ತು ಅನುರಾಗ ವಿಶೇಷದಿಂದ ಮದಿಸಿದ ಕೆಂಪಾದ ಕಣ್ಣುಗಳುಳ್ಳ ಆ ಸಂಕರ್ಷಣಮೂರ್ತಿಯ ಕರುಣಾದೃಷ್ಟಿಯನ್ನೂ ಅವನ ಆಶೀರ್ವಾದವನ್ನೂ ಅಪೇಕ್ಷಿಸುತ್ತಿರುವರು. ॥೩೦॥

ಸೋಽನಂತೋ ಭಗವಾನ್‌ದೇವೋಽನಂತಸಕ್ತೋ ಮಹಾಶಯಃ ।
ಅನಂತಗುಣವಾರ್ಧಿಶ್ಚ ಆದಿದೇವೋ ಮಹಾದ್ಯುತಿಃ ॥೩೧॥

ಸಂಹೃತಾಮರ್ಷರೋಷಾದಿವೇಗೋ ಲೋಕಶುಭಾಯ ಚ ।
ಆಸ್ತೇ ಮಹಾಸತ್ವನಿಧಿಃ ಸರ್ವದೇವಪ್ರಪೂಜಿತಃ ॥೩೨॥

ಧ್ಯಾಯಮಾನಃ ಸುರೈಃ ಸಿದ್ಧೈರಸುರೈಶ್ಚೋರಗೈಸ್ತಥಾ ।
ವಿದ್ಯಾಧರೈಶ್ಚ ಗಂಧರ್ವೈಃ ಮುನಿಸಂಘೈಶ್ಚ ನಿತ್ಯಶಃ ॥೩೩॥

ಅನಾರತಮುದೋನ್ಮತ್ತಲೋಕವಿಹ್ವಲಲೋಚನಃ ।
ವಾಕ್ಯಾಮೃತೇನ ವಿಬುಧಾನ್ ಸ್ವಪಾರ್ಷದಗಣಾನಪಿ ॥೩೪॥

ಆಪ್ಯಾಯಮಾನಃ ಸ ವಿಭುರ್ವೈಜಯಂತೀಂ ಸ್ರಜಂ ದಧತ್ ।
ಅಮ್ಲಾನಾಭಿನವೈಃ ಸ್ವಚ್ಛೈಃ ತುಲಸೀದಲಸಂಚಯೈಃ ॥೩೫॥

ಮಾದ್ಯನ್ಮಧುಕರವ್ರಾತಘೋಷಶ್ರೀಸಂಯುತಾಂ ಸದಾ ।
ನೀಲವಾಸಾ ದೇವದೇವಃ ಏಕಕುಂಡಲಭೂಷಿತಃ ॥೩೬॥

---

ಮಹಾಪರಾಕ್ರಮಿಯೂ, ಕೀರ್ತಿವಂತನೂ, ಅನೇಕ ಸದ್ಗುಣಗಳುಳ್ಳವನೂ, ಕಾಂತಿವುಳ್ಳವನೂ ಆದ ಆ ಅನಂತದೇವನು ಲೋಕಕ್ಷೇಮಕ್ಕಾಗಿ ತನ್ನ ಕೋಪವನ್ನು ನಿಗ್ರಹಿಸಿ ಸತ್ವಗುಣದಿಂದ ಕೂಡಿ ಯಾವಾಗಲೂ ದೇವತೆಗಳೂ ಸಿದ್ಧರೂ, ಉರಗರೂ, ವಿದ್ಯಾಧರರೂ, ಗಂಧರ್ವರೂ, ಮುನಿಗಳೂ ತನ್ನನ್ನು ಧ್ಯಾನಮಾಡುತ್ತಿರಲು ಅವರ ಪೂಜೆಯನ್ನು ಸ್ವೀಕರಿಸುತ್ತಿರುವನು. ॥೩೧-೩೨-೩೩॥

ಆ ಸಂಕರ್ಷಣಮೂರ್ತಿಯು ಯಾವಾಗಲೂ ಮದಿಸಿದ ಜನರಿಗೆ ಭಯವನ್ನುಂಟುಮಾಡುವ ನೋಟವುಳ್ಳವನಾಗಿ ತನ್ನ ಸಭೆಯಲ್ಲಿರುವ ಜನರಿಗೂ ದೇವತೆಗಳಿಗೂ ಅಮೃತದಂತೆ ಹಿತವಾದ ಮಾತನ್ನಾಡಿ ಸಂತೋಷಪಡಿಸುತ್ತ ಬಾಡದಿರುವ ಆಗತಾನೆ ಕೊಯ್ದುದೂ ಪರಿಶುದ್ಧವೂ ಆದ ತುಲಸೀದಳಗಳಿಂದ ಕೂಡಿ ದುಂಬಿಗಳು ಮುತ್ತಿ ಧ್ವನಿಮಾಡುತ್ತಿರುವ ವೈಜಯಂತಿಯೆಂಬ ಹೂಮಾಲೆಯನ್ನು ಧರಿಸಿರುವನು. ॥೩೪-೩೫॥

ನೀಲವಸ್ತ್ರವನ್ನುಟ್ಟು ಒಂದೇ ಒಂದು ಕುಂಡಲವನ್ನು ಧರಿಸಿ ಹಲಾಯುಧದ ತಲೆಯ ಮೇಲಿಟ್ಟಿರುವ ದಪ್ಪತೋಳುಗಳಿಂದ ಕೂಡಿ ವಿಸ್ತಾರವಾದ ಮಹಿಮೆಯುಳ್ಳ

ಹಲಸ್ಯ ಕಕುದಿ ನ್ಯಸ್ತ ಸುಪೀವರ ಭುಜೋಽನ್ವಯಃ ।
ಮಹೇಂದ್ರಃ ಕಾಂಚನೀಂ ಯದ್ವದ್ವರತ್ರಾಂ ಚ ಮತಂಗಮಃ ॥೩೭॥
ಉದಾರಲೀಲೋ ದೇವೇಶೋ ವರ್ಣಿತಃ ಸಾತ್ವಕ(ತ)ರ್ಷಭೈಃ ।

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಅಷ್ಟಮಸ್ಕಂಧೇ
ವಿಂಶೋಽಧ್ಯಾಯಃ

---

ಅನಂತಮೂರ್ತಿಯನ್ನು ಸಾತ್ವತಶ್ರೇಷ್ಠರು ವರ್ಣಿಸುತ್ತಿರುವರು. ದೇವೇಂದ್ರನು ಸ್ವರ್ಣಮಯವಾದ ದೇವೀಮೂರ್ತಿಯನ್ನು ಹೇಗೆ ಪೂಜಿಸುವನೋ ಹಾಗೆಯೇ ಅನಂತಮೂರ್ತಿಯೂ ಸ್ವರ್ಣಮಯವಾದ ದೇವೀಮೂರ್ತಿಯನ್ನು ಪೂಜಿಸುವನೆಂದು ಅಭಿಪ್ರಾಯವು. ||೩೬-೩೭||

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಎಂಟನೆಯ ಸ್ಕಂಧದಲ್ಲಿ
ಇಪ್ಪತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಅಷ್ಟಮಸ್ಕಂಧೇ

॥ ಏಕವಿಂಶೋಽಧ್ಯಾಯಃ ॥

### ಇಪ್ಪತ್ತೊಂದನೆಯ ಅಧ್ಯಾಯವು

॥ ಶ್ರೀನಾರಾಯಣ ಉವಾಚ ॥

ತಸ್ಯಾನುಭಾವಂ ಭಗವಾನ್ ಬ್ರಹ್ಮಪುತ್ರಸ್ಸನಾತನಃ ।
ಸಭಾಯಾಂ ಬ್ರಹ್ಮದೇವಸ್ಯ ಗಾಯಮಾನ ಉಪಾಸತೇ ॥೧॥

ಉತ್ಪತ್ತಿಸ್ಥಿತಿಲಯಹೇತವೋಽಸ್ಯ ಕಲ್ಪಾಃ
ಸತ್ವಾದ್ಯಾಃ ಪ್ರಕೃತಿಗುಣಾ ಯದೀಕ್ಷಯಾಽಽಸನ್ ।
ಯದ್ರೂಪಂ ಧ್ರುವಮಕೃತಂ ಯದೇಕಮಾತ್ಮ
ನ್ನಾನಾಽಧಾತ್ಕಥಮುತ ವೇದ ತಸ್ಯ ವರ್ತ್ಮ ॥೨॥

---

ನಾರಾಯಣನು ಹೇಳಿದನು—ಆ ಅನಂತನ ಮಹಿಮೆಯನ್ನು ಭಗವಂತನೂ, ನಿತ್ಯನೂ, ಬ್ರಹ್ಮನ ಮಗನೂ, ಆದ ನಾರದ ಮಹರ್ಷಿಯು ಬ್ರಹ್ಮದೇವನ ಸಭೆಯಲ್ಲಿ ಹೀಗೆ ಗಾನಮಾಡುತ್ತಾ ಉಪಾಸನೆಮಾಡುತ್ತಿರುವನು. ॥೧॥

ಈ ಪ್ರಪಂಚದ ಸೃಷ್ಟಿ, ರಕ್ಷಣೆ, ಉಪಸಂಹಾರಗಳಿಗೆ ಕಾರಣವಾದ ಪ್ರಕೃತಿಯಲ್ಲಿರುವ ಸತ್ವರಜಸ್ತಮಸ್ ಎಂಬ ಗುಣಗಳೂ ಯಾವ ಅನಂತ ತತ್ವದ ಈಕ್ಷಣಾನುಗ್ರಹಮಾತ್ರದಿಂದಲೇ ತಮ್ಮ ತಮ್ಮ ಕಾರ್ಯಗಳನ್ನು ನೆರವೇರಿಸಲು ಸಮರ್ಥಗಳಾಗುತ್ತವೋ, ಯಾರ ವಾಸ್ತವಸ್ವರೂಪವು ನಿತ್ಯವೂ, ಜನ್ಯವಲ್ಲದ್ದೂ, ನಿರ್ವಿಕಾರವಾಗಿ ಒಂದೇ ಆಗಿದೆಯೋ, ಯಾವುದು ತನ್ನಲ್ಲಿಯೇ ಅನೇಕವಾದ ಈ ಪ್ರಪಂಚವನ್ನು ಉಂಟುಮಾಡಬಲ್ಲದೋ, ಆ ಪರಬ್ರಹ್ಮತತ್ವದ ರೀತಿನೀತಿಗಳನ್ನು ಇಷ್ಟೇ, ಹೀಗೆಯೇ, ಎಂದು ಯಾರುತಾನೇ ತಿಳಿಯಬಲ್ಲರು? ॥೨॥

ಮೂರ್ತಿಂ ನಃ ಪುರುಕೃಪಯಾ ಬಭಾರ ಸತ್ತ್ವಂ
ಸಂಶುದ್ಧಂ ಸದಸದಿದಂ ವಿಭಾತಿ ಯತ್ರ ।
ಯಲ್ಲೀಲಾಂ ಮೃಗಪತಿರಾದದೇಽನವದ್ಯಾ-
ಮಾದಾತುಂ ಸ್ವಜನಮನಾಂಸ್ಯುದಾರವೀರ್ಯಃ ॥೩॥

ಯನ್ನಾಮಶ್ರುತಮನುಕೀರ್ತಯೇದಕಸ್ಮಾ-
ದಾರ್ತೋ ವಾ ಯದಿ ಪತಿತಃ ಪ್ರಲಂಭನಾದ್ವಾ ।
ಹಂತ್ಯಂಹಸ್ಸಪದಿ ನೃಣಾಮಶೇಷಮನ್ಯಂ
ಕಂ ಶೇಷಾದ್ಭಗವತ ಆಶ್ರಯೇನ್ಮುಮುಕ್ಷುಃ ॥೪॥

ಮೂರ್ಧನ್ಯರ್ಪಿತಮಣಿವತ್ಸಹಸ್ರಮೂರ್ಧ್ನೋ-
ಭೂಗೋಲಂ ಸಗಿರಿಸರಿತ್ಸಮುದ್ರಸತ್ತ್ವಂ ।

---

ಯಾವ ಅನಂತ ಬ್ರಹ್ಮತತ್ವದ ಸಾಮರ್ಥ್ಯಗಳು ಅಪರಿಮಿತವಾಗಿವೆಯೋ, ಯಾವ ಆ ತತ್ವದಲ್ಲಿ ಕಾರ್ಯಕಾರಣಾತ್ಮಕವಾದ ಈ ಪ್ರಪಂಚವು ಇದ್ದು ತೋರುತ್ತಿದೆಯೋ, ಆ ಬ್ರಹ್ಮಚೈತನ್ಯವೇ ಭಕ್ತರಾದ ನಮ್ಮಲ್ಲಿ ದಯಾಪೂರ್ವಕವಾದ ಅನುಗ್ರಹ ಬುದ್ಧಿಯಿಂದ ನಮ್ಮ ಮನಸ್ಸನ್ನು ಒಲಿಸಿಕೊಳ್ಳುವಂತಹ ಅನೇಕ ಮೂರ್ತಿಗಳನ್ನು ಧರಿಸುತ್ತಿರುತ್ತದೋ, ಯಾರ ವಾಹನವಾದ ಸಿಂಹವೂ ತನ್ನ ಪರಾಕ್ರಮ ವಿಲಾಸಗಳನ್ನು ಯಾರಿಂದ ತಿಳಿದುಕೊಂಡಿದೆಯೋ, ಆ ಮಹಾಮಾಯಾ ರೂಪವೂ ಆದ ಚೈತನ್ಯವನ್ನು ಬಿಟ್ಟು ಮತ್ತೆ ಯಾವ ತತ್ವವನ್ನು ತಾನೇ ಮುಮುಕ್ಷುಗಳಾದವರು ಆಶ್ರಯಿಸಿ ಕೃತಾರ್ಥರಾಗಬಲ್ಲರು ? ॥೩॥

ಯಾರು ಆ ಆದಿಶೇಷನ ನಾಮಸ್ಮರಣೆಯನ್ನು ಅಕಸ್ಮಾತ್ತಾಗಿಯಾದರೂ ಮಾಡುವರೋ, ದುಃಖಿತರಾಗಿದ್ದರೂ, ಪಾಪಿಷ್ಠರಾಗಿದ್ದರೂ ಆ ಅನಂತನ ನಾಮಗಳನ್ನು ಯಾರು ಸ್ಮರಿಸುವರೋ, ಪರಿಹಾಸಕ್ಕಾದರೂ ಯಾರು ಆ ಶೇಷನ ನಾಮೋಚ್ಚಾರಣೆಯನ್ನು ಮಾಡುವರೋ, ಅಂಥ ಎಲ್ಲ ಜನರ ಪಾಪಗಳನ್ನೂ ತತ್ಕ್ಷಣದಲ್ಲಿ ಹೋಗಲಾಡಿಸುವ ಭಗವಂತನಾದ ಆದಿಶೇಷನನ್ನು ಬಿಟ್ಟು ಬೇರೆ ಯಾರನ್ನು ತಾನೇ ಮೋಕ್ಷಾರ್ಥಿಯು ಆಶ್ರಯಿಸುವನು. ॥೪॥

ಆ ಅನಂತ ತತ್ವರೂಪನಾದ ಸಾವಿರ ತಲೆಗಳುಳ್ಳ ಆದಿಶೇಷನ ಹೆಡೆಯಲ್ಲಿರುವ ರತ್ನದಂತೆ, ಬೆಟ್ಟ, ನದಿ, ಸಾಗರ, ಪ್ರಾಣಿಗಳು ಇವೇ ಮುಂತಾದುವುಗಳಿಂದ ಕೂಡಿದ

ಆನಂತ್ಯಾದನಮಿತವಿಕ್ರಮಸ್ಯ ಭೂಮ್ನಃ
ಕೋ ವೀರ್ಯಾಣ್ಯಧಿಗಣಯೇತ್ಸಹಸ್ರಜಿಹ್ವಃ ॥೫॥

ಏವಂಪ್ರಭಾವೋ ಭಗವಾನನಂತೋ
ದುರಂತವೀರ್ಯೋರುಗುಣಾನುಭಾವಃ ।
ಮೂಲೇ ರಸಾಯಾಃ ಸ್ಥಿತಆತ್ಮತಂತ್ರೋ
ಯೋ ಲೀಲಯಾ ಕ್ಷ್ಮಾಂ ಸ್ಥಿತಯೇ ಬಿಭರ್ತಿ ॥೬॥

ಏತಾ ಹ್ಯೇವೇಹ ತು ನೃಭಿಃ ಗತಯೋ ಮುನಿಸತ್ತಮ ।
ಗಂತವ್ಯಾ ಬಹುಶೋ ಯದ್ವದ್ಯಥಾಕರ್ಮವಿನಿರ್ಮಿತಾಃ ॥೭॥

ಯಥೋಪದೇಶಂ ಚ ಕಾಮಾನ್ಯದಾ ಕಾಮಯಮಾನಕೈಃ ।
ಏತಾವತೀರ್ಹಿ ರಾಜೇಂದ್ರ ಮನುಷ್ಯಮೃಗಪಕ್ಷಿಷು ॥೮॥

---

ಈ ಪ್ರಪಂಚವೇ ಆಶ್ರಯವನ್ನು ಪಡೆದಿದೆಯೋ, ಮತ್ತು ಆ ದೇವನ ಮಹಿಮೆಯು ಅಪಾರವಾಗಿಯೂ, ಯಾರಿಗೂ ಬಗ್ಗದಿರುವುದೂ ಆಗಿರುವುದೋ, ಅಂತಹ ಆದಿಶೇಷನ ಸಾಮರ್ಥ್ಯಗಳನ್ನು ಅನೇಕ ನಾಲಿಗೆಗಳುಳ್ಳವನೂ ವರ್ಣಿಸಿ ಮುಗಿಸಲಾರನು. ಇನ್ನು ಒಂದೇ ನಾಲಿಗೆಯುಳ್ಳವರು ಹೇಗೆ ವಿವರಿಸಿ ಮುಗಿಸಬಲ್ಲರು ? ॥೫॥

ಅಂತವಿಲ್ಲದ ಪರಾಕ್ರಮವೇ ಮೊದಲಾದ ಅನೇಕ ಸುಗುಣಗಳಿಂದ ಕೂಡಿರುವ ಇಂಥಾ ಮಹಾಮಹಿಮನಾದ ಭಗವಂತನಾದ ಆದಿಶೇಷನು ಪ್ರಪಂಚದ ಇರುವಿಕೆಗೆ ಕಾರಣಭೂತವಾದ ಭೂಮಿಯನ್ನು ತನ್ನ ಇಚ್ಛಾನುಸಾರವಾಗಿ ಅನಾಯಾಸದಿಂದಲೇ ಪಾತಾಳದಲ್ಲಿಟ್ಟುಕೊಂಡು ಹೊತ್ತಿರುವನು. ॥೬॥

ಎಲೈ ಋಷಿಶ್ರೇಷ್ಠನೇ, ತಮ್ಮ ತಮ್ಮ ಕರ್ಮಗಳಿಗೆ ಅನುಸಾರವಾಗಿ ಜನಗಳು ಹೊಂದತಕ್ಕ ಗತಿಗಳೂ ಸಹ ಇವುಗಳೇ ಆಗಿರುತ್ತವೆ. ॥೭॥

ಎಲೈ ರಾಜಶ್ರೇಷ್ಠನೇ ತಾವು ಹೊಂದಿದ ಉಪದೇಶವಾಕ್ಯಗಳಿಗೆ ಅನುಸಾರವಾಗಿ ತಮ್ಮ ತಮ್ಮ ಇಷ್ಟಾರ್ಥಗಳನ್ನು ಹೊಂದಲು ಪ್ರಯತ್ನಪಡುವ ಮನುಷ್ಯ, ಮೃಗ, ಪಕ್ಷಿ, ಇವರು ಹೊಂದುವ ಗತಿಗಳೂ ಸಹ ಇವುಗಳೇ ಆಗಿರುತ್ತವೆ. ॥೮॥

ವಿಪಾಕಗತಯಃ ಪ್ರೋಕ್ತಾ ಧರ್ಮಸ್ಯ ವಶಗಾಸ್ತಥಾ ।
ಉಚ್ಚಾವಚಾ ವಿಸದೃಶಾ ಯಥಾಪ್ರಶ್ನಂ ನಿಬೋಧತ ॥೯॥

॥ ನಾರದ ಉವಾಚ ॥

ವೈಚಿತ್ರ್ಯಮೇತಲ್ಲೋಕಸ್ಯ ಕಥಂ ಭಗವತಾ ಕೃತಂ ।
ಸಮಾನತ್ವೇ ಕರ್ಮಣಾಂ ಚ ತನ್ನೋ ಬ್ರೂಹಿ ಯಥಾತಥಂ ॥೧೦॥

॥ ನಾರಾಯಣ ಉವಾಚ ॥

ಕರ್ತುಃ ಶ್ರದ್ಧಾವಶಾದೇವ ಗತಯೋಽಪಿ ಪೃಥಗ್ವಿಧಾಃ ।
ತ್ರಿಗುಣತ್ವಾತ್ಸದಾ ತಾಸಾಂ ಫಲಂ ವಿಸದೃಶಂ ತ್ವಿಹ ॥೧೧॥

ಸಾತ್ವಿಕ್ಯಾ ಶ್ರದ್ಧಯಾ ಕರ್ತುಃ ಸುಖಿತ್ವಂ ಜಾಯತೇ ಸದಾ ।
ದುಃಖಿತ್ವಂ ಚ ತಥಾ ಕರ್ತೂರಾಜಸ್ಯಾ ಶ್ರದ್ಧಯಾ ಭವೇತ್ ॥೧೨॥

---

ಕರ್ಮವಿಪಾಕ ಮುಂತಾದ ಧರ್ಮಶಾಸ್ತ್ರವಿಧಿಗನುಸಾರವಾಗಿ ಉತ್ಕೃಷ್ಟಾಪಕೃಷ್ಟಗಳೂ ಭಿನ್ನ ಭಿನ್ನ ಗಳೂ ಆದ ಕರ್ಮಗತಿಗಳು ನಿನ್ನ ಪ್ರಶ್ನೆಗೆ ತಕ್ಕಂತೆ ಹೇಳಲ್ಪಟ್ಟಿರುವುವು. ॥೯॥

ನಾರದನು ಹೇಳಿದನು—ಕರ್ಮಗಳು ಎಲ್ಲ ಜನರಿಗೂ ಒಂದೇ ವಿಧವಾಗಿರುವುವು. ಆದರೆ ಭಗವಂತನು ಈ ಲೋಕದಲ್ಲಿ ಒಬ್ಬೊಬ್ಬರಿಗೆ ಒಂದೊಂದು ವಿಧವಾದ ಗತಿಯನ್ನು ಕಲ್ಪಿಸಿರುವನು. ಈ ಆಶ್ಚರ್ಯವಾದ ಪ್ರವೃತ್ತಿಗೆ ನಿಜವಾದ ಕಾರಣವನ್ನು ಹೇಳಬೇಕು. ॥೧೦॥

ನಾರಾಯಣನು ಹೇಳಿದನು—ಕರ್ಮಗಳನ್ನು ಮಾಡುವ ಜನರೆಲ್ಲರೂ ತ್ರಿಗುಣರೂಪವಾದ ಮಾಯಾಶಕ್ತಿಯಿಂದ ಕೂಡಿರುವುದರಿಂದ ಅವರು ಹೊಂದುವ ಗತಿಗಳೂ ಕೂಡ ಅನೇಕ ಪ್ರಕಾರಗಳಾಗಿರುವುವು. ಆ ಕರ್ಮಗಳೂಸಹ ಸಾತ್ವಿಕ ರಾಜಸ ತಾಮಸ ರೂಪವಾದ ಗುಣತ್ರಯದ ಹೆಚ್ಚು ಕಡಿಮೆಗಳಿಂದ ಭಿನ್ನವಾಗಿರುವುದರಿಂದ ಫಲಗಳೂ ಸಹ ಭಿನ್ನವಾಗಿರುವುವು. ॥೧೧॥

ಸತ್ವಗುಣವುಳ್ಳವನಾಗಿಯೂ ಶ್ರದ್ಧೆಯಿಂದ ಕೂಡಿದವನಾಗಿಯೂ ಇದ್ದು ಕರ್ಮವನ್ನು ಮಾಡಿದರೆ ಯಾವಾಗಲೂ ಸುಖವೇ ಉಂಟಾಗುವುದು. ರಜೋಗುಣದಿಂದ ಕೂಡಿ ಅಶ್ರದ್ಧೆಯಿಂದ ಕರ್ಮಾಚರಣೆಯನ್ನು ಮಾಡುವವನು ದುಃಖವನ್ನು ಹೊಂದುವನು. ॥೧೨॥

ದುಃಖಿತ್ವಂಚೈವ ಮೂಢತ್ವಂ ತಾಮಸ್ಯಾಶ್ರಾದ್ಧಯೋದಿತಂ ।
ತಾರತಮ್ಯಾತ್ತು ಶ್ರದ್ಧಾನಾಂ ಫಲವೈಚಿತ್ರ್ಯವಿಾರಿತಂ ॥೧೩॥

ಅನಾದ್ಯವಿದ್ಯಾವಿಹಿತಕರ್ಮಣಾಂ ಪರಿಣಾಮಜಾಃ ।
ಸಹಸ್ರಶಃ ಪ್ರವೃತ್ತಾಸ್ತು ಗತಯೋ ದ್ವಿಜಪುಂಗವ ॥೧೪॥

ತದ್ಭೇದಾನ್ವರ್ಣಯಿಷ್ಯಾಮಿ ಪ್ರಾಚುರ್ಯೇಣ ದ್ವಿಜೋತ್ತಮ ।
ತ್ರಿಜಗತ್ಯಾ ಅಂತರಾಲೇ ದಕ್ಷಿಣಸ್ಯಾಂ ದಿಶೀಹ ವೈ ॥೧೫॥

ಭೂಮೇರಧಸ್ತಾದುಪರಿ ತ್ವತಲಸ್ಯ ಚ ನಾರದ ।
ಅಗ್ನಿಷ್ವಾತ್ತಾಃ ಪಿತೃಗಣಾ ವರ್ತಂತೇ ಪಿತರಶ್ಚ ಹ ॥೧೬॥

ವಸಂತಿ ಯಸ್ಯಾಂ ಸ್ವೀಯಾನಾಂ ಗೋತ್ರಾಣಾಂ ಪರಮಾಶಿಷಃ ।
ಸತ್ಯಾಃ ಸಮಾಧಿನಾ ಶೀಘ್ರಂ ತ್ವಾಶಾಸಾನಾಃ ಪರೇಣ ವೈ ॥೧೭॥

---

ತಮೋಗುಣದಿಂದಲೂ ಅಶ್ರದ್ಧೆಯಿಂದಲೂ ಕರ್ಮವನ್ನು ಆಚರಿಸಿದರೆ ದುಃಖವು ಸಂಭವಿಸುವುದು. ಹೀಗೆ ಶ್ರದ್ಧೆಯಲ್ಲಿ ವ್ಯತ್ಯಾಸವಿರುವುದರಿಂದ ಫಲದಲ್ಲೂ ವ್ಯತ್ಯಾಸವಿರುವುದು. ॥೧೩॥

ಎಲೈ ಬ್ರಾಹ್ಮಣಶ್ರೇಷ್ಠನೇ, ಅನಾದಿಯಾದ ಅಜ್ಞಾನದಿಂದ ಮಾಡಲ್ಪಟ್ಟ ಕರ್ಮಗಳಿಗೆ ಫಲರೂಪಗಳಾಗಿ ಸಾವಿರಾರು ಭೇದಗಳಿಂದ ಸದ್ಗತಿದುರ್ಗತಿಗಳು ಹೊರಟಿರುವುವು. ॥೧೪॥

ಎಲೈ ಬ್ರಾಹ್ಮಣಶ್ರೇಷ್ಠನೇ, ಆಗತಿಗಳ ಭೇದಗಳನ್ನು ವಿಶೇಷವಾಗಿ ವರ್ಣಿಸುವೆನು. ಮೂರು ಲೋಕಗಳ ಅಂತರಾಳದಲ್ಲಿ ದಕ್ಷಿಣದಿಕ್ಕಿನಲ್ಲಿ ॥೧೫॥

ಭೂಮಿಯ ಕೆಳಭಾಗಕ್ಕೂ ಅತಲಲೋಕದ ಮೇಲುಭಾಗಕ್ಕೂ ಮಧ್ಯದಲ್ಲಿ ಅಗ್ನಿಷ್ವಾತ್ತ ಎಂದು ಹೆಸರುಳ್ಳ ಪಿತೃದೇವತೆಗಳಿರುತ್ತಾರೆ. ॥೧೬॥

ಅವರು ಸಮಾಧಿಯಲ್ಲಿದ್ದುಕೊಂಡು ತಮ್ಮ ಗೋತ್ರದಲ್ಲಿ ಹುಟ್ಟಿರುವ ಜನರಿಗೆ ಶೀಘ್ರ ಫಲದಾಯಕವಾದ ಆಶೀರ್ವಾದಗಳನ್ನು ಮಾಡುತ್ತಿರುವರು. ॥೧೭॥

ಪಿತೃರಾಜೋಽಪಿ ಭಗವಾನ್ ಸಂಪರೇತೇಷು ಜಂತುಷು ।
ವಿಷಯಂ ಪ್ರಾಪಿತೇಷ್ವೇಷು ಸ್ವಕೀಯೈಃ ಪುರುಷೈರಿಹ ॥೧೮॥

ಸ ಗಣೋ ಭಗವತ್ಪ್ರೋಕ್ತಾಜ್ಞಾಪರೋ ದಮಧಾರಕಃ ।
ಯಥಾ ಕರ್ಮ ಯಥಾ ದೋಷಂ ವಿದಧಾತಿ ವಿಚಾರದೃಕ್ ॥೧೯॥

ಸ್ವಾನ್ಗಣಾನ್ಧರ್ಮತತ್ವಜ್ಞಾನ್ ಸರ್ವಾನಾಜ್ಞಾಪ್ರವರ್ತಕಾನ್ ।
ಸ ವಾ ಪ್ರೇರಯತಿ ಪ್ರಾಜ್ಞೋ ಯಥಾದೇಶ ನಿಯೋಜಿತಾನ್ ॥೨೦॥

ನರಕಾನೇಕವಿಂಶತ್ಯಾ ಸಂಖ್ಯಯಾ ವರ್ಣಯಂತಿ ಹಿ ।
ಅಷ್ಟಾವಿಂಶಮಿತಾನ್ಕೇಽಪಿ ತಾನನುಕ್ರಾಮತೋ ಬ್ರುವೇ ॥೨೧॥

ತಾಮಿಸ್ರಮಂಧತಾಮಿಸ್ರೋ ರೌರವೋಽಪಿ ತೃತೀಯಕಃ ।
ಮಹಾರೌರವನಾಮಾ ಚ ಕುಂಭೀಪಾಕೋಽಪರೋ ಮತಃ ॥೨೨॥

ಕಾಲಸೂತ್ರಂ ತಥಾ ವಾಽಸಿಪತ್ರಾರಣ್ಯಮುದಾಹೃತಂ ।
ಸೂಕರಸ್ಯಮುಖಂ ಚಾಂಧಕೂಪೋಽಥ ಕೃಮಿಭೋಜನಃ ॥೨೩॥

---

ಅಲ್ಲಿ ಯಮಧರ್ಮರಾಜನು ಎಲ್ಲ ಪ್ರಾಣಿಗಳೂ ಮೃತರಾಗಿ ಯಮಲೋಕಕ್ಕೆ ಬಂದಮೇಲೆ ತನ್ನ ಆಜ್ಞಾಧಾರಕರಿಂದ ॥೧೮॥

ಕೂಡಿದವನಾಗಿ ಭಗವಂತನ ಅಪ್ಪಣೆಯನ್ನನುಸರಿಸಿ ಪಾಪಿಷ್ಠರನ್ನು ದಂಡಿಸ ತಕ್ಕವನಾಗಿ ಅವರವರ ಕರ್ಮಗಳ ದೋಷಕ್ಕನುಸಾರವಾಗಿ ವಿಚಾರಪೂರ್ವಕವಾಗಿ ದಂಡವನ್ನು ವಿಧಿಸುತ್ತಾನೆ. ॥೧೯॥

ಎಲ್ಲವನ್ನೂ ತಿಳಿದಿರುವ ಆ ಯಮಧರ್ಮನು ಧರ್ಮಸ್ವರೂಪವನ್ನು ತಿಳಿದಿರುವ ತನ್ನ ಅಪ್ಪಣೆಗನುಸಾರವಾಗಿ ನಡೆಯುವ ತನ್ನ ಭೃತ್ಯರೆಲ್ಲರನ್ನೂ ಆಯಾಯ ಸ್ಥಾನಗಳಲ್ಲಿರಿಸಿ ಅವರವರ ಕರ್ತವ್ಯಗಳಲ್ಲಿ ಪ್ರೇರಿಸುವನು. ॥೨೦॥

ನರಕಗಳು ಇಪ್ಪತ್ತೊಂದು ಬಗೆಯಾಗಿರುವುವೆಂದು ಕೆಲವರೂ ಇಪ್ಪತ್ತೆಂಟು ಬಗೆಯಾಗಿರುವುವೆಂದು ಮತ್ತೆ ಕೆಲವರೂ ಹೇಳುವರು. ಅವುಗಳನ್ನು ಕ್ರಮವಾಗಿ ಹೇಳುವೆನು. ॥೨೧॥

ತಾಮಿಸ್ರ, ಅಂಧತಾಮಿಸ್ರ, ರೌರವ, ಮಹಾರೌರವ, ಕುಂಭೀಪಾಕ, ಕಾಲ ಸೂತ್ರ, ಅಸಿಪತ್ರಾರಣ್ಯ, ಸೂಕರಮುಖ, ಅಂಧಕೂಪ, ಕೃಮಿಭೋಜನ, ಸಂದಂಶ,

ಸಂದಂಶಃ ತಪ್ತಮೂರ್ತಿಶ್ಚ ವಜ್ರಕಂಟಕ ಏವ ಚ ।
ಶಾಲ್ಮಲೀ ಚಾಥ ದೇವರ್ಷೇ ನಾಮ್ನಾ ವೈತರಣೀ ತಥಾ ॥೨೪॥

ಪೂಯೋದಃ ಪ್ರಾಣರೋಧಶ್ಚ ತಥಾ ವಿಶಸನಂ ಮತಂ ।
ಲಾಲಾಭಕ್ಷಃ ಸಾರಮೇಯಾದನಮುಕ್ತಂ ಅತಃಪರಂ ॥೨೫॥

ಅವೀಚಿರಪ್ಯಯಃಪಾನಂ ಕ್ಷಾರಕರ್ದಮ ಏವ ಚ ।
ರಕ್ಷೋಗಣಾಖ್ಯಾಸಂಭೋಜಃ ಶೂಲಪ್ರೋತೋಽಪ್ಯತಃ ಪರಂ ॥೨೬॥

ದಂದಶೂಕೋ ವಟಾರೋಧಃ ಪರ್ಯಾವರ್ತನಕಃ ಪರಂ ।
ಸೂಚೀಮುಖಮಿತಿ ಪ್ರೋಕ್ತಾ ಅಷ್ಟಾವಿಂಶತಿ ನಾರಕಾಃ ॥೨೭॥

ಇತ್ಯೇತೇ ನರಕಾ ನಾಮ ಯಾತನಾಭೂಮಯಃ ಪರಾಃ ।
ಕರ್ಮಭಿಶ್ಚಾಪಿ ಭೂತಾನಾಂ ಗಮ್ಯಾಃ ಪದ್ಮಜಸಂಭವ ॥೨೮॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಅಷ್ಟಮಸ್ಕಂಧೇ
ಏಕವಿಂಶೋಽಧ್ಯಾಯಃ

---

ತಪ್ತಮೂರ್ತಿ, ವಜ್ರಕಂಟಕ, ಶಾಲ್ಮಲಿ, ವೈತರಣೀ, ಪೂಯೋದ, ಪ್ರಾಣರೋಧ, ವಿಶಸನ, ಲಾಲಾಭಕ್ಷ, ಸಾರಮೇಯಾದನ, ಅವೀಚಿ, ಅಯಃಪಾನ, ಕ್ಷಾರಕರ್ದಮ ರಕ್ಷೋಗಣ ಸಂಭೋಜ, ಶೂಲಪ್ರೋತ, ದಂದಶೂಕ, ವಟಾರೋಧ, ಪರ್ಯಾವರ್ತನಕ, ಸೂಚೀಮುಖ ಇವೇ ಇಪ್ಪತ್ತೆಂಟು ನರಕಗಳು ॥೨೨-೨೩-೨೪-೨೫-೨೬-೨೭॥

ಎಲೈ ಬ್ರಹ್ಮಪುತ್ರನಾದ ನಾರದನೇ, ಪ್ರಾಣಿಗಳು ಅವರವರ ಪಾಪಕರ್ಮಗಳಿಂದ ಹೊಂದತಕ್ಕ ವಿಶೇಷಬಾಧೆಯನ್ನು ಕೊಡುವ ನರಕಗಳು ಇಷ್ಟು ಪ್ರಕಾರಗಳಾಗಿರುವುವು. ॥೨೮॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಎಂಟನೆಯ ಸ್ಕಂಧದಲ್ಲಿ
ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಅಷ್ಟಮಸ್ಕಂಧೇ

### ॥ ದ್ವಾವಿಂಶೋಽಧ್ಯಾಯಃ ॥

### ಇಪ್ಪತ್ತೆರಡನೆಯ ಅಧ್ಯಾಯವು

॥ ನಾರದ ಉವಾಚ ॥

**ಕರ್ಮಭೇದಾಃ ಕತಿವಿಧಾಃ ಸನಾತನಮುನೇ ಮಮ ।**
**ಶ್ರೋತವ್ಯಾಃ ಸರ್ವಥೈವೈತೇ ಯಾತನಾಪ್ರಾಪ್ತಿಭೂಮಯಃ ॥೧॥**

॥ ಶ್ರೀ ನಾರಾಯಣ ಉವಾಚ ॥

**ಯೋ ವೈ ಪರಸ್ಯ ವಿತ್ತಾನಿ ದಾರಾಪತ್ಯಾನಿ ಚೈವ ಹಿ ।**
**ಹರತೇ ಸ ಹಿ ದುಷ್ಟಾತ್ಮಾ ಯಮಾನುಚರಗೋಚರಃ ॥೨॥**

**ಕಾಲಪಾಶೇನ ಸಂಬದ್ಧೋ ಯಾಮ್ಯೈ ರತಿಭಯಾನಕೈಃ ।**
**ತಾಮಿಸ್ರನಾಮ ನರಕೇ ಪಾತ್ಯತೇ ಯಾತನಾಸ್ಪದೇ ॥೩॥**

---

ನಾರದನು ಹೇಳಿದನು – ನಾರಾಯಣಮಹರ್ಷಿಯನ್ನು ಕುರಿತು ಪ್ರಾಚೀನ ಮುನಿಶ್ರೇಷ್ಠನೇ, ಕರ್ಮಭೇದಗಳು ಎಷ್ಟು ಪ್ರಕಾರಗಳಾಗಿರುವುವು ? ನರಕ ಯಾತನೆಗಳಿಗೆ ಕಾರಣಗಳಾದ ಈ ಕರ್ಮಭೇದಗಳನ್ನು ನಾನು ಖಂಡಿತವಾಗಿ ಕೇಳಬೇಕು. ॥೧॥

ನಾರಾಯಣನು ಹೇಳಿದನು—ಯಾವ ಮನುಷ್ಯನು ಇತರರ ಧನವನ್ನೂ ಇತರರ ಹೆಂಡಿತಿ ಮಕ್ಕಳನ್ನೂ ಅಪಹರಿಸುವನೋ ಅಂಥ ದುರ್ನಡತೆಯುಳ್ಳ ಮನುಷ್ಯನು ಯಮನ ಸೇವಕರಿಗೆ ಸಿಕ್ಕಿದವನಾಗಿ ॥೨॥

ಹೆಚ್ಚಾದ ಭಯವನ್ನುಂಟುಮಾಡುವ ಯಮನ ಕಾಲಪಾಶದಿಂದ ಕಟ್ಟಲ್ಪಟ್ಟು ಬಹಳ ಬಾಧೆಯನ್ನು ಕೊಡುವ ತಾಮಿಸ್ರವೆಂಬ ನರಕದಲ್ಲಿ ಬೀಳಿಸಲ್ಪಡುವನು. ॥೩॥

ತಾಡನಂ ದಂಡನಂ ಚೈವ ಸಂತರ್ಜನ ಮತಃಪರಂ ।
ಯಾಮ್ಯಾಃ ಕುರ್ವಂತಿ ಪಾಶಾಢ್ಯಾಃ ಕಶ್ಮಲಂ ಯಾತಿ ಚೈವ ಹಿ ॥೪॥

ಮೂರ್ಛಾಮಾಯಾತಿ ವಿವಶೋ ನಾರಕೀ ಪದ್ಮಭೂಸುತ ।
ಯಃ ಪತಿಂ ವಂಚಯಿತ್ವಾ ತು ದಾರಾದೀನುಪಭುಙ್ಕ್ತೀ ॥೫॥

ಅಂಧತಾಮಿಸ್ರನರಕೇ ಪಾತ್ಯತೇ ಯಮಕಿಂಕರೈಃ ।
ಪಾತ್ಯಮಾನೋ ಯತ್ರ ಜಂತುಃ ವೇದನಾಪರವಾನ್ಭವೇತ್ ॥೬॥

ನಷ್ಟದೃಷ್ಟಿರ್ನಷ್ಟಮತಿ ರ್ಭವತ್ಯೇವಾಽವಿಲಂಬತಃ ।
ವನಸ್ಪತಿರ್ಭಜ್ಯಮಾನಮೂಲೋ ಯದ್ವದ್ಭವೇದಿಹ ॥೭॥

ತಸ್ಮಾದಪ್ಯಂಧತಾಮಿಸ್ರ ನಾಮ್ನಾ ಪ್ರೋಕ್ತಃ ಪುರಾತನೈಃ ।
ಏತನ್ಮಮಾಹಮಿತಿ ಯೋ ಭೂತದ್ರೋಹೇಣ ಕೇವಲಂ ॥೮॥

---

ಅಲ್ಲಿ ಯಮನ ಕಿಂಕರರು ಪಾಶಗಳಿಂದ ಕೂಡಿದವರಾಗಿ ಅವನನ್ನು ಬಹಳ ವಾಗಿ ಹೆದರಿಸಿ ಹಿಂಸಿಸಿ ಹೊಡೆಯುವರು. ಹೀಗೆ ಅವನು ಬಹಳ ದುಃಖವನ್ನು ಹೊಂದಿ, ॥೪॥

ಆ ನರಕದಲ್ಲಿ ಪರಾಧೀನನಾಗಿ ಮೂರ್ಛೆಯನ್ನು ಹೊಂದುವನು. ಯಾವನು ತನ್ನ ಯಜಮಾನನನ್ನು ಮೋಸಪಡಿಸಿ ಅವನ ಹೆಂಡಿತಿ ಮೊದಲಾದವರನ್ನು ಭೋಗಿಸುವನೋ ॥೫॥

ಅವನು ಯಮನ ಸೇವಕರಿಂದ ಅಂಧತಾಮಿಸ್ರವೆಂಬ ನರಕದಲ್ಲಿ ತಳ್ಳಲ್ಪಡು ವನು. ಅಲ್ಲಿ ಬಿದ್ದ ಆ ಪ್ರಾಣಿಯು ಬಹಳ ಯಾತನೆಯನ್ನು ಹೊಂದುವನು. ॥೬॥

ಅಲ್ಲದೆ ತನ್ನ ನೇತ್ರದೃಷ್ಟಿಯನ್ನೂ ಬುದ್ಧಿಶಕ್ತಿಯನ್ನೂ ತತ್ಕ್ಷಣವೇ ಕಳೆದು ಕೊಂಡವನಾಗಿ ಮೂಲಸಹಿತವಾಗಿ ಮುರಿದ ಮಹಾವೃಕ್ಷದಂತೆ ಆಗುವನು. ॥೭॥

ಪ್ರಾಚೀನರಾದ ವಿದ್ವಾಂಸರು ಜನಗಳಿಗೆ ನರಕದಲ್ಲಿ ಈ ಅವಸ್ಥೆಯುಂಟಾಗು ವುದರಿಂದ ಅದನ್ನು ಅಂಧತಾಮಿಸ್ರವೆಂದು ಕರೆಯುವರು. ಯಾವ ಮನುಷ್ಯನು ಎಲ್ಲ ಪ್ರಾಣಿಗಳನ್ನೂ ವಂಚಿಸಿ ಸ್ವಾರ್ಥಸಾಧನೆಗಾಗಿ ॥೮॥

**ಪುಷ್ಣಾತಿ ಪ್ರತ್ಯಹಂ ಸ್ವೀಯಕುಟುಂಬಂ ಕಾರ್ಯಲಂಪಟಃ ।**
**ಏತದ್ವಿಹಾಯ ಚಾತ್ರೈವ ಸ್ವಾಶುಭೇನ ಪತೇದಿಹ ॥೯॥**

**ರೌರವೇನಾಮ ನರಕೇ ಸರ್ವಸತ್ವಭಯಾವಹೇ ।**
**ಇಹಲೋಕೇಽಮುನಾ ಯೇ ತು ಹಿಂಸಿತಾ ಜಂತವಃ ಪುರಾ ॥೧೦॥**

**ತಏವ ರುರವೋ ಭೂತ್ವಾ ಪರತ್ರ ಪೀಡಯಂತಿ ತಂ ।**
**ತಸ್ಮಾದ್ರೌರವಮಿತ್ಯಾಹುಃ ಪುರಾಣಜ್ಞಾ ಮನೀಷಿಣಃ ॥೧೧॥**

**ರುರುಸ್ಸರ್ಪಾದತಿಕ್ರೂರೋ ಜಂತುರುಕ್ತಃ ಪುರಾತನೈಃ ।**
**ಏವಂ ಮಹಾರೌರವಾಖ್ಯೋ ನರಕೋ ಯತ್ರ ಪೂರುಷಃ ॥೧೨॥**

**ಯಾತನಾಂ ಪ್ರಾಪ್ಯಮಾಣೋ ಹಿ ಯಃ ಪರಂ ದೇಹಸಂಭವಃ ।**
**ಕ್ರವ್ಯಾದ ನಾಮ ರುರವಃ ತಂ ಕ್ರವ್ಯೇ ಘಾತಯಂತಿ ಚ ॥೧೩॥**

---

ಪ್ರತಿದಿವಸದಲ್ಲೂ ನಿಷಿದ್ಧ ಕಾರ್ಯಗಳನ್ನು ಮಾಡುತ್ತಾ ತನ್ನ ಕಟುಂಬ ರಕ್ಷಣೆಯನ್ನು ಮಾಡುವನೋ, ಅವನು ಈ ನರಕವನ್ನು ಬಿಟ್ಟು ತಾನು ಮಾಡಿದ ಪಾಪಕರ್ಮದ ಫಲಾನುಭವಕ್ಕಾಗಿ ॥೯॥

ಸಮಸ್ತ ಪ್ರಾಣಿಗಳಿಗೂ ಭಯವನ್ನುಂಟುಮಾಡುವ ರೌರವವೆಂಬ ನರಕದಲ್ಲಿ ಬೀಳುವನು. ಈ ಲೋಕದಲ್ಲಿ ಇವನು ಪೂರ್ವದಲ್ಲಿ ಎಷ್ಟು ಪ್ರಾಣಿಗಳನ್ನು ಹಿಂಸೆ ಮಾಡಿರುವನೋ, ॥೧೦॥

ಆ ಪ್ರಾಣಿಗಳೇ ರುರುಗಳೆಂಬ ರೂಪದಿಂದ ಪರಲೋಕದಲ್ಲಿ ಅವರನ್ನು ಪೀಡಿಸುವುವು. ಈ ಕಾರಣದಿಂದಲೇ ಪುರಾಣಗಳನ್ನು ತಿಳಿದಿರುವ ವಿದ್ವಾಂಸರು ಆ ನರಕವನ್ನು ರೌರವವೆಂದು ಕರೆಯುವರು. ॥೧೧॥

ಪ್ರಾಚೀನರು ರುರುವೆಂಬ ಜಂತುವನ್ನು ಹಾವಿಗಿಂತಲೂ ಹೆಚ್ಚು ಕ್ರೂರವಾದುದೆಂದು ಹೇಳುವರು. ಇದೇ ರೀತಿಯಲ್ಲಿ ಮಹಾರೌರವವೆಂಬ ನರಕದಲ್ಲಿಯೂ ಮನುಷ್ಯನು ಬಹಳವಾದ ಬಾಧೆಯನ್ನು ಹೊಂದುವನು. ಅಲ್ಲಿ ಕ್ರವ್ಯಾದರೆಂಬ ರುರುಗಳು ಆ ಮನುಷ್ಯನನ್ನು ಮಾಂಸಕ್ಕಾಗಿ ಕಿತ್ತುತಿನ್ನಲು ಪೀಡಿಸುವರು. ॥೧೨-೧೩॥

ಯ ಉಗ್ರಃ ಪುರುಷಃ ಕ್ರೂರಃ ಪಶುಪಕ್ಷಿಗಣಾನಪಿ ।
ಉಪರುಂಧಯತೇ ಮೂಢೋ ಯಾಮ್ಯಾಸ್ತಂ ರಂಧಯಂತಿ ಚ॥೧೪॥

ಕುಂಭೀಪಾಕೇ ತಪ್ತತೈಲೇ ಉಪರ್ಯುಪಿ ಚ ನಾರದ ।
ಯಾವಂತಿ ಪಶುರೋಮಾಣಿ ತಾವದ್ವರ್ಷಸಹಸ್ರಕಂ ॥೧೫॥

ಪಿತೃವಿಪ್ರಬ್ರಾಹ್ಮಣಧ್ರುಕ್ ಕಾಲಸೂತ್ರೇ ಸ ನಾರಕೇ ।
ಅಗ್ನ್ಯರ್ಕಾಭ್ಯಾಂ ತಪ್ಯಮಾನೇ ನಾರಕೀ ವಿನಿವೇಶಿತಃ ॥೧೬॥

ಕ್ಷುತ್ಪಿಪಾಸಾದಹ್ಯಮಾನೋಽಂತಃ ಶರೀರಸ್ತಥಾ ಬಹಿಃ ।
ಆಸ್ತೇ ಶೇತೇ ಚೇಷ್ಟತೇ ಚಾವತಿಷ್ಠತಿ ಚ ಧಾವತಿ ॥೧೭॥

ನಿಜವೇದಪಥಾದ್ಯೋ ವೈ ಪಾಖಂಡಂ ಚೋಪಯಾತಿ ಚ ।
ಅನಾಪದ್ಯಪಿ ದೇವರ್ಷೇ ತಂ ಪಾಪಂ ಪುರುಷಂ ಭಟಾಃ ॥೧೮॥

---

ಯಾವ ಕ್ರೂರಸ್ವಭಾವವುಳ್ಳ ಮನುಷ್ಯನು ಪಶುಪಕ್ಷಿಗಳನ್ನು ತೊಂದರೆಪಡಿಸುವನೋ ಅವನನ್ನು ನರಕದಲ್ಲಿ ಯಮಭಟರು ಬಹಳವಾಗಿ ತೊಂದರೆಪಡಿಸುವರು. ||೧೪||

ಎಲೈ ನಾರದನೇ, ಕುಂಭೀಪಾಕವೆಂಬ ನರಕದಲ್ಲಿ ಭಾಂಡಗಳಲ್ಲಿ ಕುದಿಸಿರುವ ಎಣ್ಣೆಯನ್ನು ತುಂಬಿ ಆ ಪಶುವಿನ ದೇಹದಲ್ಲಿ ಎಷ್ಟು ರೋಮಗಳಿರುವುವೋ ಅಷ್ಟು ಸಹಸ್ರವರ್ಷಗಳ ಕಾಲದ ವರೆಗೂ ಇನ್ನೂ ಹೆಚ್ಚಾಗಿಯೂ ದುಃಖಪಡುವನು. ||೧೫||

ಪಿತೃಗಳನ್ನೂ ಬ್ರಾಹ್ಮಣರನ್ನೂ ದ್ರೋಹಮಾಡಿ ತೊಂದರೆಪಡಿಸಿದವನು ಅಗ್ನಿ ಸೂರ್ಯ ಇವರ ತೇಜಸ್ಸಿನಿಂದ ಜ್ವಲಿಸುತ್ತಿರುವ ಕಾಲಸೂತ್ರವೆಂಬ ನರಕದಲ್ಲಿ ತಳ್ಳಲ್ಪಟ್ಟವನಾಗಿ, ||೧೬||

ಹಸಿವು ಬಾಯಾರಿಕೆಗಳಿಂದ ಶರೀರದ ಒಳಗೂ ಹೊರಗೂ ದಹಿಸಲ್ಪಟ್ಟು ಕಷ್ಟಪಡುತ್ತಾ ಮಲಗುತ್ತಲೂ, ಮತ್ತು ಯಾತನೆಯನ್ನು ತಪ್ಪಿಸಿಕೊಳ್ಳಲು ಓಡುತ್ತಲೂ ಇರುವನು. ||೧೭||

ಓ ನಾರದನೇ, ವೇದೋಕ್ತವಾದ ಧರ್ಮಮಾರ್ಗವನ್ನು ಅಲ್ಲಗಳೆಯುವವರಿಗೆ ಪಾಷಂಡಿಗಳೆಂದು ಹೆಸರು. ಯಾರು ಈ ಧರ್ಮಮಾರ್ಗವನ್ನು ಬಿಟ್ಟು ಪಾಷಂಡಿಗಳಂತೆ ನಡೆಯುವವರೋ ಅಂಥ ಪಾಪಿಯನ್ನು ಯಮಭಟರು ಆಪತ್ತುಗಳಿಲ್ಲದಿರುವಾಗಲೂ ||೧೮||

ಅಸಿಪತ್ರವನಂನಾಮ ನರಕಂ ವೇಶಯಂತಿ ಚ ।
ಕಶಯಾ ಪ್ರಹರಂತ್ಯೇವ ನಾರಕೀ ತದ್ಗತಸ್ತದಾ ॥೧೯॥

ಇತಸ್ತತೋ ಧಾವಮಾನ ಉತ್ತಾಲಮತಿ ವೇಗಿತಃ ।
ಅಸಿಪತ್ರೈಃ ಛಿದ್ಯಮಾನ ಉಭಯತ್ರ ಚ ಧಾರಭಿಃ ॥೨೦॥

ಸಂಛಿದ್ಯಮಾನಸರ್ವಾಂಗೋ ಹಾ ಹತೋಽಸ್ಮೀತಿ ಮೂರ್ಛಿತಃ ।
ವೇದನಾಂ ಪರಮಾಂ ಪ್ರಾಪ್ತಃ ಪತತ್ಯೇವ ಪದೇಪದೇ ॥೨೧॥

ಸ್ವಧರ್ಮಾನುಗತಂ ಭುಙ್ತೇ ಪಾಖಂಡಫಲಮಲ್ಪಧೀಃ ।
ಯೋ ರಾಜಾ ರಾಜಪುರುಷೋ ದಂಡಯೇದ್ವೈ ತ್ವಧರ್ಮತಃ ॥೨೨॥

ದ್ವಿಜೇ ಶರೀರದಂಡಂ ಚ ಪಾಪೀಯಾನ್ನಾರಕೀ ತು ಸಃ ।
ನರಕೇ ಸೂಕರಮುಖೇ ಪಾತ್ಯತೇ ಯಮಕಿಂಕರೈಃ ॥೨೩॥

---

ಕತ್ತಿಗಳ ಅಲಗುಗಳಿಂದ ತುಂಬಿರುತ್ತಾ ಕಾಡಿನಂತೆ ಅಪಾಯಕರವಾದುದರಿಂದ ಅಸಿಪತ್ರವನವೆಂದು ಹೆಸರುಳ್ಳ ನರಕಕ್ಕೆ ಪ್ರವೇಶಮಾಡಿಸುತ್ತಾರೆ. ಮತ್ತು ಅಲ್ಲಿ ಚಾಟಿಯಿಂದ ಆ ಮನುಷ್ಯನನ್ನು ಹೊಡೆಯುತ್ತಾರೆ. ಅಲ್ಲಿ ಅವನು ಅವರಿಗೆ ಅಧೀನನಾಗಿದ್ದರೂ ॥೧೯॥

ನೋವನ್ನು ತಪ್ಪಿಸಿಕೊಳ್ಳಲು ಅಲ್ಲಲ್ಲಿ ಓಡಾಡುತ್ತಾ, ಕತ್ತಿಗಳ ಅಲಗುಗಳಿಂದ ತನ್ನ ಎರಡು ಕಡೆಗಳಲ್ಲೂ ಕತ್ತರಿಸಲ್ಪಡುತ್ತಿರುವವನಾಗಿ, ॥೨೦॥

ಎಲ್ಲ ಅವಯವಗಳೂ ಕತ್ತರಿಸಿದಂತಾಗಿ ಅಯ್ಯೋ! ಕೆಟ್ಟೆನು, ಎಂದು ಒರಲುತ್ತಾ ಬಹಳ ಬಾಧೆಯಿಂದ ಮೂರ್ಛೆಗೊಳ್ಳುತ್ತಾ ಬಾರಿಬಾರಿಗೂ ಬೀಳುವನು. ॥೨೧॥

ಅಲ್ಪಬುದ್ಧಿಯುಳ್ಳ ಆ ಮನುಷ್ಯನು ತಾನು ಮಾಡಿದ ಪಾಪಕರ್ಮಗಳ ಫಲವನ್ನು ಹೀಗೆ ಅನುಭವಿಸುತ್ತಾನೆ. ಯಾವರಾಜನು ಅಥವಾ ಅವನಿಂದ ನಿಯುಕ್ತನಾದ ಅಧಿಕಾರಿಯು ಧರ್ಮಕ್ಕೆ ವಿರೋಧವಾಗಿ ಅಪರಾಧಿಗೆ ದಂಡವನ್ನು ವಿಧಿಸುವನೋ, ॥೨೨॥

ವಿನಿಷ್ಪಿಷ್ಟಾವಯುವಕೋ ಬಲವದ್ಭಿಃ ತಥೇಕ್ಷುವತ್ ।
ಆರ್ತಸ್ವರೇಣ ಸ್ವನಯನ್ಮೂರ್ಛಿತಃ ಕಶ್ಮಲಂ ಗತಃ ॥೨೪॥

ಸ ಪೀಡ್ಯಮಾನೋ ಬಹುಧಾ ವೇದನಾಂ ಯಾತ್ಯತೀವ ಹಿ ।
ವಿವಿಕ್ತಪರಪೀಡೋ ಯೋಽಪ್ಯವಿವಿಕ್ತಪರವ್ಯಥಾಂ ॥೨೫॥

ಈಶ್ವರಾಂಕಿತವೃತ್ತೀನಾಂ ವ್ಯಥಾಮಾಚರತೇ ಸ್ವಯಂ ।
ಸ ಚಾಂಧಕೂಪೇ ಪತತಿ ತದಭಿದ್ರೋಹಯಂತ್ರಿತೇ ॥೨೬॥

ತತ್ರಾಸೌ ಜಂತುಭಿಃ ಕ್ರೂರೈಃ ಪಶುಭಿಃ ಮೃಗಪಕ್ಷಿಭಿಃ ।
ಸರೀಸೃಪೈಶ್ಚ ಮಶಕೈಃ ಯೂಕಾಮತ್ಕುಣಜಾತಿಭಿಃ ॥೨೭॥

ಮಕ್ಷಿಕಾಭಿಶ್ಚ ತಮಸಿ ದಂದಶೂಕೈಶ್ಚ ಪೀಡ್ಯತೇ ।
ಪರಿಕ್ರಾಮತಿ ಚೈವಾತ್ರ ಕುಶರೀರೇ ಚ ಜಂತುವತ್ ॥೨೮॥

---

ಮತ್ತು ಬ್ರಾಹ್ಮಣನಿಗೆ ಶರೀರದಂಡವನ್ನು ವಿಧಿಸುವನೋ, ಅಂಥಾ ಪಾಪಿಷ್ಠನು ಸೂಕರಮುಖವೆಂಬ ನರಕದಲ್ಲಿ ಯಮಭಟರಿಂದ ಬೀಳಿಸಲ್ಪಡುವನು. ॥೨೩॥

ಅಲ್ಲಿ ಬಲಶಾಲಿಗಳಾದ ಯಮಭಟರಿಂದ ಕಬ್ಬು ಜಜ್ಜಲ್ಪಡುವಂತೆ ಅವನ ಅಂಗಗಳೆಲ್ಲವೂ ಜಜ್ಜಲ್ಪಡುತ್ತಿರಲು, ಆಗ ಅವನು ದೀನಸ್ವರದಿಂದ ಕೂಗುತ್ತಾ ಮೂರ್ಛಿತನಾಗಿ ಪಾಪಫಲವನ್ನು ಅನುಭವಿಸುತ್ತಾ ಕಷ್ಟಪಡುವನು. ॥೨೪॥

ಅವನು ಬಹಳವಾಗಿ ಪೀಡಿಸಲ್ಪಟ್ಟು ಅತಿಯಾಗಿ ನಾನಾಬಗೆಯ ಬಾಧೆಯನ್ನು ಹೊಂದುವನು. ಇತರರನ್ನು ಪೀಡಿಸುವುದರಲ್ಲಿ ಆಸಕ್ತನಾಗಿ ಅವರಿಗೆ ವ್ಯಥೆಯನ್ನುಂಟುಮಾಡಬಾರದೆಂಬ ವಿಷಯವನ್ನು ಮಾತ್ರ ತಿಳಿಯದೆ, ॥೨೫॥

ಈಶ್ವರನಿಂದ ನಿಯಮಿಸಲ್ಪಟ್ಟ ಜೀವನವುಳ್ಳ ಜನರಿಗೆ ಯಾವನು ತೊಂದರೆಯನ್ನುಂಟುಮಾಡುವನೋ ಅವನು ಈ ಅಪರಾಧದ ಫಲಾನುಭವಕ್ಕಾಗಿ ನರಕದಲ್ಲಿ ಬೀಳುವನು. ॥೨೬॥

ಆ ನರಕದಲ್ಲಿ ಈ ಮನುಷ್ಯನು ಕ್ರೂರವಾದ ಪಶು, ಮೃಗ, ಪಕ್ಷಿಗಳಿಂದಲೂ, ಇರುವೆ ಸೊಳ್ಳೆ ಮೊದಲಾದ ಪ್ರಾಣಿಗಳಿಂದಲೂ, ॥೨೭॥

ಕತ್ತಲೆಯು ತುಂಬಿರುವ ನರಕದಲ್ಲಿ ಸರ್ಪಗಳಿಂದಲೂ ಪೀಡಿಸಲ್ಪಟ್ಟವನಾಗಿ ಆ ಮನುಷ್ಯನು ಕೆಟ್ಟಶರೀರದಿಂದ ಅಲ್ಲೇ ಪ್ರಾಣಿಯಂತೆ ಅಲೆಯುತ್ತಿರುವನು. ॥೨೮॥

ಯಸ್ತು ಸಂವಿಹಿತೈಃ ಪಂಚಯಜ್ಞೈಃ ಕಾಕೈಶ್ಚ ಸಂಸ್ತುತಃ ।
ಅಶ್ನಾತಿ ಚಾಽಸಂವಿಭಜ್ಯ ಯತ್ಕಿಂಚಿದುಪಪದ್ಯತೇ ॥೨೯॥

ಸ ಪಾಪಪುರುಷಃ ಕ್ರೂರೈಃ ಯಾಮ್ಯೈಶ್ಚ ಕೃಮಿಭೋಜನೇ ।
ನರಕಾಧಮಕೇ ದುಷ್ಟಕರ್ಮಣಾ ಪರಿಪಾತ್ಯತೇ ॥೩೦॥

ಲಕ್ಷಯೋಜನವಿಸ್ತೀರ್ಣೇ ಕೃಮಿಕುಂಡೇ ಭಯಂಕರೇ ।
ಕೃಮಿರೂಪಂ ಸಮಾಸಾದ್ಯ ಭಕ್ಷ್ಯಮಾಣಶ್ಚ ತೈಃ ಸ್ವಯಂ ॥೩೧॥

ಅಪ್ರತ್ತಾಪ್ರಹುತಾದೋ ಯಃ ಪಾತಮಾಪ್ನೋತಿ ತತ್ರ ವೈ ।
ಯಸ್ತು ಸ್ತೇಯೇನ ಚ ಬಲಾದ್ಧಿರಣ್ಯಂ ರತ್ನಮೇವ ಚ ॥೩೨॥

ಬ್ರಾಹ್ಮಣಸ್ಯಾಪಹರತಿ ಅನ್ಯಸ್ಯಾಪಿ ಚ ಕಸ್ಯ-ಚಿತ್ ।
ಅನಾಪದಿ ಚ ದೇವರ್ಷೇ ತಮಮುತ್ರ ಯಮಾನುಗಾಃ ॥೩೩॥

---

ಯಾವ ಮನುಷ್ಯನು ತನಗೆ ಸಿಕ್ಕಿದ ಧನ, ಅನ್ನ ಮೊದಲಾದುವುಗಳಿಂದ ಶಾಸ್ತ್ರೋಕ್ತವಾದ ಪಂಚಮಹಾಯಜ್ಞಗಳನ್ನು ಮಾಡದೆ, ದೇವತೆಗಳನ್ನು ತೃಪ್ತಿಪಡಿಸದೇ ಊಟಮಾಡುವನೋ ಅಂಥವನು ಕಾಗೆಗೆ ಸಮಾನನೆಂದು ಹೇಳಲ್ಪಟ್ಟಿರುವನು. ॥೨೯॥

ಇಂಥಾ ಪಾಪಿಷ್ಠನು ಕ್ರೂರಿಗಳಾದ ಯಮಕಿಂಕರರಿಂದ ಭಯಂಕರವಾದ ಕೃಮಿಭೋಜನವೆಂಬ ನರಕದಲ್ಲಿ ಅವನು ಮಾಡಿದ ಕೆಟ್ಟಕೆಲಸಕ್ಕಾಗಿ ಬೀಳಿಸಲ್ಪಡುವನು. ॥೩೦॥

ಒಂದುಲಕ್ಷ ಯೋಜನ ಪರಿಮಾಣವುಳ್ಳ ಭಯಂಕರವಾದ ಕ್ರಿಮಿಗಳ ವಾಸಸ್ಥಾನವಾದ ಆ ಪ್ರದೇಶದಲ್ಲಿ ಆ ಮನುಷ್ಯನು ತಾನೂ ಕ್ರಿಮಿಯರೂಪವನ್ನು ಹೊಂದಿ ಅಲ್ಲಿರುವ ಕ್ರಿಮಿಗಳಿಂದಲೇ ಭಕ್ಷಿಸಲ್ಪಡುತ್ತಾನೆ. ॥೩೧॥

ಅತಿಥಿಗಳಿಗೆ ವಿಭಾಗಿಸಲ್ಪಡದೆಯೂ, ದೇವತೆಗಳನ್ನುದ್ದೇಶಿಸಿ ಹೋಮಮಾಡದೆಯೂ ಇರುವ ಅನ್ನವನ್ನು ಯಾವನು ಊಟಮಾಡುವನೋ ಅವನೂ ಆ ನರಕದಲ್ಲಿ ಬೀಳುವನು. ಯಾವನು ಕಳ್ಳತನದಿಂದಲೂ, ಸಾಹಸದಿಂದಲೂ, ಇತರರ ಸುವರ್ಣ ಧನ ರತ್ನಾದಿಗಳನ್ನು, ॥೩೨॥

ಬ್ರಾಹ್ಮಣನದಾಗಲಿ ಇತರರದಾಗಲಿ ಯಾವನು ತನಗೆ ಆಪತ್ಕಾಲವು ಸಂಭವಿ

ಅಯಸ್ಮಯ್ಯೈರಗ್ನಿಪಿಂಡ್ಯೈಃ ಸದೃಶ್ಯೈಃ ನಿಷ್ಕುಷಂತಿ ಚ ।
ಯೋಽಗಮ್ಯಾಂ ಯೋಷಿತಂ ಗಚ್ಛೇದಗಮ್ಯಂ ಪುರುಷಂಚ ಯಾ॥೩೪॥

ತಾವಮುತ್ರಾಪಿ ಕಶಯಾ ತಾಡಯಂತೋ ಯಮಾನುಗಾಃ ।
ತಿಗ್ಮಯಾ ಲೋಹಮಯ್ಯಾ ಚ ಸೂರ್ಮ್ಯಾಪ್ಯಾಲಿಂಗಯಂತಿ ತಂ॥೩೫॥

ತಾಂ ಚಾಪಿ ಯೋಷಿತಂಸೂರ್ಮ್ಯಾಽಲಿಂಗಯಂತಿ ಯಮಾನುಗಾಃ ।
ಯಸ್ತು ಸರ್ವಾಭಿಗಮನಃ ಪುರುಷಃ ಪಾಪಸಂಚಯಿ ॥೩೬॥

ನಿರಯೇಽಮುತ್ರ ತಂ ಯಾಮ್ಯಾಃ ಶಾಲ್ಮಲೀಂ ರೋಪಯಂತಿ ತಂ ।
ವಜ್ರಕಂಟಕಸಂಯುಕ್ತಾ ಶಾಲ್ಮಲೀಂ ತಾಂ ಅಯಸ್ಮಯೀಂ ॥೩೭॥

ರಾಜನ್ಯಾ ರಾಜಪುರುಷಾ ಯೇ ವಾ ಪಾಖಂಡವರ್ತಿನಃ ।
ಧರ್ಮಸೇತುಂ ವಿಭಿಂದಂತಿ ತೇ ಪರೇತ್ಯ ಗತಾ ನರಾಃ ॥೩೮॥

---

ಸದೇ ಇರುವಾಗಲೂ, ಅಪಹರಿಸುವನೋ, ಅವನನ್ನು ಆ ನರಕಕ್ಕೆ ಯಮಭಟರು ಎಳೆದುಕೊಂಡುಹೋಗಿ, ||೩೩||

ಬೆಂಕಿಯಲ್ಲಿ ಕಬ್ಬಿಣದ ಸಲಾಕಿಗಳನ್ನು ಕಾಯಿಸಿ ಅವುಗಳಿಂದ ಚರ್ಮವನ್ನು ಸುಲಿದುಬಿಡುವರು. ಯಾವನು ಪರಸ್ತ್ರೀಸಂಬಂಧ ಮಾಡುವನೋ, ಮತ್ತು ಯಾವ ಹೆಂಗಸು ಪರಪುರುಷ ಸಂಬಂಧವನ್ನು ಮಾಡುವಳೋ, ||೩೪||

ಅವರಿಬ್ಬರನ್ನೂ ಯಮನ ಅನುಚರರು ಚಾವಟಿಯಿಂದ ಹೊಡೆದು ಕಾಯಿಸಿದ ಲೋಹಪ್ರತಿಮೆಯನ್ನು ಆಲಿಂಗಿಸುವಂತೆ ಪುರುಷರನ್ನು ನಿರ್ಬಂಧಿಸುವರು. ||೩೫||

ಆ ಯಮಭಟರು ಆ ಹೆಂಗಸನ್ನು ಕಾಯಿಸಿದ ಪ್ರತಿಮೆಯನ್ನು ಆಲಂಗಿಸುವಂತೆ ಮಾಡುವರು. ಯಾವನು ಪಶು ಮೊದಲಾದ ಎಲ್ಲಾ ಪ್ರಾಣಿಗಳಲ್ಲೂ ಸಂಬಂಧ ಮಾಡಿ ಹೆಚ್ಚು ಪಾಪಗಳನ್ನು ಮಾಡುವನೋ, ||೩೬||

ಅವನನ್ನು ಯಮಭಟರು ಶಾಲ್ಮಲಿಯೆಂಬ ನಗರಕ್ಕೆ ಎಳೆದುಕೊಂಡು ಹೋಗಿ ಕಠಿಣವಾದ ಮುಳ್ಳುಗಳಿರುವ ಕಬ್ಬಿಣದ ಶಾಲ್ಮಲಿವೃಕ್ಷಕ್ಕೆ ಹತ್ತಿಸುವರು. ||೩೭||

ವೇದಾರ್ಥಗಳಿಗೆ ವಿರೋಧವಾದ ಆಚರಣೆಯುಳ್ಳ ಯಾವ ರಾಜನ ಸಂಬಂಧಿಗಳೂ ರಾಜನ ಅನುಚರರೂ ಧರ್ಮಕ್ಕೆ ವಿರೋಧವಾಗಿ ನಡೆಯುವರೋ ಅವರು ಮೃತರಾದ ಮೇಲೆ ಪರಲೋಕದಲ್ಲಿ, ||೩೮||

ವೈತರಣ್ಯಾಂ ಪತಂತ್ಯೇವ ಭಿನ್ನಮರ್ಯಾದಪಾತಕಾಃ ।
ನದ್ಯಾಂ ನಿರಯದುರ್ಗಸ್ಯ ಪರಿಖಾಯಾಂ ಚ ನಾರದ ॥೩೯॥

ಯಾದೋಗಣೈಸ್ಸಮಂತಾತ್ತು ಭಕ್ಷ್ಯಮಾಣಾ ಇತಸ್ತತಃ ।
ನಾತ್ಮನಾ ವಿಜಯಂತ್ಯೇವ ನಾಽಸುಭಿಶ್ಚಾಪಿ ನಾರದ ॥೪೦॥

ಸ್ವೀಯೇನ ಕರ್ಮಪಾಕೇನೋಪತಪಂತಿ ಚ ಸರ್ವತಃ ।
ವಿಣ್ಮೂತ್ರಪೂಯರಕ್ತೈಶ್ಚ ಕೇಶಾಸ್ಥಿನಖಮಾಂಸಕೈಃ ॥೪೧॥

ಮೇದೋವಸಾ ಸಂಯುತಾಯಾಂ ನದ್ಯಾಮುಪಪತಂತಿ ತೇ ।
ವೃಷಲೀಪತಯೋ ಯೇ ಚ ನಷ್ಟಶೌಚಾ ಗತತ್ರಪಾಃ ॥೪೨॥

ಆಚಾರನಿಯಮೈಸ್ತ್ಯಕ್ತಾಃ ಪಶುಚರ್ಯಾಪರಾಯಣಾಃ ।
ತೇಽತ್ರಾನುಕಷ್ಟಗತಯೋ ವಿಣ್ಮೂತ್ರಶ್ಲೇಷ್ಮರಕ್ತಕೈಃ ॥೪೩॥

---

ಎಲೈ ನಾರದನೇ, ತಮ್ಮ ಎಲ್ಲೆಯನ್ನು ಮೀರಿ ನಡೆದು ಪಾಪವನ್ನು ಹೊಂದಿದ ಆ ಜನಗಳು ನರಕಕ್ಕೆ ದುರ್ಗರೂಪವಾದ ವೈತರಣೀ ನದಿಯಲ್ಲಿ ಬಿದ್ದೇ ಬೀಳುವರು. ||೩೯||

ಎಲೈ ನಾರದನೇ, ಅವರು ಎಲ್ಲಾ ಕಡೆಗಳಲ್ಲೂ ಜಲಜಂತುಗಳಿಂದ ಭಕ್ಷಿಸಲ್ಪಡುತ್ತ ತಮ್ಮ ಪ್ರಾಣಗಳನ್ನು ಬಿಡುವುದಕ್ಕೂ ಸಮರ್ಥರಾಗುವುದಿಲ್ಲ. ||೪೦||

ತಮ್ಮ ಕರ್ಮವಶದಿಂದ ಅಲ್ಲಿ ಎಲ್ಲಾ ಕಡೆಯಲ್ಲೂ ಶ್ಲೇಷ್ಮ, ಮೂತ್ರ, ರಕ್ತ, ಕೇಶ, ಮೂಳೆ, ಉಗುರು, ಮಾಂಸ ಇವುಗಳಿಂದ ಸುತ್ತುವರಿಯಲ್ಪಟ್ಟು ಕಷ್ಟಪಡುವರಾಗಿ, ||೪೧||

ಮೇದಸ್ಸು ವಸಾ ಇವುಗಳಿಂದ ತುಂಬಿದ ನದಿಯಲ್ಲಿ ಅವರು ಬೀಳುವರು. ಶೌಚವಿಹೀನರಾಗಿಯೂ ನಾಚಿಕೆಯನ್ನು ಬಿಟ್ಟವರಾಗಿಯೂ, ಶೂದ್ರಸ್ತ್ರೀಯ ಸಂಬಂಧವನ್ನು ಮಾಡಿದವರಾಗಿಯೂ, ಇದ್ದ ||೪೨||

ಸದಾಚಾರವನ್ನು ಬಿಟ್ಟವರೂ ಸ್ವೇಚ್ಛಾಚಾರವುಳ್ಳವರೂ ಆದ ಜನರು, ಮೂತ್ರ, ಶ್ಲೇಷ್ಮ, ರಕ್ತ ಇವುಗಳಿಂದ ತುಂಬಿದ ನರಕದಲ್ಲಿ ಬಿದ್ದು ಕಷ್ಟಪಡುವರು. ||೪೩||

ಶ್ಲೇಷ್ಮಮಲಸನಾಪೂರ್ಣೇ ನಿಪತಂತಿ ದುರಾಗ್ರಹಾಃ ।
ತದೇವ ಖಾದಯಂತ್ಯೇತಾನ್ ಯಮಾನುಚರವರ್ಗಕಾಃ ॥೪೪॥

ಯೇ ಶ್ವಾನಗರ್ದಭಾದೀನಾಂ ಪತಯೋ ವೈ ದ್ವಿಜಾದಯಃ ।
ಮೃಗಯಾರಸಿಕಾ ನಿತ್ಯಂ ಅತೀರ್ಥೇ ಮೃಗಘಾತಕಾಃ ॥೪೫॥

ಪರೇತಾಂಸ್ತಾನ್ಯಮಭಟಾ ಲಕ್ಷ್ಯೀಭೂತಾನ್ನರಾಧಮಾನ್ ।
ಇಷುಭಿಶ್ಚ ವಿಭಿಂದಂತಿ ತಾಂಸ್ತಾನ್ ದುರ್ನಯಮಾಗತಾನ್ ॥೪೬॥

ಯೇದಂಭಾ ದಂಭಯಜ್ಞೇಷು ಪಶೂನ್ ಘ್ನಂತಿ ನರಾಧಮಾಃ ।
ತಾನಮುಷ್ಮಿನ್ ಯಮಭಟಾ ನರಕೇ ವೈಶಸೇ ತದಾ ॥೪೭॥

ನಿಪಾತ್ಯ ಪೀಡಯಂತ್ಯೇವ ಕಶಾಘಾತೈರ್ದುರಾಸದೈಃ ।
ಯೋ ಭಾರ್ಯಾಂ ಚ ಸವರ್ಣಾಂ ವೈ ದ್ವಿಜೋ ಮದನಮೋಹಿತಃ ॥೪೮॥

---

ಕೆಟ್ಟ ಬುದ್ಧಿಯುಳ್ಳ ಅವರು ಶ್ಲೇಷ್ಮ ಮಲ ಇವುಗಳಿಂದ ಕೂಡಿರುವ ಆ ವೈತರಣೀನದಿಯಲ್ಲಿ ಬೀಳುವರು. ಯಮಕಿಂಕರರು ಆ ಶ್ಲೇಷ್ಮಾದಿಗಳನ್ನೇ ಅವರಿಗೆ ತಿನ್ನಿಸುವರು. ॥೪೪॥

ಬ್ರಾಹ್ಮಣರೇ ಮೊದಲಾದ ಯಾವ ಜನರು ನಾಯಿ ಕತ್ತೆ ಮೊದಲಾದುವುಗಳನ್ನಿಟ್ಟುಕೊಂಡು ಪೋಷಣೆಮಾಡುವರೋ, ಯಾವಾಗಲೂ ಯಾರು ಬೇಟೆಯಾಡುತ್ತ ಮೃಗಗಳನ್ನು ಯಾವ ಸ್ಥಳದಲ್ಲಿ ಬೇಟೆಯಾಡಕೂಡದೋ, ಅಂಥ ಪ್ರದೇಶದಲ್ಲಿ ಮೃಗಗಳನ್ನು ಹಿಂಸಿಸುವರೋ, ॥೪೫॥

ಅಂಥ ಕೆಟ್ಟ ಮನುಷ್ಯರನ್ನು ಯಮಕಿಂಕರರು ಲಕ್ಷ್ಯವಿಟ್ಟು ಅವರು ಮೃತರಾದ ಮೇಲೆ ಅವರನ್ನು ಅವರ ಕೆಟ್ಟ ನಡತೆಗಾಗಿ ಬಾಣಗಳಿಂದ ಪ್ರಹರಿಸುವರು. ॥೪೬॥

ಡಾಂಭಿಕರಾದ ಯಾವ ಮನುಷ್ಯರು ಡಂಭಕ್ಕೋಸ್ಕರ ಮಾಡುವ ಯಾಗಗಳಲ್ಲಿ ಪಶುಗಳನ್ನು ಕೊಲ್ಲುವರೋ ಅವರನ್ನು ಯಮಕಿಂಕರರು ವಿಶಸನವೆಂಬ ನರಕದಲ್ಲಿ, ॥೪೭॥

ತಡೆಯಲಸಾಧ್ಯವಾಗಿ ಚಾವಟಿಗಳಿಂದ ಹೊಡೆದು ಪೀಡಿಸುವರು. ಯಾವ ದ್ವಿಜನು ಮನ್ಮಥವಿಕಾರಕ್ಕೊಳಗಾಗಿ ಸ್ವಜಾತಿಗೆ ಸೇರಿದ ದ್ವಿಜನ ಹೆಂಡಿತಿಯನ್ನು ಸ್ವೀಕರಿಸಿ, ॥೪೮॥

ರೇತಃ ಪಾತಯತೇ ಮೂಢೋಽಮುತ್ರ ತಂ ಯಮಕಿಂಕರಾಃ ।
ರೇತಃ ಕುಂಭೇ ಪಾತಯಂತಿ ರೇತಃಸಂಪಾಯಯಂತಿ ಚ ॥೪೯॥

ಯೇ ದಸ್ಯವೋಽಗ್ನಿದಾಶ್ಚೈವ ಗರದಾಃ ಸಾರ್ಥಘಾತಕಾಃ ।
ಗ್ರಾಮಾನ್ಸಾರ್ಥಾನ್ವಿಲುಂಪಂತಿ ರಾಜಾನೋ ರಾಜಪೂರುಷಾಃ ॥೫೦॥

ತಾನ್ಪರೇತಾನ್ ಯಮಭಟಾ ನಯಂತಿ ಶ್ವಾನಖಾದನಂ ।
ವಿಂಶತ್ಯಧಿಕಸಂಖ್ಯಾತಾಃ ಸಾರಮೇಯಾ ಮಹಾದ್ಭುತಾಃ ॥೫೧॥

ಸಪ್ತಶತ್ಯಾ ಸಮಾಖ್ಯಾತಾ ರಭಸಂ ಖಾದಯಂತಿ ತೇ ।
ಸಾರಮೇಯಾದನಂ ನಾಮ ನರಕಂ ದಾರುಣಂ ಮುನೇ ॥೫೨॥
ಅತಃಪರಂ ಪ್ರವಕ್ಷ್ಯಾಮಿ ಅವೀಚಿಪ್ರಮುಖಾನ್ಮುನೇ ।

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಅಷ್ಟಮಸ್ಕಂಧೇ
ದ್ವಾವಿಂಶೋಽಧ್ಯಾಯಃ

---

ರೇತಃಪತನವನ್ನು ಮಾಡುತ್ತಾನೋ ಅಂಥ ಮೂಢನನ್ನು ಯಮಭಟರು ರೇತಸ್ಸಿನ ಹಳ್ಳದಲ್ಲಿ ಬೀಳಿಸಿ ಆ ರೇತಸ್ಸನ್ನೇ ಕುಡಿಸುವರು. ॥೪೯॥

ದರೋಡೆ ಮಾಡುವವರನ್ನೂ, ಬೆಂಕಿ ಹಾಕುವರನ್ನೂ, ವಿಷಹಾಕುವರನ್ನೂ, ಗ್ರಾಮಗಳನ್ನು ನಾಶಮಾಡುವ ರಾಜರುಗಳನ್ನೂ, ಅವರ ಅನುಚರರನ್ನೂ, ॥೫೦॥

ಅವರು ಮೃತರಾದಮೇಲೆ ಯಮಭಟರು ಶ್ವಾನಖಾದನವೆಂಬ ನರಕಕ್ಕೆ ತಲಪಿಸಿಬಿಡುವರು. ॥೫೧॥

ಎಲೈ ಋಷಿಯೇ, ಅತಿಭಯಂಕರವಾದ ಏಳನೂರ ಇಪ್ಪತ್ತು ವಿಧವಾದ ಸಾರಮೇಯವೆಂಬ ನರಕಗಳಿರುವುವು. ಈ ಸಾರಮೇಯಾದನವೆಂಬ ನರಕವು ಬಹಳ ಭಯವನ್ನುಂಟುಮಾಡುವುದು. ॥೫೨॥

ಎಲೈ ಋಷಿಯೇ, ಇಲ್ಲಿಂದ ಮುಂದಕ್ಕೆ ಅವೀಚಿ ಮೊದಲಾದ ನರಕಗಳ ಸ್ವರೂಪವನ್ನು ಹೇಳುವೆನು.

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಎಂಟನೆಯ ಸ್ಕಂಧದಲ್ಲಿ
ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.

||ಶ್ರೀಃ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಅಷ್ಟಮಸ್ಕಂಧೇ

### ॥ ತ್ರಯೋವಿಂಶೋಽಧ್ಯಾಯಃ ॥

### ಇಪ್ಪತ್ತುಮೂರನೆಯ ಅಧ್ಯಾಯವು

॥ ಶ್ರೀನಾರಾಯಣ ಉವಾಚ ॥

**ಯೇ ನರಾಃ ಸರ್ವದಾ ಸಾಕ್ಷ್ಯೇ ಅನೃತಂ ಭಾಷಯಂತಿ ಚ ।**
**ದಾನೇ ವಿನಿಮಯೇಽರ್ಥಸ್ಯ ದೇವರ್ಷೇ ಪಾಪಬುದ್ಧಯಃ ॥೧॥**

**ತೇ ಪ್ರೇತ್ಯಾಽಮುತ್ರ ನರಕೇ ಅವೀಚಾಖ್ಯೇಽತಿದಾರುಣೇ ।**
**ಯೋಜನಾನಾಂ ಶತೋಚ್ಛ್ರಾಯಾದ್ಗಿರಿಮೂರ್ಧ್ನಃ ಪತಂತಿ ಹಿ ॥೨॥**

**ಅನಾಕಾಶೇಽಧಃಶಿರಸಃ ತದವೀಚೀತಿ ನಾಮಕೇ ।**
**ಯತ್ರ ಸ್ಥಲಂ ದೃಶ್ಯತೇ ಚ ಜಲವದ್ವೀಚಿಸಂಯುತಂ ॥೩॥**

---

ನಾರಾಯಣನು ಹೇಳಿದನು—ಎಲೈ ದೇವರ್ಷಿಯಾದ ನಾರದನೇ, ಧನದ, ದಾನ ವಿನಿಮಯ ಈ ವಿಷಯಗಳಲ್ಲಿ ಕೆಟ್ಟಬುದ್ಧಿಯುಳ್ಳ ಯಾವ ಮನುಷ್ಯರು ಯಾವಾಗಲೂ ಸಾಕ್ಷಿಸ್ಥಾನವನ್ನು ಹೊಂದಿ ಸುಳ್ಳನ್ನು ಹೇಳುವಂತೆ ಇತರರನ್ನು ಪ್ರೇರಿಸುವರೋ, ||೧||

ಅವರು ಮೃತರಾದ ಮೇಲೆ ಭಯಂಕರವಾದ ಅವೀಚಿಯೆಂಬ ನರಕದಲ್ಲಿ ನೂರುಯೋಜನ ಎತ್ತರ ಉಳ್ಳ ಪರ್ವತಶಿಖರದಿಂದ ಬೀಳುವರು. ||೨||

ಅವರು ತಲೆಕೆಳಗಾಗಿ ಯಾವ ಅವಲಂಬನೆಯೂ ಇಲ್ಲದ ಆ ಅವೀಚಿಯೆಂಬ ಹೆಸರುಳ್ಳ ನರಕದಲ್ಲಿ ಬೀಳುವರು. ಅಲ್ಲಿರುವ ಪ್ರದೇಶವು ನೀರಿನ ಹಾಗೆ ತೆರೆಗಳಳ್ಳು ದ್ದಾಗಿರುವಂತೆ ಕಾಣುತ್ತಿರುತ್ತದೆ. ||೩||

ಅವೀಚಿಮತ್ತತಸ್ತತ್ರ ತಿಲಶಶ್ಛಿನ್ನವಿಗ್ರಹಃ ।
ಮ್ರಿಯತೇ ನೈವ ದೇವರ್ಷೇ ಪುನರೇವಾವರೋಪ್ಯತೇ ॥೪॥

ಯೋ ವಾ ದ್ವಿಜೋ ವಾ ರಾಜನ್ಯೋ ವೈಶ್ಯೋ ವಾ ಬ್ರಹ್ಮಸಂಭವ ।
ಸೋಮಪೀಥಸ್ತತ್ಕಲತ್ರಂ ಸುರಾಂ ವಾ ಪಿಬತೀವ ಹಿ ॥೫॥

ಪ್ರಮಾದತಸ್ತು ತೇಷಾಂ ವೈ ನಿರಯೇ ಪರಿಪಾತನಂ ।
ಕುರ್ವಂತಿ ಯಮದೂತಾಸ್ತೇ ಪಾನಂ ಕಾರ್ಷ್ಣಾಯಸೋ ಮುನೇ॥೬॥

ವಹ್ನಿನಾ ದ್ರವಮಾಣಸ್ಯ ನಿತರಾಂ ಬ್ರಹ್ಮಸಂಭವ ।
ಸಂಭಾವನೇನ ಸ್ವಸ್ಯೈವ ಯೋಽಧಮೋಽಪಿ ನರಾಧಮಃ ॥೭॥

ವಿದ್ಯಾಜನ್ಮತಪೋವರ್ಣಾಶ್ರಮಾಚಾರವತೋ ನರಾನ್ ।
ವರೀಯಸೋಽಪಿ ನ ಬಹುಮನ್ಯತೇ ಪುರುಷಾಧಮಃ ॥೮॥

---

ಎಲೈ ದೇವರ್ಷಿಯೇ, ಅವೀಚಿಯೆಂಬ ಆ ನರಕದಲ್ಲಿ ಬಿದ್ದು ಬಹಳ ಸೂಕ್ಷ್ಮ ವಾಗಿ ಅವನ ಶರೀರವೆಲ್ಲವೂ ಕತ್ತರಿಸಲ್ಪಟ್ಟರೂ ಸಹ ಆ ಮನುಷ್ಯನು ಸಾಯುವುದಿಲ್ಲ. ಅಲ್ಲದೆ ತಿರುಗಿಯೂ ಅಲ್ಲಿಯೇ ಬೀಳಿಸಲ್ಪಡುವನು. ॥೪॥

ಎಲೈ ಬ್ರಹ್ಮಪುತ್ರನಾದ ನಾರದನೇ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯರಲ್ಲಿ ಯಾರೇ ಆಗಲಿ ಸೋಮಪಾನವನ್ನು ಮಾಡಿ ದೀಕ್ಷಾಸಮಾಪ್ತಿಗೆ ಪೂರ್ವದಲ್ಲಿ ಪತ್ನೀಗಮನ ವನ್ನಾಗಲಿ ಸುರಾಪಾನವನ್ನಾಗಲೀ ಮಾಡುವರೋ, ॥೫॥

ಅದು ಬುದ್ಧಿಪೂರ್ವಕವಲ್ಲದಿದ್ದರೂ ಕೂಡ ಅವರನ್ನು ನರಕದಲ್ಲಿ ಬೀಳಿಸಿ ಯಮದೂತರು ಅವರಿಗೆ ಲೋಹಪಾನವನ್ನು ಮಾಡಿಸುವರು. ॥೬॥

ಎಲೈ ಬ್ರಹ್ಮಪುತ್ರನಾದ ನಾರದನೇ, ಹೆಚ್ಚಾಗಿ ಬೆಂಕಿಯಲ್ಲಿ ಕಾದು ಕರಗಿ ದ್ರವರೂಪವಾಗಿ ಇರುವ ಲೋಹಪಾನವನ್ನು ಯಮದೂತರು ಅವರಿಗೆ ಮಾಡಿಸು ವರು. ಯಾವನು ನೀಚಜಾತಿಯಲ್ಲಿ ಹುಟ್ಟಿದ್ದರೂ ಕೂಡ ಆತ್ಮಗೌರವದ ಅಹಂಕಾರದ ಬುದ್ಧಿಯಿಂದ, ॥೭॥

ಹೆಚ್ಚಾದ ವಿದ್ಯೆಯಿಂದಲೂ, ಉತ್ತಮಜಾತಿಯಲ್ಲಿ ಹುಟ್ಟಿನಿಂದಲೂ ತಪೋ ವಿಶೇಷದಿಂದಲೂ ಕೂಡಿ, ವರ್ಣಾಶ್ರಮಧರ್ಮಗಳ ಆಚಾರಶೀಲರಾದ ಬ್ರಾಹ್ಮಣರೇ ಮೊದಲಾದ ಉತ್ತಮರನ್ನೂ ಯಾವ ಕೆಟ್ಟಮನುಷ್ಯನು ಗೌರವಿಸುವುದಿಲ್ಲವೋ ॥೮॥

ಸ ನೀಯತೇ ಯಮುಭಟ್ಯೈಃ ಕ್ಷಾರಕರ್ದಮನಾಮಕೇ ।
ನಿರಯೇಽರ್ವಾಕ್ ಶಿರಾ ಘೋರಾ ದುರಂತಂ ಯಾತನಾಶ್ನುತೇ ॥೯॥

ಯೇ ತ್ವೈ ನರಾ ಯಜಂತ್ಯನ್ಯಂ ನರಮೇಧೇನ ಮೋಹಿತಾಃ ।
ಸ್ತ್ರಿಯೋಽಪಿ ವಾ ನರಪಶುಂ ಖಾದಂತ್ಯತ್ರ ಮಹಾಮುನೇ ॥೧೦॥

ಪಶವೋ ನಿಹಿತಾಸ್ತೇ ತು ಯಮುಸದ್ಮನಿ ಸಂಗತಾಃ ।
ಸೌನಿಕಾ ಇವ ತೇ ಸರ್ವೇ ವಿದಾರ್ಯ ಶಿತಧಾರಯಾ ॥೧೧॥

ಅಸೃಕ್ಪಿಬಂತಿ ನೃತ್ಯಂತಿ ಗಾಯಂತಿ ಬಹುಧಾ ಮುನೇ ।
ಯಥೇಹ ಮಾಂಸಭೋಕ್ತಾರಃ ಪುರುಷಾದಾ ದುರಾಸದಾಃ ॥೧೨॥

ಅನಾಗಸೋಽಪಿ ಯೋಽರಣ್ಯೇ ಗ್ರಾಮೇ ವಾ ಬ್ರಹ್ಮಪುತ್ರಕೆ ।
ವೈಶ್ರಂಭಕೈರುಪಸೃತಾನ್ವಿಶ್ರಂಭಯ್ಯ ಜಿಜೀವಿಷೂನ್ ॥೧೩॥

---

ಅವನು ಯಮುಭಟರಿಂದ, ಕ್ಷಾರಕರ್ದಮವೆಂಬ ನರಕಕ್ಕೆ ತಳ್ಳಲ್ಪಟ್ಟು, ಅಲ್ಲಿ ತಲೆಕೆಳಕಾಗಿ ಬಿದ್ದು ಹೆಚ್ಚಾದ ಬಾಧೆಯನ್ನು ಅನುಭವಿಸುವನು. ॥೯॥

ಎಲೈ ಋಷಿಶ್ರೇಷ್ಠನೇ, ಯಾವ ಪುರುಷನೂ, ಸ್ತ್ರೀಯರೂ, ಅಜ್ಞಾನದಿಂದ ಭೈರವಾದಿಗಳನ್ನು ದ್ದೇಶಿಸಿ ನರಮೇಧಯಾಗವನ್ನು ಮಾಡುವರೋ ಅವರು ಆ ನರಕ ದಲ್ಲಿ ಬಿದ್ದು ನರಪಶುವನ್ನೇ ತಿನ್ನುವರು. ॥೧೦॥

ಅವರು ಯಾವ ಪಶುಗಳನ್ನು ಕೊಂದಿರುವರೋ ಅವುಗಳು ಎಲ್ಲವೂ ಯಮು ಲೋಕದಲ್ಲಿ ಎದುರಿಗೆ ಬಂದು ಕಟುಗರಾದ ವ್ಯಾಧರಂತೆ ಬಹಳ ಹರಿತವಾದ ಹಲ್ಲು ಗಳಿಂದ ಅವರ ದೇಹವನ್ನು ಬಗೆದು, ॥೧೧॥

ಅವರ ದೇಹದ ರಕ್ತವನ್ನು ಕುಡಿಯುವುವು, ನರ್ತನಮಾಡುವುವು, ಮತ್ತು ಮದಿಸಿ ಅನೇಕವಿಧವಾಗಿ ಗಾನಮಾಡುವುವು. ಈ ಲೋಕದಲ್ಲಿ ಪುರುಷಮಾಂಸ ಭಕ್ಷಣೆಮಾಡುತ್ತ ಸಂತೋಷಪಡುವ ಜನರಂತೆ ಆ ಪಶುಗಳು ಪರಲೋಕದಲ್ಲಿ ಅದೇ ರೀತಿಯಲ್ಲಿ ಮಾಡುವುವು. ॥೧೨॥

ಎಲೈ ನಾರದನೇ, ಯಾವ ಅಪರಾಧವನ್ನೂ ಮಾಡದೆ ಅರಣ್ಯದಲ್ಲೂ ಅಥವಾ ಗ್ರಾಮದಲ್ಲೂ ಜೀವಿಸುತ್ತಿರುವ ಪಶುಗಳನ್ನು ಕೃತ್ರಿಮವಾದ ವಿಶ್ವಾಸವನ್ನು ತೋರಿಸಿ ಹಿಡಿದುಕೊಂಡು, ॥೧೩॥

ಶೂಲಸೂತ್ರಾದಿಷು ಪ್ರೋತಾನ್ ಕ್ರೀಡನೋತ್ಕಾರಕಾನಿವ ।
ಪಾತಯಂತಿ ಚ ತೇ ಪ್ರೇತ್ಯ ಶೂಲಪಾತೇ ಪತಂತಿ ಹ ॥೧೪॥

ಶೂಲಾದಿಷು ಪ್ರೋತದೇಹಾಃ ಕ್ಷುತ್ತೃಡ್ಭ್ಯಾಂ ಚಾತಿಪೀಡಿತಾಃ ।
ತಿಗ್ಮತುಂಡೈಃ ಕಂಕಬಕೈರಿತಶ್ಚೇತಶ್ಚ ತಾಡಿತಾಃ ॥೧೫॥

ಪೀಡಿತಾ ಆತ್ಮಶಮಲಂ ಬಹುಧಾ ಸಂಸ್ಮರಂತಿ ಹಿ ।
ಯೇ ಭೂತಾನುದ್ವೇಜಯಂತಿ ನರಾ ಉಲ್ಬಣವೃತ್ತಯಃ ॥೧೬॥

ಯಥಾ ಸರ್ಪಾದಿಕಾಸ್ತೇಽಪಿ ನರಕೇ ನಿಪತಂತಿ ಹಿ ।
ದಂದಶೂಕಾಭಿಧಾನೇ ಚ ಯತ್ರೋತ್ತಿಷ್ಠಂತಿ ಸರ್ವತಃ ॥೧೭॥

ಪಂಚಾನನಾಃ ಸಪ್ತಮುಖಾ ಗ್ರಸಂತಿ ನರಕಾಗತಾನ್ ।
ಯಥಾ ಬಿಲೇಶಯಾ ವಿಪ್ರ ಕ್ರೂರಬುದ್ಧಿಸಮನ್ವಿತಾಃ ॥೧೮॥

---

ಶೂಲಸೂತ್ರ ಮೊದಲಾದ ವಧ್ಯಸ್ಥಾನಗಳಲ್ಲಿ ಕ್ರೀಡಾಸಾಧನಗಳಂತೆ ಚುಚ್ಚಿ ಪೋಣಿಸಿ ಯಾರು ಹಿಂಸೆಪಡಿಸುವರೋ ಅವರು ಮೃತರಾದ ಮೇಲೆ ಶೂಲಪಾತವೆಂಬ ನರಕದಲ್ಲಿ ಬೀಳುವರು. ॥೧೪॥

ಅವರು ಶೂಲದಲ್ಲಿ ಸಿಕ್ಕಿಕೊಂಡು ಜರ್ಝರಿತವಾದ ದೇಹವುಳ್ಳವರಾಗಿ ಹಸಿವು ಬಾಯಾರಿಕೆಗಳಿಂದ ಬಹಳವಾಗಿ ಪೀಡಿತರಾಗಿ ತೀಕ್ಷ್ಣವಾದ ಕೊಕ್ಕುಗಳುಳ್ಳ, ಕಾಗೆ, ಬಕಪಕ್ಷಿ ಇವುಗಳಿಂದ ಎಲ್ಲ ಕಡೆಯಲ್ಲೂ ಕುಕ್ಕಿ ಚುಚ್ಚಿ ಪೀಡಿತರಾಗಿ, ॥೧೫॥

ಬಹಳ ವ್ಯಥೆಯನ್ನು ಹೊಂದಿ ಆಗ ತಾವು ಮಾಡಿದ ಪಾಪಕೃತ್ಯಗಳನ್ನು ಅನೇಕ ಪ್ರಕಾರವಾಗಿ ಸ್ಮರಿಸಿಕೊಳ್ಳುವರು. ಕ್ರೂರಸ್ವಭಾವವುಳ್ಳ ಯಾವಜನರು ಪ್ರಾಣಿಗಳನ್ನು ಕಠಿಣವಾದ ಮಾತುಗಳಿಂದ ಸರ್ಪಗಳಂತೆ ಹೆದರಿಸುವರೋ, ॥೧೬॥

ಅವರು ದಂದಶೂಕವೆಂಬ ನರಕದಲ್ಲಿ ಬೀಳುವರು. ಅಲ್ಲಿ ಹಿಂದೆ ಅವರಿಂದ ಹಿಂಸಿಸಲ್ಪಟ್ಟಿದ್ದ ಪ್ರಾಣಿಗಳು ಎಲ್ಲಾ ಕಡೆಗಳಲ್ಲೂ ಎದುರಿಗೆ ಬಂದು, ॥೧೭॥

ಐದು ಮತ್ತು ಏಳು ಮುಖವುಳ್ಳವುಗಳಾಗಿ ನರಕದಲ್ಲಿ ಅಂಥ ಮನುಷ್ಯರನ್ನು ಹಾವುಗಳು ಇಲಿಗಳನ್ನು ಬಾಧೆಪಡಿಸುವಂತೆ, ಬಹಳ ಕಠಿಣವಾಗಿ ಹಿಂಸಿಸುವರು.॥೧೮॥

ಯೇಽವಟೇಷು ಕುಸೂಲಾದಿ ಗುಹಾದಿಷು ನಿರುಂಧತೇ ।
ತಾನಮುತ್ರೋದ್ಯತಕರಾಃ ಕೀನಾಶಪರಿಸೇವಕಾಃ ॥೧೯॥

ತೇಷ್ವೇವೋಪನಿಶಿತ್ವಾ ಚ ಸಗರೇಣ ಚ ವಹ್ನಿನಾ ।
ಧೂಮೇನ ಚ ನಿರುಂಧಂತಿ ಪಾಪಕರ್ಮರತಾನ್ನರಾನ್ ॥೨೦॥

ಯೋಽತಿಥೀನ್ ಸಮುಯಪ್ರಾಪ್ತಾನ್ ದಿಧಕ್ಷುರಿವ ಚಕ್ಷುಷಾ ।
ಪಾಪೇನೇಹಾಲೋಕಯೇಚ್ಚ ಸ್ವಯಂ ಗೃಹಪತಿರ್ದ್ವಿಜಃ ॥೨೧॥

ತಸ್ಯಾಪಿ ಪಾಪದೃಷ್ಟೇರ್ಹಿ ನಿರಯೇ ಯಮುಕಿಂಕರಾಃ ।
ಅಕ್ಷಿಣೀ-ವಜ್ರತುಂಡಾ ಯೇ ಕಂಕಾಃ ಕಾಕವಟಾದಯಃ ॥೨೨॥

ಗೃಧ್ರಾಃ ಕ್ರೂರತರಾಶ್ಚಾಪಿ ಪ್ರಸಹ್ಯೋತ್ಪಾಟಯಂತಿ ಹಿ ।
ಯ ಆಢ್ಯಾಭಿಮತಿರ್ಯಾತಿ ಅಹಂಕೃತ್ಯಾಽತಿ ಗರ್ವಿತಃ ॥೨೩॥

---

ಯಾರು ಪ್ರಕಾಶವಿಲ್ಲದ ಗುಹಾದಿಗಳಲ್ಲಿ ಕತ್ತಲೆಯ ಕೋಣೆಗಳಲ್ಲಿ ಪ್ರಾಣಿಗಳನ್ನು ತಳ್ಳಿ ತೊಂದರೆಪಡಿಸುವರೋ ಅವರನ್ನು ಆ ನರಕದಲ್ಲಿ ನೇಲಕ್ಕೆತ್ತಿದ ಕೈಗಳುಳ್ಳ ಯಮಭಟರು ||೧೯||

ಅಂತಹ ಗೃಹಗಳಲ್ಲೇ ಪ್ರವೇಶಮಾಡಿಸಿ ವಿಷವಾಯು, ಬೆಂಕಿ, ಹೊಗೆ ಇವುಗಳು ಒಳಗೆ ಹೋಗುವಂತೆ ಮಾಡಿ ಆ ದುಷ್ಕರ್ಮಶೀಲರನ್ನು ಹಿಂಸಿಸುವರು. ||೨೦||

ಮನೆಗೆ ಯಜಮಾನನಾದ ಯಾವ ದ್ವಿಜನು ಮಧ್ಯಾಹ್ನಕಾಲಕ್ಕೆ ಬಂದ ಅತಿಥಿಗಳನ್ನು ಸತ್ಕರಿಸದೇ ಪಾಪಬುದ್ಧಿಯಿಂದ ಅವರನ್ನು ಕ್ರೂರವಾಗಿ ಸುಟ್ಟುಬಿಡುವವನಂತೆ ನೋಡುತ್ತಾ ತಿರಸ್ಕರಿಸುವನೋ, ||೨೧||

ಅಂತಹ ಕ್ರೂರದೃಷ್ಟಿಯುಳ್ಳ ಪಾಪಿಗಳಾದ ಮನುಷ್ಯರನ್ನು ಯಮಭಟರು ನರಕದಲ್ಲಿ ಹಿಂಸಿಸಿ ಕಠಿಣವಾದ ಕೊಕ್ಕುಗಳುಳ್ಳ ಕಾಗೆ, ಗಿಡುಗ, ಮೊದಲಾದುವುಗಳಿಂದಲೂ, ||೨೨||

ಕ್ರೂರಸ್ವಭಾವವುಳ್ಳ ಹದ್ದು ಮೊದಲಾದುವುಗಳಿಂದಲೂ, ಅವರ ಕಣ್ಣುಗಳನ್ನು ಕೀಳಿಸುವರು. ಯಾವ ಮನುಷ್ಯನು ಹೆಚ್ಚು ಧನವನ್ನು ಹೊಂದಿದ್ದರೂ ವಿಶೇಷವಾದ ಗರ್ವದಿಂದ, ||೨೩||

ತಿರ್ಯಕ್ಪ್ರೇಕ್ಷಣ ಏವಾತ್ರಾಭಿವಿಶಂಕೀ ನರಾಧಮಃ ।
ಚಿಂತಯಾಽರ್ಥಸ್ಯ ಸರ್ವತ್ರಾಯತಿ ವ್ಯಯಸ್ವರೂಪಯಾ ॥೨೪॥

ಶುಷ್ಯದ್ಧೃದಯವಕ್ತ್ರಶ್ಚ ನಿರ್ವೃತಿಂ ನೈವ ಗಚ್ಛತಿ ।
ಗ್ರಹವದ್ರಕ್ಷತೇ ಚಾರ್ಥಂ ಸ ಪ್ರೇತೋ ಯಮಕಿಂಕರೈಃ ॥೨೫॥

ಸೂಚೀಮುಖೇ ಚ ನರಕೇ ಪಾತ್ಯತೇ ನಿಜಕರ್ಮಣಾ ।
ವಿತ್ತಗ್ರಹಂಚ ಪುರುಷಂ ವಾಯಕಾ ಇವ ಯಾಮ್ಯಕಾಃ ॥೨೬॥

ಕಿಂಕರಾಃ ಸರ್ವತೋಽಂಗೇಷು ಸೂತ್ರೈಃ ಪರಿವಯಂತಿ ಹಿ ।
ಏತೇ ಬಹುವಿಧಾಃ ವಿತ್ತನರಕಾಃ ಪಾಪಕರ್ಮಣಾಂ ॥೨೭॥

ನರಾಣಾಂ ಶತಶಸ್ಸಂತಿ ಯಾತನಾಸ್ಥಾನಭೂಮಯಃ ।
ಸಹಸ್ರಶೋಽಪಿ ದೇವರ್ಷೇ ಉಕ್ತಾನುಕ್ತಾಸ್ತಥಾಽಪಿ ಹಿ ॥೨೮॥

---

ಧನಸಂಗ್ರಹವನ್ನೇ ಮಾಡುತ್ತ ಎಲ್ಲರಲ್ಲೂ ಸಂದೇಹಬುದ್ಧಿಯುಳ್ಳವನಾಗಿ, ಯಾವಾಗಲೂ ಧನಸಂಗ್ರಹ, ವ್ಯಯ, ಇದೇ ಆಲೋಚನೆಯನ್ನು ಧನಪಿಶಾಚಿಯ ಹಾಗೆ ಮಾಡುತ್ತಿರುವನೋ, ॥೨೪॥

ಮತ್ತು ಒಣಗಿದ ಮನಸ್ಸು ಮುಖಗಳುಳ್ಳವನಾಗಿ ಸಮಾಧಾನವಿಲ್ಲದೆ ಬ್ರಹ್ಮ ಪಿಶಾಚಿಯ ಹಾಗೆ ಧನವನ್ನು ಸಂಗ್ರಹಿಸುತ್ತಿರುವನೋ, ಅವನು ಮೃತನಾದ ಮೇಲೆ ಯಮದೂತರಿಂದ, ॥೨೫॥

ಅವನ ಪಾಪಕರ್ಮಕ್ಕಾಗಿ ಸೂಚೀಮುಖವೆಂಬ ನರಕದಲ್ಲಿ ಬೀಳಿಸಲ್ಪಡುವನು. ಇಂಥ ಬ್ರಹ್ಮರಾಕ್ಷಸನಾದ ಮನುಷ್ಯನನ್ನು ಯಮನ ಅನುಚರರು ಶೂಲಕ್ಕೇರಿಸುವರು. ॥೨೬॥

ಎಲೈ ನಾರದನೇ, ಅವರು ಆ ಮನುಷ್ಯನ ಸರ್ವಾವಯವಗಳನ್ನು ಹೊಲಿಗೆ (ದರ್ಜಿ)ಯವರಂತೆ ಸೂಜಿಗಳಿಂದ ಚುಚ್ಚಿಬಿಡುವರು. ಪಾಪಕೆಲಸಗಳನ್ನು ಮಾಡಿದ ಜನರು ಅನುಭವಿಸಬೇಕಾದ ಇನ್ನೂ ಅನೇಕವಿಧವಾದ ನರಕಗಳು ಇರುವುವು. ॥೨೭॥

ಎಲೈ ದೇವರ್ಷಿಯಾದ ನಾರದನೇ, ವಿಶೇಷವಾದ ಬಾಧೆಯನ್ನು ಕೊಡುವ ಇದುವರೆಗೂ ಹೇಳಲ್ಪಡದೇ ಇರುವ ನರಕಗಳೂ ಇನ್ನೂ ಸಾವಿರಾರು ವಿಧಗಳಾಗಿರುವುವು. ॥೨೮॥

ವಿಶಂತಿ ನರಕಾನೇತಾನ್ ಯಾತನಾಬಹುಳಾನ್ಮುನೇ ।
ತಥಾ ಧರ್ಮಪರಾಶ್ಚಾಪಿ ಲೋಕಾನ್ಯಾಂತಿ ಸುಖೋದ್ಗತಾನ್ ॥೨೯॥

ಸ್ವಧರ್ಮೋ ಬಹುಧಾ ಗೀತೋ ಯಥಾ ತವ ಮಹಾಮುನೇ ।
ದೇವೀಪೂಜನರೂಪೋ ಹಿ ದೇವ್ಯಾರಾಧನಲಕ್ಷಣಃ ॥೩೦॥

ಯೇನಾನುಷ್ಠಿತಮಾತ್ರೇಣ ನರೋ ನ ನರಕಂ ವ್ರಜೇತ್ ।
ಸಾ ದೇವೀ ಭವ ಪಾಥೋಧೇರುದ್ಧರ್ತ್ರೀ ಪೂಜಿತಾ ನೃಣಾಂ ॥೩೧॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಅಷ್ಟಮಸ್ಕಂಧೇ
ತ್ರಯೋವಿಂಶೋಽಧ್ಯಾಯಃ

---

ಎಲೈ ನಾರದನೇ, ಹೆಚ್ಚಾದ ಬಾಧೆಯನ್ನು ಕೊಡುವ ಈ ನರಕಗಳನ್ನು ಪಾಪಕರ್ಮಿಗಳು ಹೊಂದುವರು. ಹಾಗೆಯೇ ಧಾರ್ಮಿಕರು ಸುಖಪ್ರದಗಳಾದ ಲೋಕಗಳನ್ನೂ ಹೊಂದುವರು. ॥೨೯॥

ಎಲೈ ಋಷಿಶ್ರೇಷ್ಠನೇ, ಉತ್ತಮಲೋಕಪ್ರಾಪ್ತಿಗೆ ಕಾರಣವಾದ ಧರ್ಮ ಸ್ವರೂಪವು ಅನೇಕವಿಧವಾಗಿ ನಿನಗೆ ಹೇಳಲ್ಪಟ್ಟಿತು. ಮತ್ತು ದೇವಿಯ ಸ್ಥೂಲ ಮೂರ್ತಿಯ ಪೂಜೆಯೂ ವಿರಾಟ್ಸ್ವರೂಪದ ಪೂಜಾವಿಧಾನವೂ ಸಹ ವರ್ಣಿಸಲ್ಪಟ್ಟಿತು. ॥೩೦॥

ಯಾವ ದೇವಿಯ ಪೂಜಾನುಷ್ಠಾನದಿಂದ ಮನುಷ್ಯನು ನರಕವನ್ನು ಹೊಂದುವುದಿಲ್ಲವೋ ಅಂತಹ ದೇವಿಯನ್ನು ವಿಧಿಪೂರ್ವಕವಾಗಿ ಪೂಜಿಸಿದ್ದೇ ಆದರೆ ಆ ದೇವಿಯು ಮನುಷ್ಯನನ್ನು ಸಂಸಾರಸಮುದ್ರದಿಂದ ಉದ್ಧರಿಸಿ ಮೋಕ್ಷವನ್ನು ಕೊಡುವಳು. ॥೩೧॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಎಂಟನೆಯ ಸ್ಕಂಧದಲ್ಲಿ
ಇಪ್ಪತ್ತುಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಅಷ್ಟಮಸ್ಕಂಧೇ

### ॥ ಚತುರ್ವಿಂಶೋಽಧ್ಯಾಯಃ ॥

### ಇಪ್ಪತ್ತುನಾಲ್ಕನೆಯ ಅಧ್ಯಾಯವು

॥ ನಾರದ ಉವಾಚ ॥

**ಧರ್ಮಶ್ಚ ಕೀದೃಶಸ್ತಾತ ದೇವ್ಯಾರಾಧನಲಕ್ಷಣಃ ।**
**ಕಥಮಾರಾಧಿತಾ ದೇವೀ ಸಾ ದದಾತಿ ಪರಂ ಪದಂ ॥೧॥**

**ಆರಾಧನವಿಧಿಃ ಕೋಽವಾ ಕಥಮಾರಾಧಿತಾ ಕದಾ ।**
**ಕೇನ ಸಾ ದುರ್ಗನರಕಾತ್‌ದುರ್ಗಾ ತ್ರಾಣಪ್ರದಾ ಭವೇತ್ . ॥೨॥**

॥ ಶ್ರೀನಾರಾಯಣ ಉವಾಚ ॥

**ದೇವರ್ಷೇ ಶೃಣು ಚಿತ್ತೈಕಾಗ್ರ್ಯೇಣ ಯೇ ವಿದುಷಾಂ ವರ ।**
**ಯಥಾ ಪ್ರಸೀದತೇ ದೇವೀ ಧರ್ಮಾರಾಧನತಃ ಸ್ವಯಂ ॥೩॥**

---

ನಾರದನು ಹೇಳಿದನು—ಓ ನಾರಾಯಣನೇ, ದೇವಿಯನ್ನು ಪೂಜಿಸಲು ಸಾಧನವಾದ ಧರ್ಮದ ಸ್ವರೂಪವು ಎಂಥಾದ್ದು? ಯಾವ ವಿಧಿಯನ್ನನುಸರಿಸಿ ಪೂಜಿಸಿದರೆ ದೇವಿಯು ಶ್ರೇಷ್ಠವಾದ ಮೋಕ್ಷವನ್ನು ಕೊಡುವಳು ? ॥೧॥

ಆ ದೇವಿಯನ್ನು ಪೂಜಿಸುವ ವಿಧಿಯು ಯಾವುದು ? ಯಾವ ಸ್ಥಾನದಲ್ಲಿ ಯಾವ ಕಾಲದಲ್ಲಿ ಯಾವ ಸ್ತೋತ್ರವಿಶೇಷಗಳಿಂದ ಆ ದುರ್ಗಾದೇವಿಯನ್ನು ಪೂಜಿಸಿದರೆ ಆವಳು ದುಃಖರೂಪವಾದ ನರಕದಿಂದ ಮನುಷ್ಯನನ್ನು ಉದ್ಧರಿಸುವಳು ? ॥೨॥

ನಾರಾಯಣನು ಹೇಳಿದನು—ಎಲೈ ದೇವರ್ಷಿಯಾದ ನಾರದನೇ, ವಿದ್ವಾಂಸರಲ್ಲಿ ಶ್ರೇಷ್ಠನೇ, ಕೇಳು. ಏಕಾಗ್ರಚಿತ್ತದಿಂದ ಧರ್ಮವನ್ನನುಸರಿಸಿ ದೇವಿಯನ್ನು ಪೂಜಿಸುವ ವಿಧಾನವನ್ನು ಕೇಳುವವನಾಗು. ॥೩॥

ಸ್ವಧರ್ಮೋ ಯಾದೃಶಃ ಪ್ರೋಕ್ತಃ ತಂ ಚ ಮೇ ಶೃಣು ನಾರದ ।
ಅನಾದಾವಿಹಸಂಸಾರೇ ದೇವೀ ಸಂಪೂಜಿತಾ ಸ್ವಯಂ ॥೪॥

ಪರಿಪಾಲಯತೇ ಘೋರಸಂಕಟಾದಿಷು ಸಾ ಮುನೇ ।
ಸಾ ದೇವೀ ಪೂಜ್ಯತೇ ಲೋಕೈಃ ಯಥಾವತ್ತದ್ವಿಧಿಂ ಶೃಣು ॥೫॥

ಪ್ರತಿಪತ್ತಿಥಿಮಾಸಾದ್ಯ ದೇವೀಮಾಜ್ಯೇನ ಪೂಜಯೇತ್ ।
ಘೃತಂ ದದ್ಯಾದ್ಬ್ರಾಹ್ಮಣಾಯ ರೋಗಹೀನೋ ಭವೇತ್ಸದಾ ॥೬॥

ದ್ವಿತೀಯಾಯಾಂ ಶರ್ಕರಯಾ ಪೂಜಯೇಜ್ಜಗದಂಬಿಕಾಂ ।
ಶರ್ಕರಾ ಪ್ರದದೇದ್ವಿಪ್ರೇ ದೀರ್ಘಾಯುರ್ಜಾಯತೇ ನರಃ ॥೭॥

ತೃತೀಯಾದಿವಸೇ ದೇವ್ಯೈ ದುಗ್ಧಂ ಪೂಜನಕರ್ಮಣಿ।
ಕ್ಷೀರಂ ದತ್ವಾ ದ್ವಿಜಾಗ್ರ್ಯಾಯ ಸರ್ವದುಃಖಾತಿಗೋ ಭವೇತ್ ॥೮॥

---

ಎಲೈ ನಾರದನೇ, ಶಾಸ್ತ್ರಗಳಲ್ಲಿ ಧರ್ಮಸ್ವರೂಪವು ಯಾವರೀತಿಯಾಗಿ ಹೇಳಲ್ಪಟ್ಟಿರುವುದೋ ಅದನ್ನು ಕೇಳು. ಆದಿಯಿಲ್ಲದ ಈ ಸಂಸಾರದಲ್ಲಿ ಸಿಕ್ಕಿರುವ ಮನುಷ್ಯನನ್ನು ದೇವಿಯು ವಿಧ್ಯುಕ್ತವಾಗಿ ಪೂಜಿಸಲ್ಪಟ್ಟದ್ದೇ ಆದರೆ, ॥೪॥

ಅವನಿಗೆ ಸಂಭವಿಸುವ ಆಪತ್ತುಗಳಿಂದ ಅವನನ್ನು ಕಾಪಾಡುವಳು. ಲೋಕದ ಜನರಿಂದ ಆ ದೇವಿಯು ಪೂಜಿಸಲ್ಪಡುವ ವಿಧಾನವನ್ನು ಕೇಳು. ॥೫॥

ಆ ದೇವಿಯನ್ನು ಪಾಡ್ಯದಿಂದ ಪ್ರಾರಂಭಿಸಿ ಹದಿನೈದು ತಿಥಿಗಳಲ್ಲೂ ಪೂಜಿಸಬೇಕು. ಪಾಡ್ಯದ ದಿವಸದಲ್ಲಿ ದೇವಿಯನ್ನು ಪೂಜಿಸಿ ಗೋಘೃತವನ್ನು ನಿವೇದನಮಾಡಿ ಸದಕ್ಷಿಣಾಕವಾದ ಆ ಆಜ್ಯವನ್ನು ಬ್ರಾಹ್ಮಣನಿಗೆ ದಾನಮಾಡಿದರೆ ಮನುಷ್ಯನು ಯಾವಾಗಲೂ ನೀರೋಗಿಯಾಗಿರುವನು. ॥೬॥

ದ್ವಿತೀಯಾತಿಥಿಯಲ್ಲಿ ಸಕ್ಕರೆಯಿಂದ ದೇವಿಯನ್ನು ಪೂಜಿಸಿ ಅನಂತರದಲ್ಲಿ ಅದನ್ನು ಬ್ರಾಹ್ಮಣನಿಗೆ ದಾನಮಾಡಿದರೆ ಮನುಷ್ಯನು ದೀರ್ಘಾಯುಷ್ಯವನ್ನು ಹೊಂದುವನು. ॥೭॥

ತೃತೀಯೆಯಲ್ಲಿ ದೇವಿಯನ್ನು ಪೂಜಿಸುವಾಗ ಹಾಲನ್ನು ನಿವೇದನಮಾಡಿ ಅದನ್ನು ಬ್ರಾಹ್ಮಣನಿಗೆ ದಾನಮಾಡಿದರೆ ಮನುಷ್ಯನು ಎಲ್ಲ ದುಃಖಗಳಿಂದಲೂ ಬಿಡುಗಡೆ ಹೊಂದುವನು. ॥೮॥

ಚತುರ್ಥ್ಯಾಂ ಪೂಜನೇಽಪೂಪಾ ದೇಯಾ ದೇವ್ಯೈ ದ್ವಿಜಾಯ ಚ ।
ಅಪೂಪಾ ಏವ ದಾತವ್ಯಾ ನ ವಿಘ್ನೈರಭಿಭೂಯತೇ ॥೯॥

ಪಂಚಮ್ಯಾಂ ಕದಳೀಜಾತಂ ಫಲಂ ದೇವ್ಯೈ ನಿವೇದಯೇತ್ ।
ತದೇವ ಬ್ರಾಹ್ಮಣೇ ದೇಯಂ ಮೇಧಾವಾನ್ಪುರುಷೋ ಭವೇತ್ ॥೧೦॥

ಷಷ್ಠೀತಿಥೌ ಮಧು ಪ್ರೋಕ್ತಂ ದೇವೀಪೂಜನಕರ್ಮಣಿ ।
ಬ್ರಾಹ್ಮಣಾಯಚ ದಾತವ್ಯಂ ಮಧುಕಾಂತಿರ್ಯತೋಭವೇತ್ ॥೧೧॥

ಸಪ್ತಮ್ಯಾಂ ಗುಡನೈವೇದ್ಯಂ ದೇವ್ಯೈ ದತ್ವಾ ದ್ವಿಜಾಯ ಚ ।
ಗುಡಂ ದತ್ವಾ ಶೋಕಹೀನೋ ಜಾಯತೇ ದ್ವಿಜಸತ್ತಮ ॥೧೨॥

ನಾರಿಕೇಳಮಥಾಷ್ಟಮ್ಯಾಂ ದೇವ್ಯೈ ನೈವೇದ್ಯಮರ್ಪಯೇತ್ ।
ಬ್ರಾಹ್ಮಣಾಯ ಪ್ರದಾತವ್ಯಂ ತಾಪಹೀನೋ ಭವೇನ್ನರಃ ॥೧೩॥

ನವಮ್ಯಾಂ ಲಾಜಮಂಬಾಯೈ ಚಾರ್ಪಯಿತ್ವಾ ದ್ವಿಜಾಯ ಚ ।
ದತ್ವಾ ಸುಖಾಧಿಕೋ ಭೂಯಾದಿಹಲೋಕೇ ಪರತ್ರ ಚ ॥೧೪॥

---

ಚತುರ್ಥಿಯ ದಿವಸದಲ್ಲಿ ಅಪೂಪನಿವೇದನೆಯನ್ನು ಮಾಡಿ ಅದನ್ನು ಬ್ರಾಹ್ಮಣನಿಗೆ ದಾನಮಾಡಿದರೆ ಎಲ್ಲಾ ವಿಘ್ನಗಳೂ ಪರಿಹಾರವಾಗುವುವು. ॥೯॥

ಪಂಚಮಿಯಲ್ಲಿ ಬಾಳೆಹಣ್ಣನ್ನು ನಿವೇದನಮಾಡಿ ಅದನ್ನು ಬ್ರಾಹ್ಮಣನಿಗೆ ದಾನಮಾಡಿದರೆ ಮನುಷ್ಯನು ಒಳ್ಳೆಯ ಬುದ್ಧಿಯನ್ನು ಹೊಂದುವನು. ॥೧೦॥

ಷಷ್ಠೀತಿಥಿಯಲ್ಲಿ ಮಧುನಿವೇದನವನ್ನು ಮಾಡಿ ಅದನ್ನು ಬ್ರಾಹ್ಮಣನಿಗೆ ದಾನಮಾಡಿದರೆ ಮನುಷ್ಯನು ಸುಂದರವಾದ ಕಾಂತಿಯನ್ನು ಹೊಂದುವನು. ॥೧೧॥

ಎಲೈ ನಾರದನೇ, ಸಪ್ತಮಿಯಲ್ಲಿ ಬೆಲ್ಲವನ್ನು ದೇವಿಗೆ ನೈವೇದ್ಯಮಾಡಿ ಅದನ್ನು ಬ್ರಾಹ್ಮಣನಿಗೆ ಅಥವಾ ದ್ವಿಜನಿಗೆ ದಾನಮಾಡಿದರೆ ಮನುಷ್ಯನು ದುಃಖವನ್ನು ಹೊಂದದಿರುವನು. ॥೧೨॥

ಅಷ್ಟಮಿಯಲ್ಲಿ ತೆಂಗಿನಕಾಯಿಯನ್ನು ನಿವೇದಿಸಿ ಅದನ್ನು ಬ್ರಾಹ್ಮಣನಿಗೆ ದಾನಮಾಡಿದರೆ ಯಾವಾಗಲೂ ತಾಪವಿಲ್ಲದೇ ಇರುವನು. ॥೧೩॥

ನವಮಿಯ ದಿವಸದಲ್ಲಿ ದೇವಿಗೆ ಅರಳನ್ನು ನಿವೇದನಮಾಡಿ ಅದನ್ನು ಬ್ರಾಹ್ಮಣನಿಗೆ ದಾನಮಾಡಿದರೆ ಈಲೋಕದಲ್ಲೂ ಪರಲೋಕದಲ್ಲೂ ಕೂಡ ಹೆಚ್ಚಾದ ಸುಖವನ್ನು ಹೊಂದುವನು. ॥೧೪॥

ದಶಮ್ಯಾಮರ್ಪಯಿತ್ವಾ ತು ದೇವ್ಯೈ ಕೃಷ್ಣತಿಲಾನ್ಮುನೇ ।
ಬ್ರಾಹ್ಮಣಾಯ ಪ್ರದತ್ವಾ ತು ಯಮಲೋಕಾ ದ್ಭಯಂ ನ ಹಿ ॥೧೫॥

ಏಕಾದಶ್ಯಾಂ ದಧಿ ತಥಾ ದೇವ್ಯೈ ಚಾರ್ಪಯತೇ ತು ಯಃ ।
ದದಾತಿ ಬ್ರಾಹ್ಮಣಾಯೈತತ್ ದೇವೀಪ್ರಿಯತಮೋ ಭವೇತ್ ॥೧೬॥

ದ್ವಾದಶ್ಯಾಂ ಪೃಥುಕಾನ್ದೇವ್ಯೈ ದತ್ವಾಽಽಚಾರ್ಯಾಯ ಯೋ ದದೇತ್ ।
ತಾನೇವ ಚ ಮುನಿಶ್ರೇಷ್ಠ ಸ ದೇವೀಪ್ರಿಯತಾಂ ವ್ರಜೇತ್ ॥೧೭॥

ತ್ರಯೋದಶ್ಯಾಂ ಚ ದುರ್ಗಾಯೈ ಚಣಕಾನ್ ಪ್ರದದಾತಿ ಚ ।
ತಾನೇವ ದತ್ವಾ ವಿಪ್ರಾಯ ಪ್ರಜಾಸಂತತಿ ವಾನ್ಭವೇತ್ ॥೧೮॥

ಚತುರ್ದಶ್ಯಾಂ ಚ ದೇವರ್ಷೇ ದೇವ್ಯೈ ಸಕ್ತೂನ್ಪ್ರಯಚ್ಛತಿ ।
ತಾನೇವ ದದ್ಯಾದ್ವಿಪ್ರಾಯ ಶಿವಸ್ಯ ದಯಿತೋ ಭವೇತ್ ॥೧೯॥

---

ಎಲೈ ನಾರದನೇ, ದಶಮಿತಿಥಿಯಲ್ಲಿ ದೇವಿಗೆ ಕರಿಯ ಎಳ್ಳನ್ನು ನಿವೇದಿಸಿ ಅದನ್ನು ಬ್ರಾಹ್ಮಣನಿಗೆ ದಾನಮಾಡಿದರೆ ಅವನಿಗೆ ಯಮಲೋಕದ ಭಯವಿಲ್ಲವು. ||೧೫||

ಏಕಾದಶಿಯಲ್ಲಿ ದೇವಿಗೆ ಮೊಸರನ್ನು ನಿವೇದಿಸಿ ಬ್ರಾಹ್ಮಣನಿಗೆ ದಾನಮಾಡಿದರೆ ದೇವಿಗೆ ಅತ್ಯಂತ ವಿಶ್ವಾಸಪಾತ್ರನಾಗುವನು. ||೧೬||

ಎಲೈ ಮುನಿಶ್ರೇಷ್ಠನಾದ ನಾರದನೇ, ದ್ವಾದಶಿಯಲ್ಲಿ ಅವಲಕ್ಕಿಯನ್ನು ನಿವೇದಿಸಿ ಅದನ್ನು ಆಚಾರ್ಯನಿಗೆ ದಾನಮಾಡುವುದರಿಂದ ಅವನ ವಿಷಯದಲ್ಲಿ ದೇವಿಯು ವಿಶ್ವಾಸವನ್ನು ತೋರಿಸುವಳು. ||೧೭||

ತ್ರಯೋದಶೀ ತಿಥಿಯಲ್ಲಿ ದುರ್ಗಾದೇವಿಗೆ ಕಡಲೇಬೇಳೆಯ ಭಕ್ಷ್ಯಗಳನ್ನು ನಿವೇದಿಸಿ ಬ್ರಾಹ್ಮಣನಿಗೆ ದಾನಮಾಡಿದರೆ ಪುತ್ರಸಂತಾನವನ್ನು ಹೊಂದುವನು||೧೮||

ದೇವರ್ಷಿಯಾದ ಎಲೈ ನಾರದನೇ, ಚತುರ್ದಶೀ ದಿವಸದಲ್ಲಿ ದೇವಿಗೆ ಹಿಟ್ಟಿನಿಂದ ಮಾಡಿದ ಭಕ್ಷ್ಯಗಳನ್ನು ನಿವೇದಿಸಿ ಅದನ್ನು ಬ್ರಾಹ್ಮಣನಿಗೆ ದಾನಮಾಡಿದರೆ ಈಶ್ವರನ ಪ್ರೀತಿಗೆ ಪಾತ್ರನಾಗುವನು. ||೧೯||

ಪಾಯಸಂ ಪೂರ್ಣಿಮಾತಿಥ್ಯಾಮುಪರ್ಣಾಯೈ ಪ್ರಯಚ್ಛತಿ ।
ದದಾತಿ ಚ ದ್ವಿಜಾಗ್ರ್ಯಾಯ ಪಿತ್ರೂನುದ್ಧರತೇಽಖಿಲಾನ್ ॥೨೦॥

ತತ್ತಿಥೌ ಹವನಂ ಪ್ರೋಕ್ತಂ ದೇವೀಪ್ರೀತ್ಯೈ ಮಹಾಮುನೇ ।
ತತ್ತತ್ತಿಥ್ಯುಕ್ತವಸ್ತೂನಾಮಶೇಷಾರಿಷ್ಟನಾಶನಂ ॥೨೧॥

ರವಿವಾರೇ ಪಾಯಸಂ ಚ ನೈವೇದ್ಯಂ ಪರಿಕೀರ್ತಿತಂ ।
ಸೋಮವಾರೇ ಪಯಃಪ್ರೋಕ್ತಂ ಭೌಮೇ ಚ ಕದಳೀಫಲಂ ॥೨೨॥

ಬುಧವಾರೇ ಚ ಸಂಪ್ರೋಕ್ತಂ ನವನೀತಂ ನವಂ ದ್ವಿಜ ।
ಗುರುವಾರೇ ಶರ್ಕರಾಂ ಚ ಸಿತಾಂ ಭಾರ್ಗವವಾಸರೇ ॥೨೩॥

ಶನಿವಾರೇ ಘೃತಂ ಗವ್ಯಂ ನೈವೇದ್ಯಂ ಪರಿಕೀರ್ತಿತಂ ।
ಸಪ್ತವಿಂಶತಿನಕ್ಷತ್ರ ನೈವೇದ್ಯಂ ಶ್ರೂಯತಾಂ ಮುನೇ ॥೨೪॥

---

ಪೂರ್ಣಿಮಾ ತಿಥಿಯಲ್ಲಿ ಪಾರ್ವತಿಯನ್ನುದ್ದೇಶಿಸಿ ಪಾಯಸವನ್ನು ನೈವೇದ್ಯ ಮಾಡಿ ಅದನ್ನು ಬ್ರಾಹ್ಮಣನಿಗೆ ದಾನಮಾಡಿದರೆ ಅವನ ಪಿತೃಗಳೆಲ್ಲರೂ ಮೋಕ್ಷ ವನ್ನು ಹೊಂದುವರು. ||೨೦||

ಎಲೈ ಮುನಿಶ್ರೇಷ್ಠನಾದ ನಾರದನೇ, ಆ ಪೂರ್ಣಿಮೆಯು ದಿವಸದಲ್ಲಿ ದೇವಿಯ ಸಂತೋಷಕ್ಕೋಸ್ಕರ ಆಯಾಯ ತಿಥಿಗಳಲ್ಲಿ ಹೇಳಲ್ಪಟ್ಟ ದ್ರವ್ಯಗಳಿಂದ ಹೋಮವನ್ನು ಮಾಡಿದರೆ ಎಲ್ಲಾ ಅರಿಷ್ಟಗಳೂ ನಾಶವಾಗುವುವು. ||೨೧||

ಈಗ ವಾರಪೂಜೆಯು ಹೇಳಲ್ಪಡುವುದು. ಭಾನುವಾರ ಪಾಯಸವನ್ನು ನಿವೇದಿಸಬೇಕು. ಸೋಮವಾರ ಹಾಲನ್ನೂ ಮಂಗಳವಾರ ಬಾಳೆಯಹಣ್ಣನ್ನೂ,||೨೨||

ಎಲೈ ನಾರದನೇ, ಬುಧವಾರ ಹೊಸದಾದ ಬೆಣ್ಣೆಯನ್ನೂ, ಗುರುವಾರ ಕೆಂಪು ಸಕ್ಕರೆಯನ್ನೂ, ಶುಕ್ರವಾರ ಬಿಳಿಯ ಸಕ್ಕರೆಯನ್ನೂ, ||೨೩||

ಶನಿವಾರ ಹಸುವಿನ ತುಪ್ಪವನ್ನೂ ನೈವೇದ್ಯಮಾಡಿ ಪೂಜಿಸಬೇಕು. ಇಪ್ಪತ್ತೇಳು ನಕ್ಷತ್ರಗಳಲ್ಲೂ ದೇವಿಯನ್ನು ಪೂಜಿಸುವಾಗ ಅರ್ಪಿಸಬೇಕಾದ ನೈವೇದ್ಯ ವಿಶೇಷಗಳನ್ನು ಕೇಳು. ||೨೪||

ಘೃತಂ ತಿಲಂ ಶರ್ಕರಾಂ ಚ ದಧಿ ದುಗ್ಧಂ ಕಿಲಾಟಕಂ ।
ದಧಿಕೂರ್ಚಿಕಾಂ ಮೋದಕಂ ಚ ಫೇಣಿಕಾಂ ಘೃತಮಂಡಕಂ ॥೨೫॥

ಕಂಸಾರಂ ವಟಪತ್ರಂ ಚ ಘೃತಪೂರಮತಃಪರಂ ।
ವಟಕಂ ಕೋಕರಸಕಂ ಪೂರಣಂ ಮಧುಸೂರಣಂ ॥೨೬॥

ಗುಡಂ ಪೃಥುಕೆದ್ರಾಕ್ಷೇ ಚ ಖರ್ಜೂರಂ ಚೈವ(ರಾಜ)ಚಾರಕಂ ।
ಅಪೂಪಂ ನವನೀತಂ ಚ ಮುದ್ಗಂ ಮೋದಕ ಏವ ಚ ॥೨೭॥

ಮಾತುಲುಂಗಮಿತಿ ಪ್ರೋಕ್ತಂ ಭನೈವೇದ್ಯಂ ಚ ನಾರದ ।
ವಿಷ್ಕಂಭಾದಿಷು ಯೋಗೇಷು ಪ್ರವಕ್ಷ್ಯಾಮಿ ನಿವೇದನಂ ॥೨೮॥

ಪದಾರ್ಥಾನಾಂ ಕೃತೇಷ್ವೇಷು ಪ್ರೀಣಾತಿ ಜಗದಂಬಿಕಾ ।
ಗುಡಂ ಮಧುಘೃತಂ ದುಗ್ಧಂ ದಧಿತಕ್ರಂತ್ವಪೂಪಕಂ ॥೨೯॥

---

ತುಪ್ಪ, ಎಳ್ಳು, ಸಕ್ಕರೆ, ಮೊಸರು, ಹಾಲು, ಸಕ್ಕರೆಮಿಶ್ರಿತವಾದ ಹಾಲು, ಹಾಲುಬಾಯಿ ಅಥವಾ ದೂದಪೇಡಾ, ಸಕ್ಕರೆಯಿಂದ ಕೂಡಿದ ಮೊಸರು, ಮೋದಕ, ತಾರಫೇಣೀ, ತುಪ್ಪಸಕ್ಕರೆಗಳಿಂದ ಮಾಡಿದ ಭಕ್ಷ್ಯವಿಶೇಷ, ಸಕ್ಕರೆಹೋಳಿಗೆ, ಗೋಧಿ ಹಿಟ್ಟು ಬೆಲ್ಲಗಳಿಂದ ಮಾಡಿದ ಭಕ್ಷ್ಯ, ಒಬ್ಬಟ್ಟು ಅಥವಾ ಹೋಳಿಗೆ, ಘೀವರು, ಹಪ್ಪಳ, ಪೂರಿ, ಖರ್ಜೂರ ರಸ, ಕಡಲೇಬೇಳೆ ಬೆಲ್ಲಗಳಿಂದ ಮಾಡಿದ ಭಕ್ಷ್ಯ, ಜೇನು ತುಪ್ಪ, ಹೂರಣ, ಸಜ್ಜಪ್ಪ, ಬೆಲ್ಲ, ಅವಲಕ್ಕಿ, ದ್ರಾಕ್ಷಿಹಣ್ಣು, ಖರ್ಜೂರ, ಖರ್ಜಿಗೆ ಕಡುಬು, ಅಪೂಪ, ಬೆಣ್ಣೆ, ಹೆಸರು, ಮೋದಕ, ಮಾದಳದ ಹಣ್ಣು, ಇವುಗಳು ಆಯಾಯ ನಕ್ಷತ್ರಗಳಲ್ಲಿ ಮಾಡಬೇಕಾದ ನೈವೇದ್ಯಗಳು. ಇನ್ನು ವಿಷ್ಕಂಭ ಮೊದ ಲಾದ ಯೋಗಗಳಲ್ಲಿ ಮಾಡಬೇಕಾದ ನೈವೇದ್ಯ ವಿಶೇಷಗಳನ್ನು ಹೇಳುತ್ತೇನೆ ||೨೫-೨೬-೨೭-೨೮||

ಈ ಪದಾರ್ಥಗಳನ್ನು ನಿವೇದಿಸಿದರೆ ಜಗತ್ತಿಗೆ ತಾಯಿಯಾದ ಪರಮೇಶ್ವರಿಯು ಸಂತೋಷವನ್ನು ಹೊಂದುವಳು. ಬೆಲ್ಲ, ಜೇನುತುಪ್ಪ, ತುಪ್ಪ, ಹಾಲು, ಮೊಸರು, ಮಜ್ಜಿಗೆ, ಅಪೂಪ, ಕಾಯಿಕಡುಬು, ಉದ್ದಿನಕಡುಬು, ಹುಯ್ಯಿಕಡುಬು, ಮುಂತಾ ದುವು, ||೨೯||

†

ನವನೀತಂ ಕರ್ಕಟೀಂ ಚ ಕೂಶ್ಮಾಂಡಂ ಚಾಪಿ ಮೋದಕಂ ।
ಪನಸಂ ಕದಳಂ ಜಂಬುಫಲಂ ಆಮ್ರಫಲಂ ತಿಲಂ ॥೩೦॥

ನಾರಂಗಂ ದಾಡಿಮಂ ಚೈವ ಬದರೀ ಫಲಮೇವ ಚ ।
ಧಾತ್ರೀಫಲಂ ಪಾಯಸಂ ಚ ಪೃಥುಕಂ ಚಣಕಂ ತಥಾ ॥೩೧॥

ನಾರಿಕೇಳಂ ಜಂಬುಫಲಂ ಕಸೇರುಂ ಸೂರಣಂ ತಥಾ ।
ಏತಾನಿ ಕ್ರಮಶೋ ವಿಪ್ರ ನೈವೇದ್ಯಾನಿ ಶುಭಾನಿಚ ॥೩೨॥

ವಿಷ್ಕಂಭಾದಿಷುಯೋಗೇಷು ನಿರ್ಣೀತಾನಿ ಮುನೀಷಿಭಿಃ ।
ಅಥ ನೈವೇದ್ಯಮುಖ್ಯಾಸ್ತೇ ಕರಣಾನಾಂ ಪೃಥಙ್ಮನೇ ॥೩೩॥

ಕಂಸಾರಂ ಮಂಡಕಂ ಫೇಣೀ ಮೋದಕಂ ವಟಪತ್ರಕಂ ।
ಲಡ್ಡುಕಂ ಘೃತಪೂರಂ ಚ ತಿಲಂ ದಧಿ ಘೃತಂ ಮಧು ॥೩೪॥

ಕರಣಾನಾಮಿದಂ ಪ್ರೋಕ್ತಂ ದೇವೀನೈವೇದ್ಯಮಾದರಾತ್ ।
ಅಥಾನ್ಯತ್ಸಂಪ್ರವಕ್ಷ್ಯಾಮಿ ದೇವೀಪ್ರೀತಿಕರಂ ಪರಂ ॥೩೫॥

---

ಬೆಣ್ಣೆ, ಜಾಮೂನು, ಬೂದುಗುಂಬಳಕಾಯಿ, ಮೋದಕ, ಹಲಸಿನಹಣ್ಣು, ನೇರಳೆಹಣ್ಣು, ನಿಂಬೇಹಣ್ಣು, ಮಾವಿನಹಣ್ಣು, ಎಳ್ಳು, ಅನಾನಸ್ ಅಥವಾ ಕಿತ್ತಲೆ ಹಣ್ಣು, ದಾಳಿಂಬೆಹಣ್ಣು, ಎಲಚೀಹಣ್ಣು, ನೆಲ್ಲಿಕಾಯಿ, ಪಾಯಸ, ಅವಲಕ್ಕಿ, ಕಡಲೇ ಬೇಳೆ, ಕೋಸುಂಬರಿ, ತೆಂಗಿನಕಾಯಿ ಇವುಗಳು ಕ್ರಮವಾಗಿ ಯೋಗಗಳಿಗೆ ನೈವೇದ್ಯ ಗಳು. ॥೩೦-೩೧-೩೨॥

ವಿಷ್ಕಂಭಾದಿ ಯೋಗಗಳಲ್ಲಿ ಈ ರೀತಿಯಾಗಿ ನೈವೇದ್ಯಗಳನ್ನು ಸಮರ್ಪಿಸ ಬೇಕೆಂದು ವಿದ್ವಾಂಸರು ತಿಳಿಸಿರುವರು. ಈಗ ಕರಣಗಳಲ್ಲಿ ಕ್ರಮವಾಗಿ ಸಮರ್ಪಿಸ ಬೇಕಾದ ನೈವೇದ್ಯಗಳನ್ನು ಹೇಳುವೆನು. ॥೩೩॥

ಗೋಧಿಹಿಟ್ಟು ಬೆಲ್ಲಗಳಿಂದ ಮಾಡಿದ ಭಕ್ಷ್ಯ, ಸಕ್ಕರೆತುಪ್ಪಗಳಿಂದ ಮಾಡಿದ ಭಕ್ಷ್ಯ, ಫೇಣಿ, ಮೋದಕ, ವಟಪತ್ರ, ಲಾಡು, ಘೃತಪೂರ, ಎಳ್ಳು, ಮೊಸರು, ತುಪ್ಪ, ಜೇನುತುಪ್ಪ, ॥೩೪॥

ಕರಣಗಳಲ್ಲಿ ಮಾಡಬೇಕಾದ ನೈವೇದ್ಯಗಳು ಇವುಗಳು. ದೇವಿಗೆ ಸಂತೋಷ ವನ್ನು ಕೊಡುವ ಇನ್ನೂ ಕೆಲವು ವಿಶೇಷಗಳನ್ನು ಹೇಳುವೆನು. ॥೩೫॥

ವಿಧಾನಂ ನಾರದಮುನೇ ಶೃಣು ತತ್ಸರ್ವಮಾದೃತಃ ।
ಚೈತ್ರಶುದ್ಧ ತೃತೀಯಾಯಾಂ ನರೋ ಮಧುಕವೃಕ್ಷಕಂ ॥೩೬॥

ಪೂಜಯೇತ್ಪಂಚ ಖಾದ್ಯಂ ಚ ನೈವೇದ್ಯಮುಪಕಲ್ಪಯೇತ್ ।
ಏವಂ ದ್ವಾದಶಮಾಸೇಷು ತೃತೀಯಾತಿಥಿಷು ಕ್ರಮಾತ್ ॥೩೭॥

ಶುಕ್ಲೇ ಪಕ್ಷೇ ವಿಧಾನೇನ ನೈವೇದ್ಯಮಭಿದಧ್ಮಹೇ ।
ವೈಶಾಖಮಾಸೇ ನೈವೇದ್ಯಂ ಗುಡಯುಕ್ತಂ ಚ ನಾರದ ॥೩೮॥

ಜ್ಯೇಷ್ಠಮಾಸೇ ಮಧುಯುಕ್ತಂ ದೇವೀಪ್ರೀತ್ಯರ್ಥಮೇವ ತು ।
ಆಷಾಢೇ ನವನೀತಂ ಚ ಮಧೂಕಸ್ಯ ನಿವೇದನಂ ॥೩೯॥

ಶ್ರಾವಣೇ ದಧಿ ನೈವೇದ್ಯಂ ಭಾದ್ರಮಾಸೇ ಚ ಶರ್ಕರಾ ।
ಆಶ್ವಿನೇ ಪಾಯಸಂ ಪ್ರೋಕ್ತಂ ಕಾರ್ತಿಕೇ ಪಯ ಉತ್ತಮಂ ॥೪೦॥

---

ಎಲೈ ನಾರದಮಹರ್ಷಿಯೇ, ಇವೆಲ್ಲವನ್ನೂ ಅಕ್ಕರೆಯಿಂದ ಕೇಳು. ಚೈತ್ರ ಶುಕ್ಲ ತೃತೀಯೆಯಲ್ಲಿ ಮನುಷ್ಯನು ಮಧುವೃಕ್ಷವನ್ನು ॥೩೬॥

ಪೂಜಿಸಿ ಐದು ವಿಧವಾದ ನೈವೇದ್ಯವನ್ನು ಸಮರ್ಪಿಸಬೇಕು. ಇದೇ ರೀತಿ ಯಲ್ಲಿ ಹನ್ನೆರಡು ತಿಂಗಳಲ್ಲೂ ತೃತೀಯೆಯ ದಿವಸ ಪೂಜಿಸಬೇಕು. ॥೩೭॥

ಪ್ರತಿ ಶುಕ್ಲಪಕ್ಷದ ತೃತೀಯೆಯಲ್ಲೂ ಈ ರೀತಿಯಲ್ಲಿ ಪೂಜಿಸುವಾಗ ನೈವೇದ್ಯ ವಿಶೇಷವನ್ನು ಹೇಳುವೆನು. ವೈಶಾಖಮಾಸದಲ್ಲಿ ಬೆಲ್ಲದಿಂದ ಕೂಡಿದ ನೈವೇದ್ಯವನ್ನು ಸಮರ್ಪಿಸಬೇಕು. ॥೩೮॥

ದೇವಿಯ ಸಂತೋಷಕ್ಕೋಸ್ಕರವಾಗಿ ಜ್ಯೇಷ್ಠಮಾಸದಲ್ಲಿ ಜೇನುತುಪ್ಪವನ್ನೂ ಆಷಾಢದಲ್ಲಿ ಬೆಣ್ಣೆಯನ್ನೂ, ಮಧುವೃಕ್ಷಕ್ಕೆ ನೈವೇದ್ಯವನ್ನಾಗಿ ಸಮರ್ಪಿಸಬೇಕು. ॥೩೯॥

ಶ್ರಾವಣದಲ್ಲಿ ಮೊಸರನ್ನೂ ಭಾದ್ರಪದ ಮಾಸದಲ್ಲಿ ಸಕ್ಕರೆಯನ್ನೂ, ಆಶ್ವ ಯುಜದಲ್ಲಿ ಪಾಯಸವನ್ನೂ, ಕಾರ್ತೀಕ ಮಾಸದಲ್ಲಿ ಒಳ್ಳೆಯ ಹಸುವಿನ ಹಾಲನ್ನೂ ನೈವೇದ್ಯವನ್ನಾಗಿ ಸಮರ್ಪಿಸಬೇಕು. ॥೪೦॥

ಮಾರ್ಗೇ ಫೇಣ್ಯುತ್ತಮಾ ಪ್ರೋಕ್ತಾ ಪೌಷೇ ಚ ದಧಿ ಕೂರ್ಚಿಕಾ ।
ಮಾಘೇ ಮಾಸಿ ಚ ನೈವೇದ್ಯಂ ಘೃತಂ ಗವ್ಯಂ ಸಮಾಹರೇತ್ ॥೪೧॥

ನಾರಿಕೇಳಂ ಚ ನೈವೇದ್ಯಂ ಫಾಲ್ಗುನೇ ಪರಿಕೀರ್ತಿತಂ ।
ಏವಂ ದ್ವಾದಶನೈವೇದ್ಯೈರ್ಮಾಸೇ ಚ ಕ್ರಮತೋಽರ್ಚಯೇತ್ ॥೪೨॥

ಮಂಗಳಾ ವೈಷ್ಣವೀ ಮಾಯಾ ಕಾಲರಾತ್ರಿರ್ದುರತ್ಯಯಾ ।
ಮಹಾಮಾಯಾ ಮತಂಗೀ ಚ ಕಾಳೀ ಕಮಲವಾಸಿನೀ ॥೪೩॥

ಶಿವಾ ಸಹಸ್ರಚರಣಾ ಸರ್ವಮಂಗಳರೂಪಿಣೀ ।
ಏಭಿರ್ನಾಮಪದೈರ್ದೇವೀಂ ಮಧೂಕೇ ಪರಿಪೂಜಯೇತ್ ॥೪೪॥

ತತಃ ಸ್ತುವೀತ ದೇವೇಶೀಂ ಮಧೂಕಸ್ಥಾಂ ಮಹೇಶ್ವರೀಂ ।
ಸರ್ವಕರ್ಮಸಮೃದ್ಧ್ಯರ್ಥಂ ವ್ರತಪೂರ್ಣತ್ವಸಿದ್ಧಯೇ ॥೪೫॥

---

ಮಾರ್ಗಶೀರ್ಷಮಾಸದಲ್ಲಿ ಫೇಣಿಯನ್ನು ನಿವೇದಿಸುವುದು ಉತ್ತಮವಾದ ನೈವೇದ್ಯವು. ಪುಷ್ಯದಲ್ಲಿ ಸಕ್ಕರೆಯಿಂದ ಕೂಡಿದ ಮೊಸರನ್ನೂ, ಮಾಘಮಾಸದಲ್ಲಿ ಹಸುವಿನ ತುಪ್ಪವನ್ನೂ ನಿವೇದಿಸಬೇಕು. ॥೪೧॥

ಫಾಲ್ಗುನಮಾಸದಲ್ಲಿ ತೆಂಗಿನಕಾಯಿಯನ್ನು ನಿವೇದಿಸಬೇಕು. ಈ ಪ್ರಕಾರ ವಾಗಿ ಹನ್ನೆರಡುಮಾಸಗಳಲ್ಲೂ ಹನ್ನೆರಡು ಬಗೆಯ ನೈವೇದ್ಯಗಳಿಂದ ಕ್ರಮವಾಗಿ ಪೂಜಿಸತಕ್ಕದ್ದು. ॥೪೨॥

ಮಧುವೃಕ್ಷವನ್ನು ಹನ್ನೆರಡುತಿಂಗಳಲ್ಲೂ ಮಂಗಳಾ, ವೈಷ್ಣವೀ ಮುಂತಾದ ಹನ್ನೆರಡು ನಾಮವಿಶೇಷಗಳಿಂದ ಪೂಜಿಸಬೇಕು. ॥೪೩-೪೪॥

ಆ ಮೇಲೆ ಮಧುವೃಕ್ಷದಲ್ಲಿ ಸನ್ನಿಹಿತಳಾದ ಪರಮೇಶ್ವರಿಯನ್ನು ತಾನು ಆಚರಿಸಿದ ವ್ರತವು ಸಾಂಗವಾಗುವುದಕ್ಕೋಸ್ಕರವೂ, ತನಗೆ ಎಲ್ಲಾ ಇಷ್ಟಾರ್ಥಗಳೂ ಸಿದ್ಧಿಸುವುದಕ್ಕೋಸ್ಕರವೂ, ಈ ಪ್ರಕಾರವಾಗಿ ಸ್ತುತಿಸಬೇಕು. ॥೪೫॥

ನಮಃ ಪುಷ್ಕರನೇತ್ರಾಯೈ ಜಗದ್ಧಾತ್ರ್ಯೈ ನಮೋಽಸ್ತುತೇ ।
ಮಾಹೇಶ್ವರ್ಯೈ ಮಹಾದೇವ್ಯೈ ಮಹಾಮಂಗಳಮೂರ್ತಯೇ ॥೪೬॥

ಪರಮಾ ಪಾಪಹಂತ್ರೀ ಚ ಪರಮಾರ್ಗಪ್ರದಾಯಿನೀ ।
ಪರಮೇಶ್ವರೀ ಪ್ರಜೋತ್ಪತ್ತಿಃ ಪರಬ್ರಹ್ಮಸ್ವರೂಪಿಣೀ ॥೪೭॥

ಮದದಾತ್ರೀ ಮದೋನ್ಮತ್ತಾ ಮಾನಗಮ್ಯಾ ಮಹೋನ್ನತಾ ।
ಮನಸ್ವಿನೀ ಮುನಿಧ್ಯೇಯಾ ಮಾರ್ತಂಡಸಹಚಾರಿಣೀ ॥೪೮॥

ಜಯ ಲೋಕೇಶ್ವರಿ ಪ್ರಾಜ್ಞೇ ಪ್ರಲಯಾಂಬುದಸನ್ನಿಭೇ ।
ಮಹಾಮೋಹ ವಿನಾಶಾರ್ಥಂ ಪೂಜಿತಾಽಸಿ ಸುರಾಸುರೈಃ ॥೪೯॥

ಯಮಲೋಕಾಭಾವಕರ್ತ್ರೀ ಯಮಪೂಜ್ಯಾ ಯಮಾಗ್ರಜಾ ।
ಯಮನಿಗ್ರಹರೂಪಾ ಚ ಯಮನೀಯೇ ನಮೋನಮಃ ॥೫೦॥

---

ಓ, ಕಮಲದಂತೆ ಕಣ್ಣುಳ್ಳವಳೇ, ಜಗನ್ಮಾತೆಯೇ, ಪ್ರಪಂಚವನ್ನು ಧರಿಸಿ ಕಾಪಾಡುವವಳೇ, ಪರಮೇಶ್ವರಿಯೇ, ಮಹಾದೇವಿಯೇ, ಅದ್ಭುತವಾದ ಶುಭಸ್ವರೂಪವುಳ್ಳವಳೇ, ನಿನಗೆ ನಮಸ್ಕಾರವು. ॥೪೬॥

ನೀನು ಶ್ರೇಷ್ಠಳೂ, ಪಾಪವನ್ನು ಪರಿಹರಿಸತಕ್ಕವಳೂ, ಶ್ರೇಷ್ಠವಾದ ಮೋಕ್ಷಮಾರ್ಗವನ್ನ ತಿಳಿಯಿಸಿಕೊಡುವವಳೂ, ಪರಮೇಶ್ವರಿಯೂ, ಪ್ರಪಂಚದ ಉತ್ಪತ್ತಿಗೆ ಕಾರಣಭೂತಳೂ, ಪರಬ್ರಹ್ಮಸ್ವರೂಪಿಣಿಯೂ ಆಗಿರುತ್ತೀಯೆ. ॥೪೭॥

ನೀನು ಮದಜನಕಳೂ, ಹೆಚ್ಚಾದ ಉತ್ಸಾಹಸಾಮರ್ಥ್ಯವುಳ್ಳವಳೂ, ಮಹಾಮಹಿಮಳೂ, ಸ್ವೇಚ್ಛಾಪ್ರವೃತ್ತಿಯುಳ್ಳವಳೂ, ಮುನಿಗಳಿಂದ ಧ್ಯಾನಮಾಡಲ್ಪಟ್ಟವಳೂ, ಸೂರ್ಯಮಂಡಲದಲ್ಲಿ ಸ್ಥಾನವುಳ್ಳವಳೂ, ಆಗಿರುವೆ. ॥೪೮॥

ಓ ಪ್ರಪಂಚಕ್ಕೆಲ್ಲಕ್ಕೂ ಒಡೆಯಳೇ, ಹೆಚ್ಚಾದ ಉತ್ತಮವಾದ ಜ್ಞಾನವುಳ್ಳವಳೇ, ಪ್ರಳಯಕಾಲದ ಮೇಘದಂತೆ ಕಾಂತಿಯುಳ್ಳವಳೇ, ಸಮಸ್ತವಾದ ಅಜ್ಞಾನವು ನಾಶವಾಗುವುದಕ್ಕೋಸ್ಕರ ರಾಕ್ಷಸರಿಂದಲೂ, ದೇವತೆಗಳಿಂದಲೂ, ನೀನು ಪೂಜಿಸಲ್ಪಟ್ಟಿರುತ್ತೀಯೆ. ॥೪೯॥

ಯಮಲೋಕಭಯವಿಲ್ಲದಂತೆ ಮಾಡುವವಳೂ, ಯಮನಿಂದಲೂ ಪೂಜಿಸಲ್ಪಟ್ಟಿರುವವಳೂ, ಯಮನಿಗಿಂತ ಹಿರಿಯಳೂ, ಕಡೆಯಲ್ಲಿ ಯಮನನ್ನೂ ಸಹ

ಸಮುಸ್ವಭಾವಾ ಸರ್ವೇಶೀ ಸರ್ವಸಂಗವಿವರ್ಜಿತಾ ।
ಸಂಗನಾಶಕರೀ ಕಾಮ್ಯರೂಪಾ ಕಾರುಣ್ಯವಿಗ್ರಹಾ ॥೫೧॥

ಕಂಕಾಲಕ್ರೂರಾ ಕಾಮಾಕ್ಷೀ ಮೀನಾಕ್ಷೀ ಮರ್ಮಭೇದಿನೀ ।
ಮಾಧುರ್ಯರೂಪಶೀಲಾ ಚ ಮಧುರಸ್ವರ ಪೂಜಿತಾ ॥೫೨॥

ಮಹಾಮಂತ್ರವತೀ ಮಂತ್ರಗಮ್ಯಾ ಮಂತ್ರಪ್ರಿಯಂಕರೀ ।
ಮನುಷ್ಯಮಾನಸಗಮಾ ಮನ್ಮಥಾರಿ ಪ್ರಿಯಂಕರೀ ॥೫೩॥

ಅಶ್ವತ್ಥವಟ ನಿಂಬಾಮ್ರ ಕಪಿತ್ಥ ಬದರೀಗತೇ ।
ಪನಸಾರ್ಕಕರೀರಾದಿ ಕ್ಷೀರವೃಕ್ಷಸ್ವರೂಪಿಣೀ ॥೫೪॥

---

ನಿಗ್ರಹಿಸುವವಳೂ, ಯಜ್ಞಗಳಿಂದ ತೃಪ್ತಿಪಡಿಸುವುದಕ್ಕೆ ಯೋಗ್ಯಳೂ, ಆಗಿರುವ ನಿನಗೆ ನಮಸ್ಕಾರವು. ॥೫೦॥

ಒಂದೇವಿಧವಾದ ಸ್ವಭಾವವುಳ್ಳವಳೂ, ಸರ್ವಶಕ್ತಳೂ, ಸರ್ವಸಂಗಪರಿತ್ಯಾಗವನ್ನು ಮಾಡಿದವಳೂ, ನಾನು ನನ್ನದು ಎಂಬ ಅಭಿಮಾನವಿಲ್ಲದವಳೂ, ಅಂತಹ ಸಂಗವನ್ನು ವಿನಾಶಮಾಡುವವಳೂ, ಇಚ್ಛೆಬಂದಂತೆ ಸ್ವೀಕರಿಸುವ ರೂಪವುಳ್ಳವಳೂ, ದಯಾಮೂರ್ತಿಯೂ, ಆದ ನಿನಗೆ ನಮಸ್ಕಾರವು. ॥೫೧॥

ಕಾಮಾಕ್ಷಿಯೇ, ಮೀನಾಕ್ಷಿಯೇ, ರಹಸ್ಯವಾದ ತತ್ವಗಳನ್ನೂ ತಿಳಿದಿರುವವಳೇ, ಮನೋಹರವಾದ ರೂಪವೂ, ಸ್ವಭಾವವೂ ಉಳ್ಳವಳೇ, ಓಂಕಾರದ ಜಪ, ಧ್ಯಾನ ಇವುಗಳಿಂದ ಪೂಜಿಸಲ್ಪಟ್ಟು ಇರುವವಳೇ, ನಿನಗೆ ನಮಸ್ಕಾರವು. ॥೫೨॥

ಮಹಾಮಂತ್ರಗಳನ್ನೂ ತಿಳಿದಿರುವ ಮಂತ್ರಗಳಿಂದ ಸಾಕ್ಷಾತ್ಕರಿಸಲ್ಪಡುವ, ಮಂತ್ರಜ್ಞರಿಗೆ ಹಿತವನ್ನುಂಟುಮಾಡುವ, ಮನುಷ್ಯರ ಮನಸ್ಸನ್ನು ತಿಳಿದಿರುವ ಈಶ್ವರನಿಗೆ, ಸಂತೋಷವನ್ನುಂಟುಮಾಡುವ ನಿನಗೆ ನಮಸ್ಕಾರವು. ॥೫೩॥

ಅಶ್ವತ್ಥ, ಆಲ, ನಿಂಬೆ, ಮಾವು, ಬೇಲ, ಎಲಚೀ (ಬದರೀ) ಇವುಗಳಲ್ಲಿ ಸನ್ನಿಹಿತಳಾದ, ಹಲಸು, ಅರ್ಕ (ಎಕ್ಕ) ಕರೀರ, ಈ ಕ್ಷೀರ ವೃಕ್ಷಗಳಲ್ಲೂ ಸಾನ್ನಿಧ್ಯವನ್ನು ಹೊಂದಿರುವ ನಿನಗೆ ನಮಸ್ಕಾರವು. ॥೫೪॥

ದುಗ್ಧವಲ್ಲೀನಿವಾಸಾರ್ಹೇ ದಯನೀಯೇ ದಯಾಧಿಕೇ ।
ದಾಕ್ಷಿಣ್ಯಾ ಕರುಣಾರೂಪೇ ಜಯಸರ್ವಜ್ಞವಲ್ಲಭೇ ॥೫೫॥

ಏವಂಸ್ತವೇನ ದೇವೇಶೀಂ ಪೂಜನಾಂತೇ ಸ್ತುವೀತ ತಾಂ ।
ವ್ರತಸ್ಯ ಸಕಲಂ ಪುಣ್ಯಂ ಲಭತೇ ಸರ್ವದಾ ನರಃ ॥೫೬॥

ನಿತ್ಯಂ ಯಃ ಪಠತೇ ಸ್ತೋತ್ರಂ ದೇವೀಪ್ರೀತಿಕರಂ ನರಃ ।
ಆಧಿವ್ಯಾಧಿಭಯಂ ನಾಸ್ತಿ ರಿಪುಭೀತಿರ್ನ ತಸ್ಯ ಹಿ ॥೫೭॥

ಅರ್ಥಾರ್ಥೀ ಚಾರ್ಥಮಾಪ್ನೋತಿ
ಧರ್ಮಾರ್ಥೀ ಧರ್ಮಮಾಪ್ನುಯಾತ್ ।
ಕಾಮಾನವಾಪ್ನುಯಾತ್ಕಾಮೀ
ಮೋಕ್ಷಾರ್ಥೀ ಮೋಕ್ಷಮಾಪ್ನುಯಾತ್ ॥೫೮॥

---

ಕ್ಷೀರವೃಕ್ಷ, ವಲ್ಲೀವೃಕ್ಷಗಳಲ್ಲಿ ವಾಸಿಸುವ, ಕರುಣಾಶಾಲಿಯಾದ, ಹೆಚ್ಚಾದ ದಯೆಯನ್ನು ತೋರಿಸುವ ದಾಕ್ಷಿಣ್ಯದಯೆಗಳಿಂದ ಕೂಡಿರುವ ಪರಮೇಶ್ವರಪತ್ನಿಯಾದ ಪಾರ್ವತಿಯೇ, ನಿನಗೆ ಜಯವಾಗಲಿ. ॥೫೫॥

ಈ ರೀತಿಯಲ್ಲಿ ಸ್ತೋತ್ರಗಳಿಂದ ದೇವಿಯನ್ನು ಪೂಜಾವಸಾನದಲ್ಲಿ ಸ್ತುತಿಸುವುದರಿಂದ, ಮನುಷ್ಯನು ವ್ರತದ ಎಲ್ಲ ಪುಣ್ಯಫಲವನ್ನೂ ಯಾವಾಗಲೂ ಹೊಂದುವನು. ॥೫೬॥

ಯಾವ ಮನುಷ್ಯನು ಪ್ರತಿದಿವಸದಲ್ಲೂ ದೇವಿಗೆ ಸಂತೋಷವನ್ನುಂಟುಮಾಡುವ ಈ ಸ್ತೋತ್ರವನ್ನು ಪಠಿಸುವನೋ ಅವನಿಗೆ ಮನೋವ್ಯಥೆಯೂ, ರೋಗಭಯವೂ ಶತ್ರುಭೀತಿಯೂ ಇರುವುದಿಲ್ಲ. ॥೫೭॥

ಮತ್ತು ಧನವನ್ನಪೇಕ್ಷಿಸುವವನು ಧನವನ್ನೂ, ಧರ್ಮವನ್ನು ಅಪೇಕ್ಷಿಸುವವನು ಧರ್ಮವನ್ನೂ, ಕಾಮದ ಅಭಿಲಾಷೆಯುಳ್ಳವನು ಕಾಮವನ್ನೂ, ಮೋಕ್ಷಾಪೇಕ್ಷೆಯುಳ್ಳವನು ಮೋಕ್ಷವನ್ನೂ ಹೊಂದುವನು. ॥೫೮॥

ಬ್ರಾಹ್ಮಣೋ ವೇದಸಂಪನ್ನೋ ವಿಜಯೀ ಕ್ಷತ್ರಿಯೋ ಭವೇತ್ ।
ವೈಶ್ಯಶ್ಚ ಧನಧಾನ್ಯಾಢ್ಯೋ ಭವೇಚ್ಛೂದ್ರಸ್ಸುಖಾಧಿಕಃ ॥೫೯॥

ಸ್ತೋತ್ರಮೇತಚ್ಛ್ರಾದ್ಧಕಾಲೇ ಯಃ ಪಠೇತ್ಪ್ರಯತೋ ನರಃ ।
ಪಿತೄಣಾಮಕ್ಷಯಾ ತೃಪ್ತಿರ್ಜಾಯತೇ ಕಲ್ಪವರ್ತಿನೀ ॥೬೦॥

ಏವಮಾರಾಧನಂ ದೇವ್ಯಾಃ ಸಮುಕ್ತಂ ಸುರಪೂಜಿತಂ ।
ಯಃ ಕರೋತಿ ನರೋ ಭಕ್ತ್ಯಾ ಸ ದೇವೀಲೋಕಭಾಗ್ಭವೇತ್ ॥೬೧॥

ದೇವೀಪೂಜನತೋ ವಿಪ್ರ ಸರ್ವೇ ಕಾಮಾ ಭವಂತಿ ಹಿ ।
ಸರ್ವಪಾಪಹತಿಃ ಶುದ್ಧಾ ಮತಿರಂತೇ ಪ್ರಜಾಯತೇ ॥೬೨॥

ಯತ್ರ ತತ್ರ ಭವೇತ್ಪೂಜ್ಯೋ ಮಾನ್ಯೋ ಮಾನಧನೇಷು ಚ ।
ಜಾಯತೇ ಜಗದಂಬಾಯಾಃ ಪ್ರಸಾದೇನ ವಿರಿಂಚಿಜ ॥೬೩॥

---

ಬ್ರಾಹ್ಮಣನು ವೇದಗಳನ್ನು ತಿಳಿದವನೂ, ಕ್ಷತ್ರಿಯನು ಜಯಶಾಲಿಯೂ, ವೈಶ್ಯನು ಧನಧಾನ್ಯಸಮೃದ್ಧನೂ, ಶೂದ್ರನು ಅಧಿಕಸುಖಿಯೂ ಆಗುವನು. ॥೫೯॥

ಯಾವ ಮನುಷ್ಯನು ಶ್ರಾದ್ಧಸಮಯದಲ್ಲಿ ಶುಚಿರ್ಭೂತನಾಗಿ ಈ ಸ್ತೋತ್ರವನ್ನು ಪಠಿಸುವನೋ ಅವನ ಪಿತೃಗಳಿಗೆ ಕಲ್ಪಾಂತದವರೆಗೂ ಶಾಶ್ವತವಾದ ತೃಪ್ತಿಯುಂಟಾಗುವುದು. ॥೬೦॥

ಈ ಪ್ರಕಾರವಾಗಿ ದೇವತೆಗಳಿಂದಲೂ ಪೂಜಿಸಲ್ಪಡುವಂತೆ ಮಾನ್ಯವಾಗಿರುವ ದೇವಿಯ ಆರಾಧನವು ಹೇಳಲ್ಪಟ್ಟಿತು. ಯಾವ ಮನುಷ್ಯನು ಭಕ್ತಿಯಿಂದ ಹೀಗೆ ಪೂಜಿಸುವನೋ ಅವನು ದೇವಿಯ ಸಾಯುಜ್ಯವನ್ನು ಹೊಂದುವನು. ॥೬೧॥

ಎಲೈ ನಾರದನೇ, ದೇವಿಯನ್ನು ಪೂಜಿಸುವುದರಿಂದ ಎಲ್ಲ ಬಗೆಯ ಅಪೇಕ್ಷೆಗಳೂ ನೆರವೇರುವುವು. ಕೊನೆಯಲ್ಲಿ ಎಲ್ಲಾ ಪಾಪಗಳೂ ನಾಶಹೊಂದಿ ಶುದ್ಧಜ್ಞಾನವುಂಟಾಗುವುದು. ॥೬೨॥

ಎಲೈ ಬ್ರಹ್ಮಪುತ್ರನಾದ ನಾರದನೇ, ದೇವಿಯ ಅನುಗ್ರಹದಿಂದ ಮನುಷ್ಯನು ಪೂಜ್ಯರ ಸನ್ನಿಧಾನದಲ್ಲಿಯೂ ಪೂಜಿಸಲ್ಪಡುವನು. ಮಾನವಂತರಲ್ಲಿಯೂ ಮಾನ್ಯನೂ ಆಗುವನು. ॥೬೩॥

ನರಕಾಣಾಂ ನ ತಸ್ಯಾಽಸ್ತಿ ಭಯಂ ಸ್ವಪ್ನೇಽಪಿ ಕುತ್ರಚಿತ್ ।
ಮಹಾಮಾಯಾಪ್ರಸಾದೇನ ಪುತ್ರಪೌತ್ರಾದಿವರ್ಧನಃ ॥೬೪॥

ದೇವೀಭಕ್ತೋ ಭವತ್ಯೇವ ನಾಽತ್ರಕಾರ್ಯಾ ವಿಚಾರಣಾ ।
ಇತ್ಯೇವಂ ತೇ ಸಮಾಖ್ಯಾತಂ ನರಕೋದ್ಧಾರಲಕ್ಷಣಂ ॥೬೫॥

ಪೂಜನಂ ಹಿ ಮಹಾದೇವ್ಯಾಃ ಸರ್ವಮಂಗಳಕಾರಕಂ ।
ಮಧೂಕಪೂಜನಂ ತದ್ವನ್ಮಾಸಾನಾಂ ಕ್ರಮತೋ ಮುನೇ ॥೬೬॥

ಸರ್ವಂ ಸಮಾಚರೇದ್ಯಸ್ತು ಪೂಜನಂ ಮಧುಕಾಹ್ವಯಂ ।
ನ ತಸ್ಯ ರೋಗಬಾಧಾದಿ ಭಯಮುದ್ಭವತೇಽನಘ ॥೬೭॥

ಅಥಾನ್ಯದಪಿ ವಕ್ಷ್ಯಾಮಿ ಪ್ರಕೃತೇಃ ಪಂಚಕಂ ಪರಂ ।
ನಾಮ್ನಾ ರೂಪೇಣ ಚೋತ್ಪತ್ತ್ಯಾ ಜಗದಾನಂದದಾಯಕಂ ॥೬೮॥

---

ಅವನಿಗೆ ಸ್ವಪ್ನದಲ್ಲೂ ಕೂಡ ಯಾವಾಗಲೂ ನರಕಭಯವು ಇರುವುದಿಲ್ಲ. ಅಲ್ಲದೆ ಮಹಾಮಾಯೆಯ ಅನುಗ್ರಹದಿಂದ ಪುತ್ರಪೌತ್ರಾದಿಗಳ ಅಭಿವೃದ್ಧಿಯು ಉಂಟಾಗುವುದು. ||೬೪||

ಅಂತಹ ಮನುಷ್ಯನು ದೇವಿಗೆ ನಿಜವಾದ ಭಕ್ತನಾಗುವನು. ಈ ವಿಷಯದಲ್ಲಿ ಸಂದೇಹವಿಲ್ಲವು. ಈ ಪ್ರಕಾರವಾಗಿ ನರಕದಿಂದ ಬಿಡುಗಡೆ ಹೊಂದಲು ಸಾಧನವಾದ ದೇವಿಯ ಪೂಜಾವಿಧಾನವು ಹೇಳಲ್ಪಟ್ಟಿತು. ||೬೫||

ಎಲೈ ನಾರದನೇ, ಸಮಸ್ತಶುಭಗಳನ್ನೂ ಕೊಡುವ ಪರಮೇಶ್ವರಿಯ ಪೂಜಾ ವಿಧಾನವೂ, ಹಾಗೆಯೇ ಮಧುವೃಕ್ಷದ ಪೂಜೆಯೂ ಮಾಸಗಳಿಗೆ ಸಂಬಂಧಿಸಿದ ಪೂಜೆಯೂ ಸಹ ಕ್ರಮವಾಗಿ ಹೇಳಲ್ಪಟ್ಟಿತು. ||೬೬||

ಎಲೈ ಪರಿಶುದ್ಧನಾದ ನಾರದನೇ, ಯಾವನು ಮಧುಪೂಜೆಯೆಂಬ ಈ ಪೂಜೆಯನ್ನು ಮಾಡುವನೋ ಅವನಿಗೆ ರೋಗಾದಿಗಳಿಂದ ಯಾವ ಭಯವೂ ಇರುವುದಿಲ್ಲವು. ||೬೭||

ಈಗ ಜಗತ್ತಿಗೆ ಸಂತೋಷವನ್ನು ಕೊಡುವ ಮಹಾಶಕ್ತಿಯಿಂದ ಉತ್ಪನ್ನವಾದ ಪ್ರಕೃತಿಯ ಪಂಚಕಗಳನ್ನು, ಅವುಗಳ ಹೆಸರು, ರೂಪ, ಉತ್ಪತ್ತಿಗಳನ್ನೂ ಸಹ ಹೇಳುವೆನು. ||೬೮||

**ಸಾಖ್ಯಾನಂ ಚ ಸಮಾಹಾತ್ಮ್ಯಂ ಪ್ರಕೃತೇಃ ಪಂಚಕಂ ಮುನೇ ।**
**ಕುತೂಹಲಕರಂ ಚೈವ ಶ್ರುಣು ಮುಕ್ತಿವಿಧಾಯಕಂ ॥೬೯॥**

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಅಷ್ಟಮಸ್ಕಂಧೇ ಚತುರ್ವಿಂಶೋಽಧ್ಯಾಯಃ.**

## ಇತಿ ಅಷ್ಟಮಃ ಸ್ಕಂಧಃ ಸಮಾಪ್ತಃ

---

ಎಲೈ ನಾರದನೇ, ಮನಸ್ಸಿಗೆ ಆಶ್ಚರ್ಯವನ್ನುಂಟುಮಾಡುವ ಮೋಕ್ಷಕ್ಕೆ ಸಾಧನವಾದ ಪ್ರಕೃತಿಪಂಚಕಗಳನ್ನೂ ಅದಕ್ಕೆ ಸಂಬಂಧಪಟ್ಟ ಪೂರ್ವಕಥೆಯನ್ನೂ ಮಹಿಮೆಗಳನ್ನೂ ಸಹ ಕೇಳುವವನಾಗು. ॥೬೯॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಎಂಟನೆಯ ಸ್ಕಂಧದಲ್ಲಿ ಇಪ್ಪತ್ತುನಾಲ್ಕನೆಯ ಅಧ್ಯಾಯವು ಮುಗಿದುದು.

## ಹೀಗೆ ಎಂಟನೆಯ ಸ್ಕಂಧವೂ ಮುಗಿಯಿತು.

---

**ಮಹೀಶೂರಾಧಿಪ ಜಯಚಾಮರಾಜೇಂದ್ರ ಶಾಸನಾತ್ ।**
ದೇವೀಭಾಗವತಸ್ಯಾನುವಾದಂ ಕನ್ನಡಭಾಷಯಾ ।
ಸುಬ್ಬಮ್ಮಾಂಬಾ ದೇವಯಜ್ವ ತನಯಃ ಚಂದ್ರಶೇಖರಃ ।
ಜನಾನಾಮುಪಕಾರಾಯ ರಚಯಾಮಾಸ ಸಾದರಂ ॥

ಈಶಸೇವಾಂ ದೇಶಸೇವಾಂ ಭಾಷಾಸೇವಾಂ ಮಯಾ ಕೃತಾಂ ।
ಸ್ವೀಕೃತ್ಯ ತುಷ್ಯತು ಗುರುಃ ದೇವೋ ರಾಜಾ ಚ ಭಾರತೀ ।
ಸೇವಿತಾಽವತು ಸಾ ದೇವೀ ಸರ್ವಶಕ್ತಿಸ್ವರೂಪಿಣೀ ।
ಪ್ರಾಣಿಕರ್ಮವಶಾತ್ ಬ್ರಹ್ಮಣೀಚ್ಛಾಜ್ಞಾನಕ್ರಿಯಾತ್ಮಿಕಾ ॥

ಪ್ರಭುಸಂಮಿತವೇದೈಶ್ಚ
ಮಿತ್ರಸ್ಸಂಮಿತಪುರಾಣಶಾಸ್ತ್ರೈಶ್ಚ ।
ಕಾಂತಾಸಂಮಿತಕಾವ್ಯೈಃ
ಉಪದಿಷ್ಟೋ ಧರ್ಮ ಏವ ಮಾಂ ಪಾತು ॥

---